# ಜಾಗತೀಕರಣ, ಶಿಕ್ಷಣ ಮತ್ತು ಸಮಾಜ

ಜೆ.ಎಸ್.ಜಯದೇವ

ಅಭಿರುಚಿ ಪ್ರಕಾಶನ
386, 14ನೆಯ ಮುಖ್ಯರಸ್ತೆ, 3ನೆಯ ಅಡ್ಡರಸ್ತೆ,
ಸರಸ್ವತೀಪುರಂ, ಮೈಸೂರು – 5700 09

**JAGATHIKARANA, SHIKSHANA MATTHU SAMAJA**

**(A Few Perspectives on Education and Society) by G.S.Jayadeva**

Deenabandhu Trust, Behind Forest Department Nursary
Chamrajanagara - 571313.ph-9449406454



Pages - 168, Rs. 145
First Impression - 2015
Second Impression - 2019
Size : 1/8 Demy
Used paper : 70 gsm maplitho

**ಜಾಗತೀಕರಣ, ಶಿಕ್ಷಣ ಮತ್ತು ಸಮಾಜ**

ಮೊದಲ ಮುದ್ರಣ : 2015
ಎರಡನೇ ಮುದ್ರಣ : 2019

ಪ್ರಕಾಶಕರು : 'ಅಭಿರುಚಿ' ಗಣೇಶ್
ಬೆಲೆ : ಒಂದುನೂರ ನಲವತ್ತೈದು ರೂಪಾಯಿಗಳು
ಮುಖಪುಟ ವಿನ್ಯಾಸ : ಕೆ.ಜೆ. ಸಚ್ಚಿದಾನಂದ
ಅಕ್ಷರ ಜೋಡಣೆ : ಅಭಿರುಚಿ ಪ್ರಕಾಶನ
ಮುದ್ರಣ: ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು-560 018

# ಮುನ್ನುಡಿ

'ರಚನೆ'ಗಳು (construct) ನಮಗೆ ಬೇಕು. ಬಹುಶಃ ಏನನ್ನೂ ರಚಿಸಿಕೊಳ್ಳದೆ ನಾವು ಏನನ್ನೂ ಮಾಡಲಾರೆವು. ಆದರೆ ಯಾವ ಉದ್ದೇಶಕ್ಕಾಗಿ ನಾವು ರಚನೆಗಳನ್ನು ನಿರ್ಮಿಸಿಕೊಳ್ಳುತ್ತೇವೆಯೋ ಅದರ ವಿರುದ್ಧ ಹಿಡಿತಕ್ಕೆ ಸಿಗದಂತೆ ಬೆಳೆದುಬಿಡುವುದು ಈ ರಚನೆಗಳ ವೈಲಕ್ಷಣ್ಯವಿರಬೇಕು. ಆಗ ಅದರ 'ವಿರಚನೆ'ಗಾಗಿ ಹೋರಾಟವನ್ನು ಮಾಡಲೇಬೇಕಾದ ಅನಿವಾರ್ಯತೆಗೆ ತಲುಪಿಬಿಡುತ್ತೇವೆ. ಪ್ರೊ. ಜಿ.ಎಸ್. ಜಯದೇವ ಅವರ ಶೈಕ್ಷಣಿಕ ವಿವೇಚನೆಗೆ ಪ್ರಸ್ತುತ ಕೃತಿಯಲ್ಲಿ ಮುಖಾಮುಖಿಯಾದಾಗ, ಶಿಕ್ಷಣದ ವಿಷಯದಲ್ಲಿ ಈ ಮಾತು ಹೆಚ್ಚು ನಿಜವೇನೋ ಎನ್ನಿಸತೊಡಗಿತು. ಆಧುನಿಕ ಶತಮಾನ ಮತ್ತು ಆಧುನಿಕ ಸಂದರ್ಭ ಶಿಕ್ಷಣಕ್ಕೆ ತೆರೆದುಕೊಂಡ ಬಗೆ ಒಂದು ರೀತಿಯಲ್ಲಿ ನಿಜಕ್ಕೂ ವಿಸ್ಮಯ. ನಿಜವಾದ ಅರ್ಥದಲ್ಲಿ ಶಿಕ್ಷಣ ಸಾರ್ವಜನಿಕವಾದದ್ದು, ಅದರ ಸಾರ್ವತ್ರೀಕರಣ ಸಾಧ್ಯವಾದದ್ದು ಈ ಕಾಲಘಟ್ಟದಲ್ಲಿಯೇ. ನಮ್ಮಲ್ಲಿ ಹೊಸ ಆಲೋಚನಾ ಕ್ರಮಗಳು, ದೃಷ್ಟಿಕೋನಗಳು ಪ್ರವೃತ್ತವಾಗಲು ಸಾಧ್ಯವಾದದ್ದು ಇದರಿಂದಲೇ ಎಂಬುದನ್ನೂ ಮರೆಯುವಂತಿಲ್ಲ. ವಿಪರ್ಯಾಸವೆಂದರೆ ಯಾವ ಶಿಕ್ಷಣ ಕ್ರಮ ನಮಗೆ ಹೊಸ ಕನಸುಗಳನ್ನು ಕಟ್ಟಿತೋ, ಹೊಸ ಸಾಮಾಜಿಕತೆಯನ್ನು ತೆರೆಯಿತೋ, ಹೊಸ ದೃಷ್ಟಿಕೋನಗಳನ್ನು ಕೊಟ್ಟಿತೋ ಅದೇ ಶಿಕ್ಷಣ ಕ್ರಮವು ತನ್ನ 'ಪ್ರಗತಿ'ಯೆಂದು ಕರೆಸಿಕೊಳ್ಳುವ ಹಂತದಲ್ಲಿ ಪ್ರಜಾಸತ್ತಾತ್ಮಕತೆಯ ವಿರೋಧಿಯೂ ಬಂಡವಾಳಪರವೂ ಯಾಂತ್ರಿಕವೂ ಆದ ನೆಲೆಗಳನ್ನು ಪ್ರಕಟಿಸಲು ಪ್ರಾರಂಭಿಸಿದ್ದು ಹೇಗೆ? ಪ್ರೊ॥ ಜಯದೇವ ಅವರ ಪ್ರಸ್ತುತ ವಿವೇಚನೆ ಇಂತಹ ಪ್ರಶ್ನೆಗೆ ಉತ್ತರಿಸಲು ನಮ್ಮನ್ನೆಲ್ಲ ಬಾಧ್ಯಸ್ಥರನ್ನಾಗಿ ಮಾಡುತ್ತದೆ.

ಇಂದು ಶಿಕ್ಷಣದ ಬಗೆಗೆ ಬಹಳಷ್ಟು ಮಾತುಗಳನ್ನು ಆಡಲಾಗುತ್ತಿದೆ. ಆದರೆ ಆ ಮಾತುಗಳಲ್ಲಿ ಪ್ರಭುಸಂಹಿತೆಯೇ ಹೆಚ್ಚು. ಆದರೆ ಪ್ರೊ.ಜಯದೇವ ಅವರದು ಮಿತ್ರಸಂಹಿತೆಯ ದಾರಿ. ಹೀಗಾಗಿ ಈ ಕ್ಷೇತ್ರವನ್ನು ಅವರು ಸೌಜನ್ಯ-ಮಾರ್ದವತೆಗಳಿಂದ ಪ್ರವೇಶಿಸಿದ್ದಾರೆ. ಇಲ್ಲಿ ಅವರ ಪಿಸುನುಡಿಗೆ ಅನನ್ಯವಾದ ಗಟ್ಟಿತನವೊಂದು ಒದಗಿಬಂದಿದೆ. ಅವರ ಬರಹಗಳ ಹರಹಿನ ಹಿನ್ನೆಲೆಯಲ್ಲಿ ಇನ್ನೊಂದಿಷ್ಟು ಸಂಗತಿಗಳನ್ನು ಮೆಲುಕು ಹಾಕುವುದು ಈ ಗಮನಿಕೆಗಳ ಉದ್ದೇಶ.

ಈಗ ನಾವು ಯಾವ ಬಗೆಯ ಶೈಕ್ಷಣಿಕ ಸನ್ನಿವೇಶಕ್ಕೆ ಎದುರಾಗಬೇಕಾಗಿ ಬಂದಿದೆ ಎಂಬುದರ ವಿವರಗಳನ್ನು ಹೆಚ್ಚಾಗಿ ಕೊಡುವ ಅಗತ್ಯವಿಲ್ಲವೆಂದು ತೋರುತ್ತದೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಈ ಹೊತ್ತು ನಮ್ಮ ಮುಖ್ಯ ಕಾಳಜಿ ಇದು : ಸ್ವಾತಂತ್ರ್ಯಾನಂತರ ನಾವು ಮಂತ್ರವೆಂಬಂತೆ ಸ್ವೀಕರಿಸಿದ ನಮ್ಮ ಸಂವಿಧಾನಬದ್ಧ ಪ್ರಜಾಸತ್ತಾತ್ಮಕ ಮತ್ತು ಸರ್ವಸಮಾನತೆಯ ಮೌಲ್ಯಗಳು ಇಷ್ಟು ವರ್ಷಗಳ ಬಳಿಕವೂ ನಮ್ಮ ಶಿಕ್ಷಣರಂಗದಲ್ಲಿ ಪ್ರತಿಬಿಂಬಿತವಾಗದಿರಲು ಕಾರಣವೇನು? ಇಂತಹ ಪ್ರಶ್ನೆಗೆ ಶಿಕ್ಷಣರಂಗಕ್ಕಿಂತ ಹೆಚ್ಚಿನ ವ್ಯಾಪ್ತಿಯಿದ್ದು ಅದನ್ನು ಸಮಗ್ರವಾದ ನೋಟವೊಂದರಲ್ಲಿ ಗ್ರಹಿಸಲು ಪ್ರಯತ್ನಿಸಬೇಕು ಎನ್ನುವುದೇನೊ ನಿಜವೆ. ಇಷ್ಟಾದರೂ ಶಿಕ್ಷಣಕ್ಕೆ ಸೀಮಿತಗೊಳಿಸಿಕೊಂಡು ವಿವೇಚಿಸಿದಾಗಲೂ ಅದು ಒಂದಿಷ್ಟಾದರೂ ಫಲಿತಗಳನ್ನು ನಮ್ಮ ಮುಂದೆ ತೆರೆದಿಡುವ ಸಾಧ್ಯತೆಯಿದೆ ಎನ್ನುವುದೂ ಸತ್ಯ.

ಮೊಟ್ಟ ಮೊದಲಿಗೆ ನಮ್ಮ ಕಣ್ಮುಂದೆ ರಾಚುವ ಒಂದು ಸಂಗತಿಯೆಂದರೆ ನಮ್ಮ ಶೈಕ್ಷಣಿಕ ಸನ್ನಿವೇಶದ ತಾರತಮ್ಯ ಮತ್ತು ವೈರುಧ್ಯಗಳು. ಅದು ಗ್ರಾಮೀಣ ಅಥವಾ ನಗರಪ್ರದೇಶವಾಗಿರಬಹುದು; ಬಡವ ಮತ್ತು ಶ್ರೀಮಂತರ ನಡುವಿನದಿರಬಹುದು; ವರ್ಣ–ವರ್ಗಗಳ ಅಸಮಾನತೆ ಇರಬಹುದು; ಅಥವಾ ಇಂಗ್ಲಿಷ್ ಮತ್ತು ದೇಶಭಾಷೆಗಳ ನಡುವಿನ ಕಂದರವಿರಬಹುದು. ಸಂವಿಧಾನಾತ್ಮಕ ಆಶಯಗಳಿಗೆ ವಿರುದ್ಧವಾಗಿದ್ದೂ ಮತ್ತೊಂದೆಡೆ ಹೆಚ್ಚೂ ಕಡಮೆ ಸಮಸ್ತ ಪ್ರಜಾವರ್ಗವೇ ಅದನ್ನು ಮರುಮಾತಿಲ್ಲದೆ ತಮ್ಮ ಸಂತಾನದ ಪ್ರಗತಿಯ ಹೆದ್ದಾರಿ ಎಂದು ಒಪ್ಪಿಕೊಂಡಿರುವುದರ ಹಿನ್ನೆಲೆಯಲ್ಲಿ ಕೆಲಸ ಮಾಡುತ್ತಿರುವ ಒತ್ತಡಗಳಾವುವು? ಈ ಶಿಕ್ಷಣನೀತಿಯನ್ನು ರೂಪಿಸಿರುವ ಪರಿಣತಿ ಮತ್ತು ಬುದ್ಧಿಮತ್ತೆಗಳ ಸ್ವರೂಪವೇನು? ಇವೇ ಮೊದಲಾದ ಪ್ರಶ್ನೆಗಳನ್ನು ಬಹುಶಃ ಇಷ್ಟು ತಡವಾಗಿಯಾದರೂ ನಾವು ಕೇಳಿಕೊಳ್ಳದೆ ವಿಧಿಯಿಲ್ಲ.

ಬಹುಶಃ ಎಂದು ನಮ್ಮ ಶಿಕ್ಷಣರಂಗದಿಂದ ಸರ್ಕಾರ, ಅದರ ಕಾರಣಗಳೇನೇ ಇರಲಿ, ಕ್ರಮೇಣ ಹಿಂದಕ್ಕೆ ಸರಿಯಲು ಪ್ರಾರಂಭಿಸಿತೋ, ಅಂದಿನಿಂದಲೇ ಹಲವು ಬಿರುಕುಗಳು ಇಲ್ಲಿ ಕಾಣಿಸಿಕೊಂಡವೆಂದು ಹೇಳದೆ ವಿಧಿಯಿಲ್ಲ. ಈ ಬಿರುಕುಗಳು ಕೇವಲ ಆಡಳಿತಾತ್ಮಕವಾಗದೆ ಸಮುದಾಯವನ್ನು ಒಡೆಯುವಲ್ಲಿ ಮತ್ತು ಶ್ರೇಣೀಕೃತ ರಚನೆಗಳನ್ನು ಹುಟ್ಟುಹಾಕುವಲ್ಲಿ ಪರ್ಯವಸಾನವಾಗಿರುವುದು ಇಂದು ನಮ್ಮ ಕಣ್ಣೆದುರಿಗೆ ಎದ್ದುಕಾಣುತ್ತಿದೆ. ಶಿಕ್ಷಣದ ಸಾಮಾಜಿಕತೆ ಕಣ್ಮರೆಯಾಗಿ ಅದರ ವಾಣಿಜ್ಯದ ನೆಲೆಗಳು ಪ್ರಧಾನವಾಗತೊಡಗಿದ್ದೂ ಇದರಿಂದಲೇ ಎನ್ನಬೇಕು. ಇದರಿಂದಾಗಿ ವಿದ್ಯಾಭ್ಯಾಸವೆನ್ನುವುದು ಮಕ್ಕಳ ಮೇಲೆ ಹೂಡುವ ಬಂಡವಾಳ ಮತ್ತು ಕಾಲಾಂತರದಲ್ಲಿ ಅದರಿಂದ ಹಿಂಪಡೆಯುವ ಸಂಪಾದನೆಯ ಸಲಕರಣೆ ಎಂಬ ಸೂತ್ರ ಸರ್ವಜನಸಮ್ಮತವೆನ್ನುವಂತಾಯಿತು. ಹೀಗಾಗಿ ಶಿಕ್ಷಣರಂಗ ಮತ್ತೊಂದು ಷೇರುಪೇಟೆಯಾಗಿ ಪರಿವರ್ತಿತವಾಯಿತು ಎನ್ನದೆ ವಿಧಿಯಿಲ್ಲ. ಶಿಕ್ಷಣವೆನ್ನುವುದು ಆಡಳಿತಗಾರರಿಗೆ ಬಿಕರಿಯ ವಸ್ತುವೂ ಸಮುದಾಯಕ್ಕೆ ಖರೀದಿಯ

ಸಾಮಗ್ರಿಯೂ ಆದಾಗ ಉಂಟಾದ ಪರಿಣಾಮಗಳ ಬಹುಮುಖೀ ಆಯಾಮಗಳ ಬಗೆಗೆ ನಾವು ತುಂಬ ಗಂಭೀರವಾಗಿ ಚಿಂತಿಸಬೇಕಾಗಿದೆ. ಒಂದಂತೂ ನಿಜ; ಶಿಕ್ಷಣದ ವ್ಯಾಪಾರೀಕರಣದಿಂದ ಮನುಷ್ಯನು ಗೌಣವಾಗಿ ಪರಿಕರಗಳು ಇನ್ನಿಲ್ಲದಂತೆ ವಿಜೃಂಭಿಸತೊಡಗಿರುವುದನ್ನು ನಾವು ಕಾಣುತ್ತೇವೆ. ಇದರಿಂದಾಗಿ ಕಲಿಕೆಯ ಪ್ರಕ್ರಿಯೆ ಕೂಡ ವ್ಯಕ್ತಿಯ ಅಂತರಂಗದಿಂದ ಬಹಿರಂಗದ ಕಡೆಗೆ ವಿಕಸನಗೊಳ್ಳುವುದು ಎಂಬುದಕ್ಕಿಂತ ಬಹಿರಂಗದಲ್ಲಿ ನಿರ್ಮಾಣ ಮಾಡಬೇಕಾಗಿರುವ ಒಂದು ವ್ಯವಸ್ಥೆ ಎಂಬ ಗ್ರಹಿಕೆ ಅತ್ಯಂತ ಅನುಕೂಲಕರವಾಗಿ ಚಾಲ್ತಿಯನ್ನು ಪಡೆಯಿತು. ಒಂದೆಡೆ ಆಡಳಿತದ ಸಾಮಾಜಿಕತೆಯಲ್ಲಿಯೂ ಇನ್ನೊಂದೆಡೆ ಕಲಿಕೆಯ ಕ್ರಮದ ಶೈಕ್ಷಣಿಕತೆಯಲ್ಲಿಯೂ ಇದು ಬಿಂಬಿತವಾಗಿರುವುದನ್ನು ಕಾಣಬಹುದು.

ನಮ್ಮ ಶಿಕ್ಷಣಕ್ರಮದಲ್ಲಿ ಒಪ್ಪಿತವೆಂದು ಭಾವಿಸಿರುವ ಕಲಿಕೆಯ ವಿಧಾನವನ್ನು ಒಂದಿಷ್ಟು ಮುನ್ನೆಲೆಗೆ ತಂದುಕೊಳ್ಳೋಣ. ಇದು ಕಲಿಕೆಯ ವಸ್ತು ವಿದ್ಯಾರ್ಥಿಯಿಂದ 'ಹೊರಗೆ' ಇದೆ ಎಂದು ಗ್ರಹಿಸುತ್ತದೆ. ಹೀಗಾಗಿ ಕಲಿಕೆಯ ಸನ್ನಿವೇಶಕ್ಕೆ 'ಪೂರಕ'ವೆನ್ನಲಾಗುವ ಸಲಕರಣೆಗಳನ್ನು ರೂಪಿಸುವುದೇ ಇಲ್ಲಿ ಅತ್ಯಂತ ಪ್ರಧಾನವಾಗಿಬಿಡುತ್ತದೆ. ಆದ್ದರಿಂದಲೇ ಪಠ್ಯಪುಸ್ತಕಗಳು, ಬರವಣಿಗೆಯ ಸಾಮಗ್ರಿಗಳು, ಸಮವಸ್ತ್ರ ಮುಂತಾದುವು ಇನ್ನಿಲ್ಲದ ಪ್ರಾಮುಖ್ಯವನ್ನು ಪಡೆದುಕೊಂಡು ಶೈಕ್ಷಣಿಕ ಸನ್ನಿವೇಶದ ಅವಿಭಾಜ್ಯ ಅಂಗಗಳಾಗಿಬಿಡುತ್ತವೆ. ಈ ಎಲ್ಲ ಪರಿಕರಗಳ ನಡುವೆ ನಿಜವಾದ ಕಲಿಕೆಯ ಜೀವಂತ ಸನ್ನಿವೇಶ ಮರೆಯಾಗುತ್ತ ಹೋಗುತ್ತಿರುತ್ತದೆ. 'ಪೂರೈಸುವುದು' ಮುಖ್ಯವಾದಾಗ 'ಆಗುವುದು' ಅವಗಣನೆಗೆ ಒಳಗಾಗುತ್ತದೆ. ನಿಜವಾಗಿ ಕಲಿಕೆಯನ್ನು 'ವಿಕಸನ' ಎಂದು ಅರ್ಥವಿಸಿಕೊಂಡಾಗ ಶೈಕ್ಷಣಿಕ ಸನ್ನಿವೇಶದಲ್ಲಿ ನಮ್ಮ ಅಪೇಕ್ಷೆಗಳೇ ಬೇರೆಯಾಗುತ್ತವೆ. ಬಹಿರಂಗದಲ್ಲಿ ಪೇರಿಸಿಕೊಳ್ಳುವುದಕ್ಕಿಂತ ಅಂತರಂಗದಲ್ಲಿ ಸಂಭವಿಸುವುದಕ್ಕೆ ಅಲ್ಲಿ ಪ್ರಾಧಾನ್ಯತೆ ದೊರೆಯುತ್ತದೆ. ಶಿಕ್ಷಕ ಮತ್ತು ವಿದ್ಯಾರ್ಥಿಗಳ ಪಾತ್ರ–ಪದನಾಮಗಳೂ ಮರುವ್ಯಾಖ್ಯಾನಕ್ಕೆ ಒಳಗಾಗಿ ನಾವು ಈಗ ಯಾವುದನ್ನು 'ತರಗತಿ'* ಎಂದು ಕರೆಯುತ್ತೇವೆಯೋ ಅದರ ಸ್ವರೂಪವೇ ಬದಲಾಗುವುದು ಅನಿವಾರ್ಯವಾಗುತ್ತದೆ.

ಪ್ರಸ್ತುತ ಸನ್ನಿವೇಶವನ್ನು ವಿವರಿಸಿಕೊಳ್ಳಲು ಬಸವಣ್ಣನವರ ಒಂದು ವಚನದ ನೆರವನ್ನು ಪಡೆಯಬಹುದು. ಬಸವಣ್ಣನವರ ಪ್ರಕಾರ ಉಳ್ಳವರು ಶಿವಾಲಯವನ್ನು 'ಮಾಡು'ತ್ತಾರೆ. ಆದರೆ ನಿಜವಾದ ಶರಣ ತಾನೇ ಶಿವಾಲಯ'ವಾಗು'ತ್ತಾನೆ. 'ಮಾಡಿ'ದ ಶಿವಾಲಯ, ಸ್ಥಾವರ, ಅಳಿದುಹೋಗುತ್ತದೆ. ಆದರೆ 'ಆದ' ಶಿವಾಲಯ ಶಾಶ್ವತವಾಗುತ್ತದೆ. ನಮ್ಮ ಶೈಕ್ಷಣಿಕ ಸನ್ನಿವೇಶದಲ್ಲಿ ಜಂಗಮತೆಯ ಮರುಸ್ಥಾಪನೆಯ ಸಾಧ್ಯತೆಯ ಕಡೆಗೆ

* ಈ ಪದದ ಚಾಲ್ತಿಯಲ್ಲಿರುವ ಅರ್ಥ ಅದರ ನಿಷ್ಪತ್ತಿಯ ಅರ್ಥದಿಂದ ಊಹಿಸಲೂ ಸಾಧ್ಯವಾಗದಷ್ಟು ದೂರ ಸರಿದಿರುವುದು ಕೂಡ ಸಾಂಕೇತಿಕವೆನ್ನಬಹುದೆ?

ಗಮನಹರಿಸಬೇಕಾಗಿದೆ. ಜಂಗಮತೆ ನೆಲೆಗೊಳ್ಳುವುದೆಂದರೆ ಮಾಡುವಿಕೆಯ ಜಾಗದಲ್ಲಿ ಆಗುವಿಕೆ ನೆಲೆಗೊಳ್ಳುವುದು. ಎಂದರೆ ಕಲಿಕೆಯ ಸನ್ನಿವೇಶದಲ್ಲಿ ಪರಿಕರಪ್ರಾಧಾನ್ಯವನ್ನು ಜೀವಂತ ಚಟುವಟಿಕೆ ಪಲ್ಲಟಗೊಳಿಸುವುದು. ಎಂದರೆ ವ್ಯಕ್ತಿ ಮತ್ತು ವ್ಯಕ್ತಿತ್ವಗಳು ಮುನ್ನೆಲೆಗೆ ಬರುವುದು.

ಪ್ರಸ್ತುತ ನಮ್ಮ ಕಲಿಕೆಯ ಸನ್ನಿವೇಶವು ವೈಯಕ್ತಿಕ ಚಹರೆಗಳನ್ನು ಅಳಿಸಿಹಾಕಲು ಪಣತೊಟ್ಟು ನಿಂತಂತಿದೆ. 'ವಿದ್ಯಾರ್ಥಿ' ಎಂಬ ಅಸ್ತಿತ್ವ ಸಂಸ್ಥೆಯಲ್ಲಿ ಪ್ರವೇಶ ಪಡೆದ ಕೆಲವೇ ದಿನಗಳಲ್ಲಿ 'ಅಭ್ಯರ್ಥಿ' ಎಂದು ಮಾರ್ಪಡುತ್ತದೆ. ಅಭ್ಯರ್ಥಿ ಕೂಡ ಪರೀಕ್ಷೆ ಬರೆಯುವಾಗ ಒಂದು 'ನೋಂದಣಿ ಸಂಖ್ಯೆ'ಯಾಗಿ ಮತ್ತೆ ಬದಲಾಗುತ್ತಾನೆ. ಈ ನೋಂದಣಿ ಸಂಖ್ಯೆ ಕೂಡ ಮೌಲ್ಯಮಾಪನದ ಸಂದರ್ಭದಲ್ಲಿ ಒಂದು ಗುಪ್ತವಾದ 'ಸಂಕೇತಸಂಖ್ಯೆ'ಯಾಗಿ ಬದಲಾಗುತ್ತದೆ. ಹೀಗಾಗಿ ನಾವು 'ಶಿಕ್ಷಣ ವ್ಯವಸ್ಥೆ' ಎಂಬ ಗಂಭೀರನಾಮದಿಂದ ಕರೆದುಕೊಂಡದ್ದೆಲ್ಲವೂ ಅಂತಿಮವಾಗಿ ವ್ಯಕ್ತಿತ್ವದ ಚಹರೆಗಳೆಲ್ಲವನ್ನೂ ಕಳೆದುಕೊಂಡ 'ಪರೀಕ್ಷಾ ವ್ಯವಸ್ಥೆ'ಯಾಗಿ ಪರ್ಯವಸಾನವಾಗುತ್ತದೆ. ಇಂತಹ ಸನ್ನಿವೇಶ ನಿರ್ಮಾಣವಾದದ್ದಾದರೂ ಹೇಗೆ?

ಇದಕ್ಕೆ ಉತ್ತರವಾಗಿ ನಾವು ಶಿಕ್ಷಣದ ವ್ಯವಸ್ಥೆಯೆಂದು ಕರೆದುಕೊಂಡದ್ದರ ಒಂದು ಪ್ರಧಾನ ವೈರುದ್ಧ್ಯದ ಕಡೆಗೆ ಮುಖ ಮಾಡಬೇಕು. ಇದು ಈ ವ್ಯವಸ್ಥೆಯ ವಿಚಿತ್ರ ಸಾಮಾಜಿಕತೆಯ ಲಕ್ಷಣವೂ ಹೌದು. ಇದು ಒಂದೆಡೆ ಕಲಿಸುವವರನ್ನು ಭವಿಷ್ಯದ ಸಮಾಜದ ರೂವಾರಿಯೆಂದು ಕೊಂಡಾಡುತ್ತದೆ; ಇನ್ನೊಂದೆಡೆ ಅವರನ್ನು ಪರೀಕ್ಷಕರನ್ನಾಗಿ ಅತ್ಯಂತ ಗುಮಾನಿಯಿಂದ ನೋಡುತ್ತದೆ. ಹೀಗಾಗಿ ಕಲಿಸುವವರು ಮತ್ತು ಕಲಿಯುವವರ ನಡುವಿನ ಸನ್ನಿವೇಶದಿಂದ ಪರೀಕ್ಷೆಯೆಂಬ ಪ್ರಕ್ರಿಯೆಯನ್ನು ಒಂದು ಬಗೆಯ ಅಸಹಜತೆಯ ದೂರದಲ್ಲಿರುವಂತೆ ನೋಡಿಕೊಳ್ಳುತ್ತದೆ. ಆದರೆ ಶಿಕ್ಷಣದ ಜೀವಂತ ಸನ್ನಿವೇಶದಲ್ಲಿಯಾದರೋ ಕಲಿಸುವಿಕೆ-ಕಲಿಯುವಿಕೆ ಮತ್ತು ಪರೀಕ್ಷಿಸುವಿಕೆ ಏಕತ್ರವಾಗಿ ಸಂಭವಿಸುವಂಥದು. ಶಿಕ್ಷಣದ ಶರೀರವನ್ನು ಶವವನ್ನಾಗಿ ಮಾಡುವ ಬೆಲೆಯನ್ನು ತೆರದೆ ಅವನ್ನು ಪೃಥಕ್ಕರಿಸುವುದು ಸಾಧ್ಯವಿಲ್ಲ. ಇದನ್ನು ಇನ್ನೊಂದಿಷ್ಟು ಮುಂದುವರಿಸಿ ಹೇಳುವುದಾದರೆ ಕಲಿಸುವವರು-ಕಲಿಕೆ-ಕಲಿಯುವವರು ಎಂಬ ಘಟಕಗಳನ್ನು ನಿರಪೇಕ್ಷವಾಗಿ ಸ್ಥಾಪಿಸಿಕೊಳ್ಳುವುದೇ ಅಸಹಜವೂ ಅವೈಜ್ಞಾನಿಕವೂ ಆಗುತ್ತದೆ. ಕಲಿಸುವವರೂ ಕಲಿಯುವವರಿಂದ ಕಲಿತಾಗಲೇ 'ತರಗತಿ' ತನ್ನ ನಿಜವಾದ ಅರ್ಥದಲ್ಲಿ ಜೀವಂತವೂ ಚಲನಶೀಲವೂ ಆದೀತು. ಹೀಗಾಗಬೇಕಾದರೆ ತರಗತಿಯ ಸನ್ನಿವೇಶ ಪೂರ್ವಸಿದ್ಧ ತಯಾರಿಯೊಂದರ ಪುನರಾವರ್ತನೆ (Playback) ಮಾತ್ರವೇ ಆಗಿ ಕಾರ್ಯ ನಿರ್ವಹಿಸದೆ ಆ ಕ್ಷಣದಲ್ಲಿ ಸೃಷ್ಟಿಸುವ ಕೇಂದ್ರವಾಗಬೇಕಾಗುತ್ತದೆ. ವ್ಯಕ್ತಿ-ವ್ಯಕ್ತಿಗಳ ನಡುವಿನ ಜೀವಂತ ಸಂವೇದನೆಗಳ ಕೊಡುಕೊಳುಗೆಗಳನ್ನು ನಾವು ಮಾನ್ಯಮಾಡಿದಾಗ ಮಾತ್ರ ತರಗತಿ ಒಂದು ಸೃಷ್ಟಿಕೇಂದ್ರವಾಗಲು ಸಾಧ್ಯ. ಈಗ ನಾವು

ನಿರ್ಮಿಸಿಕೊಂಡಿರುವ ಪದ್ಧತಿ ಪರೀಕ್ಷೆಯನ್ನು ಕಲಿಕೆಯ ಸಂದರ್ಭದಿಂದ ಬೇರ್ಪಡಿಸಬಹುದೆಂಬ ನಂಬಿಕೆಯನ್ನು ಆಧರಿಸಿದೆ. ಅಲ್ಲದೆ ಈ ನಂಬಿಕೆಯ ಹಿಂದೆ ನಮ್ಮ ಸಾಮುದಾಯಿಕ ಅಪೇಕ್ಷೆಗಳೂ ಕೆಲಸ ಮಾಡುತ್ತಿರುವಂತೆ ತೋರುತ್ತದೆ. ಏಕೆಂದರೆ ನಮ್ಮ ಶೈಕ್ಷಣಿಕ ಪರಿಸ್ಥಿತಿಯಲ್ಲಿ ನಾವು ಪರೀಕ್ಷೆಯೆಂದು ಕರೆದುಕೊಳ್ಳುವ ಈ ಕಸರತ್ತು ಇಂತಹ ಪ್ರಾಧಾನ್ಯವನ್ನು ಪ್ರಶ್ನಾತೀತವೆಂಬಂತೆ ಪಡೆದುಕೊಂಡದ್ದು ಹೇಗೆ? ಇದಕ್ಕೆ ಉತ್ತರವನ್ನು ಕಂಡುಕೊಳ್ಳಲು ಸಮಸ್ಯೆಯನ್ನು ಹಲವು ನಿಟ್ಟಿನಿಂದ ಪರಿಶೀಲಿಸುವ ಅಗತ್ಯವಿದೆ. ಆದರೆ ಒಂದಂತೂ ಸತ್ಯ. ನಮ್ಮ ಪಾಲಿಗೆ ಶಿಕ್ಷಣವೆನ್ನುವುದು ತಿಳುವಳಿಕೆಯ ಮೂಲಕ ಸಾಧಿಸಿಕೊಳ್ಳಬಹುದಾದ ವ್ಯಕ್ತಿತ್ವಸಂಸ್ಕಾರ ಎನ್ನುವುದಕ್ಕಿಂತ ಸಂಪಾದನೆಗೆ ರಹದಾರಿಯಾಗುವ ಒಂದು ಸಲಕರಣೆಯಾಗಿಯೇ ಹೆಚ್ಚು ಸತ್ಯವಾಯಿತು. ಇದು ಸಹಜವಾಗಿಯೇ ಒಂದು ಸ್ಪರ್ಧಾತ್ಮಕ ಲೋಕವನ್ನು ನಮ್ಮೆದುರಿಗೆ ತೆರೆಯಿತು. ಈ ಲೋಕದಲ್ಲಿ ಗಟ್ಟಿಗರೆನ್ನಿಸಿಕೊಳ್ಳಬೇಕಾದರೆ ಅಂಕಪಟ್ಟಿಗಳೂ ಪ್ರಮಾಣಪತ್ರಗಳೂ ನಮಗೆ ಅತ್ಯಗತ್ಯವಾದ ಶಸ್ತ್ರಾಸ್ತ್ರಗಳಾಗಿಬಿಟ್ಟವು. ಇದರಿಂದ ದರ್ಶನವಾಗಬೇಕಾಗಿದ್ದ ಶಿಕ್ಷಣ ನಮ್ಮ ಪಾಲಿಗೆ ಬರಿಯ ಪ್ರದರ್ಶನದ ಸಾಮಗ್ರಿಯಾಯಿತು ಎನ್ನದೆ ವಿಧಿಯಿಲ್ಲ.

ಜೊತೆಗೆ ಈ 'ಪ್ರದರ್ಶನ ಶಿಕ್ಷಣ'ದ ಇನ್ನೊಂದು ಆಯಾಮದ ಬಗೆಗೂ ಇಲ್ಲಿಯೇ ಹೇಳಬೇಕು. ಈ ಪ್ರದರ್ಶನೀಯತೆ ಒಂದು ಘನತೆವೆತ್ತ ಮೌಲ್ಯವಾದಾಗ ಅದು ಸಹಜವಾಗಿಯೇ ಜ್ಞಾನದ ಜಗತ್ತಿನಲ್ಲಿಯೂ ಶ್ರೇಣೀಕರಣವನ್ನು ನಿರ್ಮಿಸಿಬಿಡುತ್ತದೆ. ಆಗ ಕೆಲವು ವಿಷಯಗಳನ್ನು ಓದುವುದು ಪ್ರತಿಷ್ಠೆಯ ಸಂಗತಿಯೆಂದೂ ಇನ್ನು ಕೆಲವು ವಿಷಯಗಳ ಅಧ್ಯಯನ ನಿರುಪಯುಕ್ತವೆಂದೂ ವಿವಿಧ ಹಣೆಪಟ್ಟಿಗಳು ಸೃಷ್ಟಿಯಾಗುತ್ತವೆ. ನಮ್ಮ ವಿದ್ಯಾರ್ಥಿಗಳು ತಾಯ್ನುಡಿಯಲ್ಲಿ ಅಧ್ಯಯನ ಮಾಡಲು ಸಾಧ್ಯವಾಗದ ಪರಿಸ್ಥಿತಿ ನಿರ್ಮಾಣವಾಗಿರುವುದರ ಹಿನ್ನೆಲೆಯಲ್ಲಿಯೂ ಇದೇ ಒತ್ತಡವೇ ಕೆಲಸ ಮಾಡುತ್ತಿದೆಯೆಂಬುದು ಸ್ಪಷ್ಟ. ಇಷ್ಟರಮೇಲೆ, ಇನ್ನೊಂದು ಸಂಗತಿಯ ಕಡೆಗೂ ನಾವು ಗಮನವನ್ನು ಹರಿಸದಿರುವಂತಿಲ್ಲ. ಒಂದೆಡೆ ನಾವು ಗಂಭೀರವಾಗಿ ಶಿಕ್ಷಣ ವ್ಯವಸ್ಥೆ ಎಂದು ಚಿಂತಿಸುತ್ತಿದ್ದರೆ, ಅದನ್ನು ಬುಡಮೇಲು ಮಾಡುವಂತೆ ಇನ್ನೊಂದೆಡೆ 'ಪಾಠದ ವ್ಯವಸ್ಥೆ'ಯೊಂದು ಕಣ್ಣಿಗೆ ರಾಚುತ್ತಿರುತ್ತದೆ. ಈಚಿನ ದಿನಗಳಲ್ಲಿ ಈ ದಿಸೆಯಲ್ಲಿ ಆಗುತ್ತಿರುವ 'ಸಾಂಸ್ಥೀಕರಣ'ವನ್ನು ಗಮನಿಸಿದರೆ, ಕೆಲವು ಪಾಠದ ಅಂಗಡಿಗಳು ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳೆಂಬ ಮಾನ್ಯತೆಯನ್ನು ಗಿಟ್ಟಿಸಿಕೊಂಡುಬಿಟ್ಟಿವೆ. ಒಟ್ಟಿನಲ್ಲಿ ಕಾಳಸಂತೆಯ ದಂಧೆಯಾಗಿರುವ ಇವುಗಳ ಮೇಲೆ ಯಾವ ನಿಯಂತ್ರಣವೂ ಇದ್ದಂತಿಲ್ಲ. ಸಾಂವಿಧಾನಾತ್ಮಕ ಆಶಯಗಳಿಗೆ ಅಣಕವೋ ಎಂಬಂತೆ ಇವುಗಳು 'ಕೊಳ್ಳುವವರಿಗಾಗಿಯೇ' ಬೇರೊಂದು ಪರ್ಯಾಯ ವ್ಯವಸ್ಥೆಯನ್ನು ನಿರ್ಮಿಸುತ್ತಿವೆ. ಇವುಗಳ ಪ್ರಭಾವವಲಯದಲ್ಲಿ ಶಾಲಾಕಾಲೇಜುಗಳೇ ಸೊರಗುವ ದುಃಸ್ಥಿತಿ ನಿರ್ಮಾಣವಾಗಿದೆ. ದುರಂತವೆಂದರೆ, ಸಾರ್ವಭೌಮ ಪ್ರಜಾಸತ್ತಾತ್ಮಕತೆಯನ್ನು ಅಂಗೀಕರಿಸಿರುವ ನಮ್ಮ ನಾಡಿನಲ್ಲಿ ಈ ಬಗೆಯ

ಪ್ರವೃತ್ತಿಯ ಆಘಾತಕಾರೀ ಪರಿಣಾಮಗಳು ನಮ್ಮನ್ನು ಎಲ್ಲಿಗೆ ಕರೆದೊಯ್ಯುವುದೆಂಬುದನ್ನು ಬಹುಶಃ ನಾವಿನ್ನೂ ಮನಗಾಣದಿರುವುದು.

ಒಟ್ಟಿನಲ್ಲಿ ನಮ್ಮ ಶೈಕ್ಷಣಿಕ ಸನ್ನಿವೇಶ ಸಮಸ್ಯೆಗಳ ಗೂಡಿನಂತಾಗಿದೆ. ಸನ್ಮಿತ್ರರಾದ ಪ್ರೊ॥ ಜಿ.ಎಸ್.ಜಯದೇವ ಅವರು ಈ ಕೃತಿಯ ಮೂಲಕ ಇಂತಹ ಗೂಡಿಗೆ ಕೈಹಾಕಿದ್ದಾರೆ. ಸಾಮಾಜಿಕವಾಗಿ ಅತ್ಯಂತ ಆರೋಗ್ಯಕರ ಮನಸ್ಸೊಂದು ಶೈಕ್ಷಣಿಕ ಸನ್ನಿವೇಶಕ್ಕೆ ಪ್ರತಿಸ್ಪಂದಿಸಿರುವ ಬಗೆ ಇಲ್ಲಿದೆ. ಒಂದೆಡೆ ಇಲ್ಲಿ ನಮ್ಮ ಶಿಕ್ಷಣ ವ್ಯವಸ್ಥೆಯ ಅತಾರ್ಕಿಕತೆಯ ದರ್ಶನವಾದರೆ ಇನ್ನೊಂದೆಡೆ ಸತ್ತ್ವಪೂರ್ಣ ವ್ಯವಸ್ಥೆಯೊಂದರ ಅಪೇಕ್ಷೆಯ ಅನಾವರಣವೂ ಆಗುತ್ತದೆ. ಹಲವು ಜ್ಞಾನಶಿಸ್ತುಗಳ ಸಾರ್ಥಕ ಸಮನ್ವಯದ ಹಿನ್ನೆಲೆಯಲ್ಲಿ ಪ್ರಜಾಸತ್ತಾತ್ಮಕವಾಗಿ ಆರೋಗ್ಯಕರವಾದ ಪಾಕವೊಂದು ಇಲ್ಲಿ ಸಿದ್ಧಗೊಂಡಿದೆ. ಈ ಆಲೋಚನೆಯ ಬೇರುಗಳು ನಮ್ಮ ನಡುವೆ ಇನ್ನಷ್ಟು ಬಲಹೊಂದಿ ಅದೊಂದು ಬೃಹತ್ ಸಂಚಲನದ ವೃಕ್ಷವಾಗಿ ಹರಡಿಕೊಂಡಲ್ಲಿ ಅದಕ್ಕಿಂತ ಹೆಚ್ಚಿನ ಸಾರ್ಥಕತೆ ಮತ್ತೊಂದು ಇರಲಾರದು. ಈ ಪುಸ್ತಕದ ನೆಪದಲ್ಲಿ ಶ್ರೀ ಜಯದೇವ ಅವರೊಂದಿಗೆ ದೀರ್ಘಕಾಲದ ಸಂವಾದವೊಂದನ್ನು ನಡೆಸಲು ಸಾಧ್ಯವಾದದ್ದು ನನ್ನ ಅತಿ ದೊಡ್ಡ ಲಾಭವೆಂದು ನಂಬಿದ್ದೇನೆ. ಇದನ್ನೇ ನೆಪವಾಗಿಸಿಕೊಂಡು ಶ್ರೀ ಜಯದೇವ ಅವರು ಈ ಪುಸ್ತಕಕ್ಕೆ ನನ್ನಿಂದ 'ಮುನ್ನುಡಿಸಲು' ಹೊರಟರು. ಈ ವಿಷಯದಲ್ಲಿ ಅವರ ಸ್ನೇಹದ ಹೊರತಾಗಿ ಇನ್ನಾವ ಅರ್ಹತೆಯನ್ನೂ ನಾನರಿಯೆ. ಇಷ್ಟರ ಮೇಲೆ ನಾನು ಬರೆದಿರುವುದು ಮುನ್ನುಡಿಯಲ್ಲವೆಂಬ ಸತ್ಯ ನನಗಂತೂ ಗೊತ್ತು; ಬಹುಶಃ ಜಯದೇವರಿಗೂ ಗೊತ್ತಾಗಿರಬೇಕು! ಸೈದ್ಧಾಂತಿಕವಾಗಿ ನಾವೆಲ್ಲ ಏಕಾಂತಕ್ಕೆ ದೂಡಲ್ಪಡುತ್ತಿದ್ದೇವೆಂಬ ಒಂದು ಆತಂಕ ಕಾಡುತ್ತಿರುವಾಗ ಇಂತಹ ಆಲೋಚನೆಗಳ ಮೂಲಕ ಬೌದ್ಧಿಕ ಸಂಗಾತವನ್ನೂ ಸ್ಥೈರ್ಯವನ್ನೂ ನೀಡುತ್ತಿರುವ ಶ್ರೀ ಜಯದೇವ ಅವರಿಗೆ ನಾನು ಋಣಿಯಾಗಿದ್ದೇನೆ.

**ಎಚ್.ಎನ್.ಮುರಳೀಧರ,**
ಕನ್ನಡ ಪ್ರಾಧ್ಯಾಪಕ,
ಎ.ಪಿ.ಎಸ್. ವಾಣಿಜ್ಯ ಕಾಲೇಜು,
ಬೆಂಗಳೂರು.

## ಲೇಖಕರ ನುಡಿ

ಶಿಕ್ಷಣವು ತಾಂತ್ರಿಕ ಕೊರತೆಗಳಿಂದ ಬಡವಾಗಿದೆ ಎಂದೂ, ಈ ತಾಂತ್ರಿಕ ಕೊರತೆಗಳನ್ನು ಪರಿಹರಿಸುವ ಮೂಲಕ ಮಾತ್ರ ನಾವು ಶಿಕ್ಷಣಕ್ಕೆ ಸರಿಯಾದ ರೂಪ ಕೊಡಬಹುದೆಂದೂ ಒಂದು ಗಾಢವಾದ ನಂಬಿಕೆ ಎಲ್ಲೆಲ್ಲೂ ವ್ಯಾಪಿಸಿದೆ. ಆದರೆ 'ಶಿಕ್ಷಣ ಎಂದರೇನು' ಎಂಬ ಮೂಲಪರಿಕಲ್ಪನೆಯಲ್ಲಿಯೇ ನಾವು ಎಡವಿದ್ದೇವೆ. ಜಾಗತೀಕರಣದ ಪ್ರತ್ಯಕ್ಷ–ಪರೋಕ್ಷ ಒತ್ತಡಗಳು, ದಿನನಿತ್ಯದ ಬದುಕಿಗೆ ಅನಿವಾರ್ಯವಾದ ತಾಂತ್ರಿಕತೆಯನ್ನು ಕಲಿಯಬೇಕಾದ ಒತ್ತಡ, ಅನಾರೋಗ್ಯಕರವಾದ ಸ್ಪರ್ಧೆಯ ನಡುವೆ ಗೆದ್ದು ಬರಬೇಕಾದ ಒತ್ತಡ ಹೀಗೆ ಈ ಎಲ್ಲಾ ಒತ್ತಡಗಳ ನಡುವೆ ಸಮಷ್ಟಿ ಬದುಕಿನ ಸಾಮರಸ್ಯ ಕೆಟ್ಟರೂ ಚಿಂತೆಯಿಲ್ಲ, ವೈಯಕ್ತಿಕ ಲಾಭವೇ ಬದುಕಿನ ಪರಮಗುರಿ ಎಂಬ ಮನೋಧರ್ಮ ಎಲ್ಲರಲ್ಲೂ ಮೂಡಿದೆ. ಹೀಗೆ ನಮ್ಮ ಬದುಕು ಅರ್ಥವಿಲ್ಲದೆ, ಗುರಿಯಿಲ್ಲದೆ ಕೇವಲ ಸ್ಪರ್ಧೆಗಾಗಿ ಮನ್ನಣೆಗಾಗಿ ಹೆಣಗುವುದಾಗಿದೆ. ನಿಗಲ್ ಮಾರ್ಷ್ ಎಂಬುವವರ ಮಾತಿನಲ್ಲಿ ಹೇಳಬೇಕೆಂದರೆ, "ಅಲ್ಲಿ ಸಾವಿರಾರು ಜನರು ಹತಾಶೆಯಿಂದ ಹುಯಿಲಿಡುತ್ತ ತಮಗಿಷ್ಟವಿಲ್ಲದ ನೌಕರಿಯಲ್ಲಿ ಹಗಲಿರುಳು ದುಡಿದು ದುಡಿದು ಸಂಪಾದಿಸಿ ತಮಗೆ ಅಗತ್ಯವೇ ಇಲ್ಲದ ವಸ್ತುಗಳನ್ನು ಕೊಳ್ಳುತ್ತ, ತಾವು ಎಂದೂ ಇಷ್ಟಪಡದ ವ್ಯಕ್ತಿಗಳ ಮನ್ನಣೆ ಗಳಿಸಲು ಹೆಣಗುತ್ತಾರೆ".

ನಿಜವಾಗಿ ನೋಡಿದರೆ ನಮ್ಮ ಇಂದಿನ ಶಿಕ್ಷಣ ಈ ಬಗೆಯ ಬದುಕಿಗಾಗಿ ನಮ್ಮನ್ನು ಸಿದ್ಧಗೊಳಿಸುತ್ತಿದೆಯೇ ಹೊರತು ಈ ಅವಿವೇಕಕ್ಕೆ ಬೆನ್ನುಮಾಡಬಲ್ಲ ವಿವೇಚನೆಯನ್ನು ನೀಡುತ್ತಿಲ್ಲ. ಆದರೂ ನಮ್ಮ ಎಲ್ಲ ಪರಿಣಿತರು ಶಿಕ್ಷಣ ಕ್ಷೇತ್ರದಲ್ಲಿ ತಾಂತ್ರಿಕ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆಯೇ ಹೊರತು 'ಶಿಕ್ಷಣ ಎಂದರೇನು? ಅದರಿಂದ ನಿರೀಕ್ಷಿಸಬೇಕಾದದ್ದು ಏನು?' ಎಂಬ ಬಗ್ಗೆ ಹೆಚ್ಚಿನ ಚಿಂತನೆಗಳನ್ನು ಮಾಡುತ್ತಿಲ್ಲ. ತಾಂತ್ರಿಕವಾಗಿ ಸರಿಯಾಗಿರುವ ಮೂಲಕ ನೈತಿಕ ಹೊಣೆಗಾರಿಕೆಯಿಂದ ತಪ್ಪಿಸಿಕೊಂಡು ಅಪರಾಧಿಪ್ರಜ್ಞೆಯ ಇರುಸುಮುರುಸುಗಳಿಂದ ಪಾರಾಗುವ ಬಗೆಯನ್ನು ಎಲ್ಲರೂ ಕಲಿಯಲಿಚ್ಛಿಸುತ್ತಾರೆ. ನಮ್ಮ ಇಂದಿನ ಶಿಕ್ಷಣ ಇದಕ್ಕೆ ಪೂರಕವಾಗಿದೆ.

ನನ್ನ ಸ್ನೇಹಿತರಾದ ಬಾಲಬಳಗ ಶಾಲೆಯ ಡಾ॥ ಸಂಜೀವ ಕುಲಕರ್ಣಿಯವರು, ಧ್ವನಿ ಸಂಸ್ಥೆಯ ಶಿವಾನಂದ ಹೊಂಬಳ ಅವರು, ಡಾ॥ ಗಣನಾಥ್, ಶ್ರೀ ಉಮಾಶಂಕರ ಪೆರಿಯೋಡಿಯವರು, ಶ್ರೀ ಸಂತೋಷ್ ಕೌಲಗಿಯವರು ಹೀಗೆ ಅನೇಕರು

ಮೇಲುಕೋಟೆಯ ಪ್ರಶಾಂತ ಪರಿಸರದಲ್ಲಿ ಕುಳಿತು ಶಿಕ್ಷಣವನ್ನು ಕುರಿತು ಚಿಂತಿಸಿದ್ದುಂಟು. ಹೀಗೆ ಚಿಂತಿಸಿದಾಗಲೆಲ್ಲ ನಮ್ಮ ಮುಂದೆ ತಾನೇ ತಾನಾಗಿ ಎದ್ದು ಬರುತ್ತಿದ್ದ ಕಾಳಜಿಗಳೆಂದರೆ ದುರಂತಮಯವಾದ ಈ ಪರಿಸರದ ನಡುವೆ ಮನುಕುಲದ ಅಳಿವು-ಉಳಿವಿನ ಪ್ರಶ್ನೆ. ಶಿಕ್ಷಣ ನಮ್ಮ ಮಕ್ಕಳನ್ನು ಮತ್ತಷ್ಟು ಖಳನಾಯಕರನ್ನಾಗಿ ಮಾಡುತ್ತಿದೆಯೇ ಎಂದರೆ ಪೃಥ್ವಿಯನ್ನು ಮುಳುಗಿಸಬಲ್ಲ ಹಿರಣ್ಯಾಕ್ಷರನ್ನಾಗಿ ಮಾಡುತ್ತಿದೆಯೇ, ಎಂಬ ಪ್ರಶ್ನೆಗಳು ನಮ್ಮನ್ನು ಕಾಡದೆ ಬಿಟ್ಟಿಲ್ಲ. ಮಕ್ಕಳನ್ನು ವಿಧ್ವಂಸಕಕಾರಿಯಾಗಿ ಮಾಡುತ್ತಿರುವ ಈ ಶಿಕ್ಷಣ ಕುರಿತು ತೀವ್ರವಾದ ವಿಮರ್ಶೆ ಇಂದಿನ ಅಗತ್ಯ. ನಮ್ಮ ಶಾಲೆಗಳು ಮಕ್ಕಳನ್ನು 'ಲೀಗಲ್ ಟೆರರಿಸ್ಟ್'ಗಳನ್ನಾಗಿ ಮಾಡುತ್ತಿವೆಯೇ ಎಂಬ ಅನುಮಾನ ನಮ್ಮನ್ನು ಕಾಡುತ್ತದೆ. ದಶಕಗಳ ಹಿಂದೆಯೇ ಅನೇಕ ಚಿಂತಕರು 'ಅಪಾಯಕಾರಿ ಶಾಲೆ'ಗಳ ಬಗ್ಗೆ ಮಾತನಾಡಿದ್ದಾರೆ. ಅತಿಯಾದ ತಾಂತ್ರಿಕ ಪ್ರಗತಿಯಿಂದಾಗಿ ಸುಲಭವಾಗಿ ಕರಗತವಾಗುವ ತಾಂತ್ರಿಕ ಜ್ಞಾನ ನಮ್ಮ ಮಕ್ಕಳನ್ನು ವಿಧ್ವಂಸಕಕಾರಿಗಳನ್ನಾಗಿ ಮಾಡುತ್ತಿದೆ. ವ್ಯಾಪಾರೋದ್ಯಮವಾಗಿರುವ ನಮ್ಮ ಶಾಲಾಶಿಕ್ಷಣ ಇದಕ್ಕೆ ಪೂರಕವಾಗಿದೆ. ತಾಂತ್ರಿಕ ಪ್ರಗತಿಯ ಜೊತೆಜೊತೆಗೇ ವಿವೇಕವನ್ನು ಬೆಳೆಸುವ ಶಿಕ್ಷಣದ ಕೊರತೆ ಕಾಡುತ್ತಿದೆ.

ಆಶಾದಾಯಕವಾದ ಸಂಗತಿಯೆಂದರೆ ಈ ಪುಸ್ತಕದಲ್ಲಿ ನಡೆದಿರುವ ಚಿಂತನೆಯ ಜಾಡಿನಲ್ಲೆ ಇಂದು ವಿಶ್ವದಾದ್ಯಂತ ಅನೇಕರು ಚಿಂತಿಸುತ್ತಿದ್ದಾರೆ. ಈ ಬಗೆಯ ಚಿಂತನೆ ಅತ್ಯಗತ್ಯ ಎಂಬುದನ್ನು ಇದು ಸೂಚಿಸುವುದಲ್ಲದೆ ಆರೋಗ್ಯವಂತ ಮನಸ್ಸುಗಳು ಪ್ರಪಂಚದಾದ್ಯಂತ ಏಕಪ್ರಕಾರವಾಗಿ ಚಿಂತಿಸುತ್ತವೆ ಎಂಬುದನ್ನು ತೋರಿಸುತ್ತದೆ. ಈ ಎಲ್ಲ ಧೀಮಂತ ಮನಸ್ಸುಗಳನ್ನು ಕೃತಜ್ಞತೆಯಿಂದ ನೆನೆಯುತ್ತ ನಾನು ನನ್ನ ವಿಚಾರಧಾರೆಯನ್ನು ನಮ್ಮ ಭಾರತೀಯ ಚೌಕಟ್ಟಿನಲ್ಲಿ ಹರಿಯಬಿಟ್ಟಿದ್ದೇನೆ.

ಪುಸ್ತಕವನ್ನು ಪ್ರಕಟಣಪೂರ್ವದಲ್ಲೆ ಅತ್ಯಂತ ಆಸಕ್ತಿಯಿಂದ ಓದಿ ನನ್ನೊಡನೆ ಚರ್ಚಿಸಿ ಸಲಹೆಗಳನ್ನು ನೀಡಿರುವ ಡಾ. ಗಣನಾಥ್, ಡಾ. ಸಂಜೀವ ಕುಲಕರ್ಣಿ ಮತ್ತು ನಮ್ಮ ದೀನಬಂಧು ಶಿಕ್ಷಕರ ತಂಡಕ್ಕೆ ನಾನು ಆಭಾರಿಯಾಗಿದ್ದೇನೆ. ಅನೇಕ ಹಿರಿಯ ಚಿಂತಕರು ತಮ್ಮ ಅನಿಸಿಕೆಗಳನ್ನು ಮತ್ತು ಪುಸ್ತಕದಿಂದ ಗ್ರಹಿಸಬೇಕಾದ ಮುಖ್ಯಾಂಶಗಳನ್ನು ಕುರಿತು ಬರೆದುಕೊಟ್ಟಿದ್ದಾರೆ. ಈ ಬರಹಗಳನ್ನು ಪುಸ್ತಕದ ಕೊನೆಯಲ್ಲಿ ಸೇರಿಸಲಾಗಿದೆ. ಪುಸ್ತಕವನ್ನು ಕುರಿತು ಮೌಲಿಕವಾದ ಮಾತುಗಳನ್ನಾಡಿರುವ ಈ ಎಲ್ಲ ಮಹನೀಯರಿಗೂ ನನ್ನ ಕೃತಜ್ಞತೆಗಳು. ಡಾ.ಎಚ್.ಎನ್. ಮುರಳೀಧರ ಅವರು ನನ್ನನ್ನು ಒತ್ತಾಯಮಾಡದೇ ಇದ್ದಿದ್ದರೆ ಈ ಪುಸ್ತಕ ಬೆಳಕು ಕಾಣುತ್ತಲೇ ಇರಲಿಲ್ಲ. ಪುಸ್ತಕವನ್ನು ಬರೆಸಿದ್ದೂ ಅಲ್ಲದೆ ಅದನ್ನು ಮತ್ತೆ ಮತ್ತೆ ಓದಿ ವಿಚಾರಗಳ ಸ್ಪಷ್ಟತೆಗಾಗಿ ಅನೇಕ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಜೊತೆಗೆ ಅತ್ಯುತ್ತಮವಾದ ಮುನ್ನುಡಿಯನ್ನೂ ಬರೆದುಕೊಟ್ಟಿದ್ದಾರೆ. ಗೆಳೆಯ ಮುರಳೀಧರ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಇಡೀ ಪುಸ್ತಕವನ್ನು ಅತ್ಯಂತ ಶ್ರದ್ಧೆಯಿಂದ ಟೈಪ್ ಮಾಡಿಕೊಟ್ಟಿರುವ ಎನ್.ಸವಿತ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಪುಸ್ತಕವು ಶಿಕ್ಷಣ ಕ್ಷೇತ್ರದಲ್ಲಿ ದುಡಿಯುತ್ತಿರುವ ಎಲ್ಲ ಸಹೃದಯರ ಕೈಸೇರಿ ಅವರ ಮನಸ್ಸನ್ನು ಗೆಲ್ಲಬೇಕೆಂಬ ಒಂದು ಮಹದಾಸೆ ಇದೆ. ವ್ಯಾಪಕವಾದ ವಿತರಣಾ ಜಾಲವನ್ನು ಹೊಂದಿರುವ ಅಭಿರುಚಿ ಪ್ರಕಾಶನ ಇದನ್ನು ಪ್ರಕಟಿಸಲು ಒಪ್ಪಿರುವುದು ನನ್ನ ಸುಕೃತ ಎಂದೇ ಭಾವಿಸುತ್ತೇನೆ. ಈ ನನ್ನ ಪುಸ್ತಕವನ್ನು ಅತ್ಯಂತ ಪ್ರೀತಿಯಿಂದ ಪ್ರಕಟಿಸಲು ಸಮ್ಮತಿಸಿರುವ ಶ್ರೀ ಗಣೇಶ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಪುಸ್ತಕದ ಹೃದಯವನ್ನೇ ತೆರೆದಿಟ್ಟಂತೆ ಮುಖಪುಟವನ್ನು ರಚಿಸಿಕೊಟ್ಟಿರುವ ಗೆಳೆಯ ಸಚ್ಚಿದಾನಂದ ಅವರಿಗೆ ನಾನು ಅಭಾರಿಯಾಗಿದ್ದೇನೆ.

ಜಿ.ಎಸ್. ಜಯದೇವ

# ಪರಿವಿಡಿ

# ೧. ಶಿಕ್ಷಣ ಮತ್ತು ಬದುಕು

## ತೃಪ್ತವಾಗದ ಆಕಾಂಕ್ಷೆಗಳು

ಶಿಕ್ಷಣವನ್ನು ಕುರಿತಾದ ಮೂಲಭೂತ ಪ್ರಶ್ನೆಗಳು ನಮ್ಮ ಇಂದಿನ ಬದುಕಿನೊಂದಿಗೆ ನೇರವಾಗಿ ಸಂಬಂಧ ಪಡೆದಿವೆ. ಇದೊಂದು ಅನಿವಾರ್ಯ. ಆದರೆ ಇಂದಿನ ಶಿಕ್ಷಣ ನಮ್ಮ ದಿನನಿತ್ಯದ ಬದುಕಿನ ವಾಸ್ತವತೆಗಳನ್ನು ಎದುರಿಸಲು ನಮ್ಮ ಮಕ್ಕಳನ್ನು ತಯಾರು ಮಾಡುತ್ತಿದೆಯೇ ಎಂಬುದು ಈ ಹೊತ್ತಿನ ಅತ್ಯಂತ ಪ್ರಮುಖ ಪ್ರಶ್ನೆ. ಇಂತಹ ಒಂದು ಪ್ರಶ್ನೆಯನ್ನು ಕೇಳಬೇಕಾದ ಅಸಹಜ ಸ್ಥಿತಿಯಲ್ಲಿ ನಾವಿರುವುದೇ ಒಂದು ದುರಂತ. ಏಕೆಂದರೆ, ಜಾಗತೀಕರಣ ಮತ್ತು ಎಣೆಯಿಲ್ಲದ ತಾಂತ್ರಿಕ ಪ್ರಗತಿ ಮನುಷ್ಯನ ದುರಾಸೆಗಳಿಗೆ ಕೊನೆಯೇ ಇಲ್ಲದಂತೆ ಮಾಡಿದೆ. ಹಾಗಾಗಿ ಬದುಕಿನ ಯಾವ ಪರಿಮಿತಿಗಳಿಗೂ ಒಳಪಡದೆ ಯಾರು ಬೇಕಾದರೂ ಮಣ್ಣಿನ ಕಣವಾಗಿ ಹುಟ್ಟಿ ಚಿನ್ನದ ಬೆಟ್ಟವಾಗಿ ಬೆಳೆಯಬಹುದು. ಈ ಸಾಧ್ಯತೆಯನ್ನು ನಮ್ಮ ಇಂದಿನ ತಾಂತ್ರಿಕ ಜಗತ್ತು ನಮ್ಮೆದುರಿಗೆ ತೆರೆದಿಟ್ಟಿದೆ. ಹೀಗೆ ಈ ಅಪರಿಮಿತ ಸಾಧ್ಯತೆಗಳ ನಡುವೆ ಎಲ್ಲ ಕ್ಷೇತ್ರಗಳಲ್ಲೂ ಮನುಷ್ಯ ಬದುಕಿನ ವಾಸ್ತವತೆಗಳನ್ನು ಮರೆತು ಕನಸುಗಳ ಬೆನ್ನಟ್ಟಿ ಓಡುತ್ತಿದ್ದಾನೆ.

ಹೆಚ್ಚು, ಮತ್ತೂ ಹೆಚ್ಚು ಎಂದು ಬೆಳೆಯಬಹುದಾದ ಸಾಧ್ಯತೆಗಳು ಕಣ್ಣೆದುರಿಗೇ ಇರಬೇಕಾದರೆ ಮಹತ್ವಾಕಾಂಕ್ಷೆಯ ಮನಸ್ಸುಗಳು ತೃಪ್ತವಾಗುವುದು ಸಾಧ್ಯವೇ? ಮಹತ್ತರವಾದುದನ್ನು ಸಾಧಿಸಿದರೂ ಈ ಮನಸ್ಸುಗಳು ಅತೃಪ್ತಿಯ ದಾವಾನಲವಾಗಿಯೇ ಉಳಿಯುತ್ತವೆ. ಏಕೆಂದರೆ ಬೆಳೆಯುವ, ಗಳಿಸುವ ಸಾಧ್ಯತೆಗೆ ಕೊನೆಯೆಂಬುದೇ ಇಲ್ಲ. "World is not enough" ಎಂಬ ಜೇಮ್ಸ್‌ಬಾಂಡ್ ಸಿನಿಮಾ ಬಂದಿರುವುದು ತಾಂತ್ರಿಕ ಸಾಧ್ಯತೆ ಹುಟ್ಟಿಸುವ ದುರಾಸೆಯನ್ನು ಪಾಶ್ಚಾತ್ಯ ಜಗತ್ತೂ ಗುರುತಿಸುತ್ತಿರುವ ಹಿನ್ನಲೆಯಲ್ಲಿ. ಈ ಅತೃಪ್ತಿಯ ವಿಷಮ ಪರಿಣಾಮಗಳನ್ನು ವ್ಯಕ್ತಿಯೊಬ್ಬನೇ ಅನುಭವಿಸುವುದಿಲ್ಲ. ಇದು ಇಡೀ ಸಮಾಜಕ್ಕೆ ಹರಡುತ್ತದೆ. ಪರಿಸರ ನಾಶವಾಗುತ್ತದೆ. ಬದುಕಿನ ಸಂಬಂಧಗಳ ಮಾಧುರ್ಯವನ್ನು ನಾವು ಕಳೆದುಕೊಳ್ಳುತ್ತಿದ್ದೇವೆ. ವೈಯಕ್ತಿಕ ಬದುಕು – ಸಾಧನೆಗಳ ಭರದಲ್ಲಿ ತನ್ನ ಸಮಷ್ಟಿ ಜವಾಬ್ದಾರಿಯನ್ನು ಮರೆತ ಮನುಷ್ಯ ದುರಾಸೆಗಳ, ಅತೃಪ್ತಿಯ ಮೂಟೆಯಾಗಿ ಬದಲಾಗುತ್ತಾನೆ. ಇಂತಹ ದುರ್ದೆಸೆಗೆ

ಬಂದು ನಿಂತಾಗ ನಮ್ಮ ಶಿಕ್ಷಣ ನಮಗೆ ಏನನ್ನು ಕೊಟ್ಟಿತು, ಏನನ್ನು ಕಲಿಸಿತು ಎಂದು ಆಲೋಚಿಸಲು ಪ್ರಾರಂಭಿಸುತ್ತೇವೆ.

**ಶಿಕ್ಷಣದಿಂದ ಪಡೆಯುತ್ತಿರುವುದೇನು ?**

ಇಂದಿನ ಶಿಕ್ಷಣ ನಾವೇ ಸೃಷ್ಟಿಸಿಕೊಂಡ ಬದುಕಿನ ಕೃತಕ ಆವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಾತ್ರ ನಮ್ಮ ಮಕ್ಕಳನ್ನು ಸಿದ್ಧಗೊಳಿಸುತ್ತಿರುವಂತೆ ಕಾಣುತ್ತದೆ. ಬದುಕಿನ ಮೂಲಭೂತ ಆವಶ್ಯಕತೆಗಳನ್ನು ಪೂರೈಸಿಕೊಳ್ಳಲಾರದೆ ನಲುನಲುಗಿ ನೊಂದರೂ ನಮ್ಮ ಬಹುಸಂಖ್ಯಾತ ಪೋಷಕರು ತಮ್ಮ ಮಕ್ಕಳನ್ನು ಈ ವಾಸ್ತವ ಲೋಕದ ಭಾಗವಾಗಿ ನೋಡುವುದೇ ಇಲ್ಲ. ಅದಮ್ಯ ಸಾಧ್ಯತೆಯ ಈ ಮಕ್ಕಳು ನಮ್ಮ ಕನಸಿನ ಲೋಕದ ಕೂಸುಗಳು. ಈ ಮಕ್ಕಳ ಅಪರಿಮಿತಿ ಸಾಧ್ಯತೆಗಳನ್ನು ನಾವು ಆರೋಗ್ಯಕರವಾದ ಆಯಾಮದಲ್ಲಿ ನೋಡಿದ್ದರೆ ಚೆನ್ನಾಗಿತ್ತು. ಆದರೆ ವಾಸ್ತವದಲ್ಲಿ ಈ ಮಕ್ಕಳ ಸಾಧ್ಯತೆ ಆಯಾ ಮಕ್ಕಳ ಸುಪ್ತ ಸಾಮರ್ಥ್ಯದ ಸುತ್ತ ಹೆಣೆದ ಕನಸಾಗಿಲ್ಲ. ಬದಲಿಗೆ ಈ ತಂದೆತಾಯಿಗಳ ಅತೃಪ್ತಿ, ವಿಫಲತೆಗಳು ಸೃಷ್ಟಿಸಿದ ಕನಸುಗಳಾಗಿವೆ. ತಾವು ಪಡೆಯಲಾರದ್ದನ್ನು, ಸಾಧಿಸಲಾರದ್ದನ್ನು ಮಕ್ಕಳು ಸಾಧಿಸಬೇಕೆಂಬುದು ಇವರ ಕನಸು. ಈ ಕನಸಿನ ಚೌಕಟ್ಟನ್ನು ಮಕ್ಕಳು ಮೀರದಂತೆ ನೋಡಿಕೊಳ್ಳುವುದೇ ತಂದೆ ತಾಯಿಗಳು ಬಯಸುವ ಶಿಕ್ಷಣ. ಬೇಡಿಕೆಗೆ ತಕ್ಕಂತೆ ಪೂರೈಕೆ ಮಾಡುವುದೇ ನಮ್ಮ ಶಿಕ್ಷಣದ ಮಾರುಕಟ್ಟೆಯ ಕೆಲಸ.

ಹಾಗಾದರೆ ಈ ತಂದೆತಾಯಿಗಳಿಗೆ ಬದುಕಿನ ವಾಸ್ತವತೆಗಳ, ಪರಿಮಿತಿಗಳ ಅರಿವು ಇಲ್ಲವೇ? ಉದಾಹರಣೆಗೆ ಕೃಷಿಪ್ರಧಾನವಾದ ಈ ದೇಶದಲ್ಲಿ ರಾಗಿ ಜೋಳ ಬೆಳೆಯುವ ಈ ರೈತರ ಮಕ್ಕಳಿಗೆ ಮೊದಲನೇ ತರಗತಿಯಿಂದಲೇ ಇಂಗ್ಲಿಷ್ ಕಲಿಸಬೇಕೆಂಬ ಬೇಡಿಕೆ ದಟ್ಟವಾಗಿ ಹಬ್ಬಿರುವುದಾದರೂ ಏಕೆ? ಇಂತಹ ಒಂದು ಸಂದರ್ಭ ಎದುರಾದಾಗ "ರೈತರ ಮಕ್ಕಳು ಏಕೆ ಇಂಗ್ಲಿಷ್ ಕಲಿತು ಮುಂದೆ ಬರಬಾರದು" ಎಂಬ ಪ್ರಶ್ನೆ ಹಾಕುವವರು ಜನಸಾಮಾನ್ಯರಷ್ಟೇ ಅಲ್ಲ. ಇಂತಹ ಪ್ರಶ್ನೆಯನ್ನು ನಮ್ಮ ನಡುವಿನ ಪ್ರಜ್ಞಾವಂತರೂ ಕೇಳುತ್ತಾರೆ. ಅನೇಕ ಪ್ರಾದೇಶಿಕ ವ್ಯತ್ಯಾಸಗಳಿದ್ದರೂ ನಮ್ಮ ದೇಶದ ಶೇಕಡ 82 ಭಾಗ ರೈತರು ಸಣ್ಣ ಹಿಡುವಳಿದಾರರು. ಅವರ ಸರಾಸರಿ ಭೂಮಿಯ ವ್ಯಾಪ್ತಿ ಒಂದರಿಂದ ಮೂರು ಹೆಕ್ಟೇರ್ ದಾಟಲಾರದು. ಸಣ್ಣ ಹಿಡುವಳಿದಾರರೇ ಪ್ರಧಾನವಾಗಿರುವ ನಮ್ಮ ದೇಶದಲ್ಲಿ ಶೇಕಡ ಎಂಬತ್ತರಷ್ಟು ಜನ ವ್ಯವಸಾಯವನ್ನು ಅವಲಂಬಿಸಿ ಬದುಕಬೇಕಾಗಿರುವಾಗ ಕೃಷಿಜೀವನ ಕನಿಷ್ಠವೆಂದು ಪರಿಗಣಿಸುವ ಅವಿವೇಕಕ್ಕೆ ನಾವೆಲ್ಲ ಬಂದು ನಿಂತಿರುವುದಾದರೂ ಹೇಗೆ? ಸರ್ಕಾರದ ಒಂದು ಅಂಕಿಅಂಶಗಳ ಪ್ರಕಾರ ಶೇಕಡ ನಲವತ್ತರಷ್ಟು ರೈತರು ಕೃಷಿಜೀವನವನ್ನು ತೊರೆಯುವ ಸಿದ್ಧತೆಯಲ್ಲಿದ್ದಾರೆ. ಅಥವಾ ತಮ್ಮ ಮಕ್ಕಳಾದರೂ ಕೃಷಿ ಜೀವನವನ್ನು ಅವಲಂಬಿಸದಿರಲಿ, ಬದುಕಿನ ಬೇರೆ ಮಾರ್ಗ ಹುಡುಕಲಿ ಎಂದು ಆಶಿಸುತ್ತಾರೆ. ಈ ಹಿನ್ನೆಲೆಯಲ್ಲಿ ನಮ್ಮ ರಾಷ್ಟ್ರೀಯ

ನೀತಿ ಹೇಗಿದೆ ಎಂದು ಗಮನಿಸೋಣ. 1966–69ರಲ್ಲಿ ವ್ಯವಸಾಯಕ್ಕಾಗಿ ನಾವು ಮೀಸಲಿರಿಸಿದ ಹಣ ಶೇಕಡ 31. ಆದರೆ 2002–2007ರ ಹೊತ್ತಿಗೆ ಶೇಕಡ 10 ಭಾಗ ಬಜೆಟ್ ಅನ್ನು ಮಾತ್ರ ಮೀಸಲಾಗಿಟ್ಟಿದ್ದೇವೆ. ದೇಶದ ಬೆನ್ನೆಲುಬು ವ್ಯವಸಾಯ ಎಂದು ಹೇಳಿಕೊಳ್ಳುವ ನಾವು ರಾಷ್ಟ್ರೀಯ ವಿತ್ತ ನೀತಿಯಲ್ಲಿ ಯಾವುದಕ್ಕೆ ಆದ್ಯತೆ ಕೊಡುತ್ತಿದ್ದೇವೆ? ನಮ್ಮ ಗ್ರಾಮೀಣ ಪ್ರದೇಶದ ಶೇಕಡ ಎಂಬತ್ತರಷ್ಟು ಜನಕ್ಕೆ ಅಗತ್ಯವಾದಷ್ಟು ಕ್ಯಾಲೊರಿಗಳ ಆಹಾರವೇ ಸಿಗುತ್ತಿಲ್ಲ. ಆದರೂ ನಮ್ಮ ಸರ್ಕಾರದ ಕುರುಡು ಆರ್ಥಿಕ ನೀತಿಗೆ ಏನೆನ್ನಬೇಕು? ಇಂತಹ ಒಂದು ಚಿಂತನಕ್ರಮದ ಫಲವಾಗಿ ಹುಟ್ಟುವ ಶಿಕ್ಷಣ ಮಾದರಿಗಳು ಮಕ್ಕಳಿಗೆ ಯಾವ ಹೆಗ್ಗುರಿಯನ್ನು ಹಾಕಿಕೊಡುತ್ತವೆ? ನಮ್ಮ ಈ ಶಿಕ್ಷಣ ಮುಂದಿನ ಪ್ರಜೆಗಳಾಗುವ ನಮ್ಮ ಮಕ್ಕಳಿಗೆ ಈ ಸಾಮಾಜಿಕ ಜವಾಬ್ದಾರಿಗಳನ್ನು ಕುರಿತು ಚಿಂತಿಸಲು ಅನುವುಮಾಡಿಕೊಡುತ್ತಿದೆಯೆ?

**ಕೃತಕ ಕನಸುಗಳು**

ಬಹಳಷ್ಟು ಪೋಷಕರು ಹೇಳುವ ಮಾತು ಇದು: "ಸದ್ಯ ನಾವು ಪಟ್ಟ ಕಷ್ಟವೇ ಸಾಕು; ಈ ಕಷ್ಟ ನಮ್ಮ ಮಕ್ಕಳಿಗೆ ಬೇಡ". ಈ ಹತಾಶೆಯ ಹಿಂದೆ ಬದುಕಿನ ವಾಸ್ತವತೆಗಳ, ಪರಿಮಿತಿಗಳ ಅರಿವು ಇವರಿಗಿದ್ದರೂ ಇವರು ಕಾಣುವ ಕನಸು ಎಂದರೆ – ತಂತ್ರಜ್ಞಾನದ ಪರಿಣತಿಯನ್ನು ಸಾಧಿಸುವ ಮೂಲಕ ತಮ್ಮ ಮಕ್ಕಳು ಮುನ್ನಡೆಯಲಿ; ಈ ಸಾಮಾನ್ಯವಾದ ಕೃಷಿಜೀವನವನ್ನು ಅಥವಾ ಕಾರ್ಮಿಕ ಜೀವನವನ್ನು ನಡೆಸುವ ಪಾಡು ಅವರಿಗೆ ಎಂದಿಗೂ ಬರದಿರಲಿ ಎಂದು. ಹಾಗಾಗಿ ಕಂಪ್ಯೂಟರ್ ತಂತ್ರಜ್ಞಾನವೋ, ಬಾಹ್ಯಾಕಾಶ ಜ್ಞಾನವೋ ಒಟ್ಟಿನಲ್ಲಿ ಯಾವುದೆಲ್ಲವೂ ಈ ನೆಲದಿಂದ, ಈ ಮಣ್ಣಿನ ವಾಸನೆಯಿಂದ ದೂರವಾಗಿ, ಆದ್ದರಿಂದ ಮಾತ್ರವೇ ಅದ್ವಿತೀಯ ಎನಿಸಿಕೊಳ್ಳುವುದೊ ಆ ಕನಸಿನ ಲೋಕಕ್ಕೆ ಮಕ್ಕಳನ್ನು ಸಿದ್ಧಪಡಿಸುವ ಶಿಕ್ಷಣಕ್ಕೆ ಬೇಡಿಕೆ ಉಂಟಾಗಿದೆ. ಮಣ್ಣಿನೊಡನಾಟದ ಸರಳ ಜೀವನದಲ್ಲೂ ಸಂತೋಷವಿದೆ ಎಂಬ ಸತ್ಯವನ್ನು ನಮ್ಮ ಶಿಕ್ಷಣ ತಿಳಿಸಿಕೊಡುತ್ತಿಲ್ಲ, ಅಗತ್ಯಕ್ಕಿಂತ ಹೆಚ್ಚು ಸಂಗ್ರಹಿಸುವುದು ಸಾಮಾಜಿಕ ಅಪರಾಧವಷ್ಟೇ ಅಲ್ಲ, ಅದು ಬದುಕಿನ ನಿಜವಾದ ಸಂತೋಷಕ್ಕೆ ಕಂಟಕ ಎಂಬ ಸತ್ಯವನ್ನು ತಿಳಿಸಿಕೊಡುತ್ತಿಲ್ಲ. 'ಹಿತ್ತಲ ಗಿಡ ಮದ್ದಲ್ಲ' ಎಂಬ ಗಾದೆ ಯಾವುದು ಸಹಜವಾಗಿ ನಮ್ಮ ಕಾಲಬುಡದಲ್ಲೇ ಸಿಗುತ್ತದೆಯೋ ಮತ್ತು ನಮ್ಮ ನಿಜವಾದ ಆವಶ್ಯಕತೆಗಳನ್ನು ಪೂರೈಸುತ್ತದೆಯೋ ಅದರ ಬಗ್ಗೆ ತಿರಸ್ಕಾರ ಭಾವ ತಾಳುವುದು ಮನುಷ್ಯನ ಸ್ವಭಾವವಾಗಿದೆ. ಈ ದೌರ್ಬಲ್ಯವನ್ನು ಬಂಡವಾಳ ಮಾಡಿಕೊಂಡಿರುವ ಜಾಗತೀಕರಣ ನೈಜವಾಗಿ ಸಿಗುವ ಎಲ್ಲವನ್ನೂ ಕೃತಕ ಆಕಾರ, ಪ್ಯಾಕೇಜುಗಳಲ್ಲಿ ನೀಡಿ ಸಹಜವಾದದ್ದನ್ನು ತಿರಸ್ಕರಿಸುವ ಮತ್ತು ಅಸಹಜ ಮಾಲನ್ನು ದುಬಾರಿ ಬೆಲೆ ಕೊಟ್ಟು ಕಳಪೆ ರೂಪದಲ್ಲಿ ಪಡೆಯುವ ಸಂಸ್ಕೃತಿಯನ್ನು ಹುಟ್ಟುಹಾಕಿದೆ. ಜಾಗತಿಕ ಮಾರುಕಟ್ಟೆಯ ಮೂಲ ಬಂಡವಾಳ ಎಂದರೆ ಹೀಗೆ ಸುಲಭವಾಗಿ ಸಿಗುವ ವಸ್ತುವನ್ನು ಕೃತಕ ಪ್ಯಾಕೇಜುಗಳಲ್ಲಿ ಕೊಡುವ ಮೂಲಕ ಜನರನ್ನು ಮರುಳುಮಾಡುವುದು.

ಒಟ್ಟಿನಲ್ಲಿ ಈ ಮಣ್ಣಿನ ಬದುಕಿನಿಂದ ದೂರವಾಗುವ ಮೂಲಕ ಮಾತ್ರ ಜೀವನದ ಸಾರ್ಥಕತೆಯನ್ನು ಪಡೆಯಬಹುದೆಂಬ ಭ್ರಮೆಯನ್ನು ಸೃಷ್ಟಿಸಿ ತನ್ನ ವಸ್ತುಗಳಿಗೆ ಬೇಡಿಕೆ ಹೆಚ್ಚಿಸಿಕೊಳ್ಳುವುದು ಜಾಗತಿಕ ಮಾರುಕಟ್ಟೆಯ ವಿಧಾನ.

### ಶೇಖರಣೆಯ ಸಂಸ್ಕೃತಿ

ಜಾಗತಿಕ ಮಾರುಕಟ್ಟೆಯನ್ನು ನಿಯಂತ್ರಿಸುವ ಪಾಶ್ಚಾತ್ಯ ಸಂಸ್ಕೃತಿಗೆ ಅನಾದಿ ಕಾಲದಿಂದಲೂ ಮರಗಟ್ಟುವ ಚಳಿಯ ಸಮಸ್ಯೆ ಇದೆ. ಇಂತಹ ವಿಷಮ ವಾತಾವರಣದಲ್ಲಿ ಜೀವವೈವಿಧ್ಯವಾಗಲೀ ಅಥವಾ ಆಹಾರ ವೈವಿಧ್ಯತೆಯಾಗಲಿ ಸಾಧ್ಯವಿಲ್ಲ. ವರ್ಷದ ಕೆಲವೇ ತಿಂಗಳುಗಳಲ್ಲಿ ಬೆಳೆ ತೆಗೆದು ಒಕ್ಕಣೆ ಮಾಡಿ ತುರ್ತು ಸಮಯದಲ್ಲಿ ಬಳಕೆಗೆ ಬರುವಂತೆ ಶೇಖರಿಸಿಡುವುದು ಈ ಸಂಸ್ಕೃತಿಯಲ್ಲಿ ಸ್ವಾಭಾವಿಕವಾಗಿ ಬೆಳೆದು ಬಂದ ಜೀವನವಿಧಾನ. ಹಾಗಾಗಿ ಅವರು ಕೃತಕ ಶೇಖರಣಾ ವಿಧಾನಗಳಲ್ಲಿ ಪರಿಣತರು. ಇದು ಅವರ ಸಂಸ್ಕೃತಿಯ ಭಾಗ. ಆದರೆ ಉಷ್ಣವಲಯದಲ್ಲಿ ವಾಸಿಸುವ ನಮಗೆ ಪ್ರಕೃತಿ ಸಾಕಷ್ಟು ಬೆಳಕು ಮತ್ತು ಶಾಖವನ್ನು ಕೊಡುತ್ತದೆ. ವೈವಿಧ್ಯಮಯವಾದ ಸಸ್ಯ-ಪ್ರಾಣಿ ಸಂಕುಲಗಳು ಮಿಲಿಯಾಂತರ ವರ್ಷಗಳಿಂದಲೂ ಈ ನೆಲದಲ್ಲಿ ವಿಕಾಸವಾಗಿವೆ. ಶೀತವಲಯದ ವೈಪರೀತ್ಯಗಳು ನಮ್ಮನ್ನು ಕಾಡುವುದಿಲ್ಲ. ಸಹಜವಾಗಿ ಆಯಾ ಕಾಲದಲ್ಲಿ ಸಿಗುವ ಬಗೆಬಗೆಯ ಆಹಾರವನ್ನು ಋತುಮಾನಕ್ಕೆ ತಕ್ಕಂತೆ ಬಳಸುತ್ತ ನಮ್ಮದೇ ಆದ ಆಹಾರ ಪದ್ಧತಿಯನ್ನು ಬೆಳೆಸಿಕೊಂಡಿದ್ದೇವೆ. ಮಾವಿನ ಹಣ್ಣಿನ ಕಾಲದಲ್ಲಿ ಮಾವು ತಿನ್ನುತ್ತೇವೆ. ಅಕಾಲದಲ್ಲಿ ಮಾವು ತಿನ್ನಬೇಕೆಂಬುದು ಕೆಲವು ರಾಜರ ಬಯಕೆಯೇ ಹೊರತು ಜನಸಾಮಾನ್ಯರು ಇಂತಹದನ್ನೆಲ್ಲ ಊಹಿಸುತ್ತಲೂ ಇರಲಿಲ್ಲ. ಆದರೆ ಫುಡ್ ಪ್ರೊಸೆಸಿಂಗ್ ಪ್ಯಾಕೇಜ್‌ನಂತಹ ತಂತ್ರಜ್ಞಾನ ಹುಟ್ಟಿದ ಮೇಲೆ ಕೃತಕವಾಗಿ ಇವುಗಳನ್ನು ಶೇಖರಿಸಿ ಅಕಾಲದಲ್ಲಿ ತಿನ್ನುವ ಪರಿಪಾಠ ಶುರುವಾಗಿದೆ ಅಥವಾ ಅಡಿಗೆ ಮಾಡದೆ 'ರೆಡಿ ಟು ಈಟ್' ಆಹಾರಗಳನ್ನು ತಿನ್ನುವುದು ಒಂದು ಫ್ಯಾಷನ್ ಆಗಿದೆ. ಇದು ಪಾಶ್ಚಾತ್ಯ ನೆಲದ ಆವಶ್ಯಕತೆಯೇ ಹೊರತು ನಮ್ಮ ವಾತಾವರಣಕ್ಕೆ ಇಂತಹ ಸರ್ಕಸ್‌ಗಳ ಅಗತ್ಯವೇ ಇಲ್ಲ. ಆದರೆ ಜಾಗತಿಕ ಮಾರುಕಟ್ಟೆ ಜಾಹೀರಾತುಗಳ ಮೂಲಕ ಮನುಷ್ಯನಲ್ಲಿ ಕೃತಕ ಆವಶ್ಯಕತೆಗಳನ್ನು ಹುಟ್ಟುಹಾಕಿದೆ. ಇದರ ಪರಿಣಾವೇನೆಂದರೆ ಸ್ವಾಭಾವಿಕವಾಗಿ ಸಿಗುವ ವಸ್ತುಗಳನ್ನು ಕೃತಕಗೊಳಿಸಿ ಸೇವಿಸಬೇಕಾದ ಅಥವಾ ಸೇವಿಸಲು ಬಯಸುವ ವಿಚಿತ್ರ ಸಂದರ್ಭ ಏರ್ಪಟ್ಟಿದೆ. ಹೀಗೆ 'ಫುಡ್ ಪ್ರೊಸೆಸಿಂಗ್' ಮಾಡುವುದರಿಂದ ಆಹಾರ ತನ್ನ ಗುಣಮಟ್ಟ ಕಳೆದುಕೊಳ್ಳುವುದಷ್ಟೇ ಅಲ್ಲ; ಈ ಕೃತಕ ಪ್ಯಾಕೇಜ್‌ಗಾಗಿ ಹೆಚ್ಚುವರಿ ಹಣ ತೆರಬೇಕಾದ್ದು ಕೊಳ್ಳುಗ. ಜೊತೆಗೆ ಹೀಗೆ ಮಾಡಿದ ಪ್ಯಾಕಿಂಗ್ ವಸ್ತುಗಳು ಎಂದರೆ ಪ್ಲಾಸ್ಟಿಕ್, ಟಿನ್ ಇತ್ಯಾದಿ ವಸ್ತುಗಳು ಪರಿಸರದ ಮೇಲೆ ಒತ್ತಡವನ್ನು ಹೇರುತ್ತವೆ. ನಿಸರ್ಗ ಹಾಳಾಗುತ್ತದೆ. ಕಂಪನಿಗಳು ದೈತ್ಯಾಕಾರವಾಗಿ ಬೆಳೆಯುತ್ತವೆ. ಇಷ್ಟೆಲ್ಲಾ

ಕಸರತ್ತುಗಳಿಂದ ಕೊನೆಗೆ ಮನುಷ್ಯ ಪಡೆದ ಲಾಭವೇನು? ಬಯಸಿದ ಕೂಡಲೇ ಕೈಗೆಟುಕುವ ತಿನ್ನುವ ವಸ್ತುಗಳು! 'ನ್ಯೂಡಲ್ಸ್ ಸಂಸ್ಕೃತಿ' ಯನ್ನೇ ನೋಡಿ. ನ್ಯೂಡಲ್ಸ್ ತಿನ್ನುವವರು ಅಡಿಗೆ ಮಾಡಲು ಸಮಯವಿಲ್ಲದವರಷ್ಟೆ ಅಲ್ಲ ಕುತೂಹಲಕ್ಕಾಗಿ ಕೆಲವರು, ಆಕರ್ಷಕ ಪ್ಯಾಕಿಂಗ್‌ಗಳ ಕಾರಣದಿಂದ ಕೆಲವರು, ರುಚಿಗಾಗಿ ಕೆಲವರು ಅದರ ಬೆನ್ನಹಿಂದೆ ಬಿದ್ದಿದ್ದಾರೆ. ಹೀಗೆ ಸ್ವಾಭಾವಿಕವಾಗಿ ಆಚರಣೆಯಲ್ಲಿದ್ದ ಆರೋಗ್ಯಕರ ಆಹಾರ ಪದ್ಧತಿಯನ್ನು ಕೃತಕವಾದ ಅನಾರೋಗ್ಯಕರ ಆಹಾರ ಪದ್ಧತಿಗೆ ಬದಲಾಯಿಸಿಕೊಳ್ಳುವುದೇ ಪ್ರಗತಿಯ ಸಂಕೇತ ಎಂದು ಭಾವಿಸುವ ಮೂರ್ಖತನಕ್ಕೆ ನಾವೆಲ್ಲಾ ಬಂದು ನಿಂತಿದ್ದೇವೆ.

**ಶಾಲಾವ್ಯವಸ್ಥೆ ಮತ್ತು ಸ್ವಂತಿಕೆ**

ನಮ್ಮ ಶಾಲಾಶಿಕ್ಷಣ ಬದಲಾಗುತ್ತಿರುವ ಈ ಕುರಿತು ಅರಿವು ಮೂಡಿಸಬೇಡವೆ? ಒಂದು ವೇಳೆ ಹೀಗೆ ಅರಿವು ಮೂಡಿಸಬೇಕಾದರೆ ಶಾಲಾ ವ್ಯವಸ್ಥೆ ಪ್ರತ್ಯಕ್ಷವಾಗಿಯೋ ಅಥವಾ ಪರೋಕ್ಷವಾಗಿಯೋ ಜಾಗತಿಕ ಮಾರುಕಟ್ಟೆಯ ಹಿಡಿತಕ್ಕೆ ಸಿಲುಕಬಾರದು. ಅಥವಾ ಶಾಲೆಯೊಂದು ತನ್ನ ವಿದ್ಯಾರ್ಥಿಗಳನ್ನು ಜಾಗತೀಕರಣ–ಜಾಗತಿಕ ಮಾರುಕಟ್ಟೆಯ ಬಳಕೆದಾರರಾಗಿ ಬೆಳೆಯಬೇಕೆಂದೂ ಅದು ಪ್ರಗತಿಯ ಸಂಕೇತವೆಂದೂ ಭಾವಿಸಬಾರದು. ಶಾಲಾ ವ್ಯವಸ್ಥೆಗೆ, ಎಂದರೆ ಮುಖ್ಯೋಪಾಧ್ಯಾಯರಿಂದ ಹಿಡಿದು ಎಲ್ಲ ಅಧ್ಯಾಪಕರವರೆಗೆ ಒಂದು ಸ್ವಂತಿಕೆ ಇರಬೇಕು; ಸ್ವತಂತ್ರವಾದ ಒಂದು ನಿಲುವು ಇರಬೇಕು. ಆಗ ಇಂತಹ ವ್ಯವಸ್ಥೆ ಜಾಗತೀಕರಣದ ತಾಳಕ್ಕೆ ತಕ್ಕಂತೆ ಕುಣಿಯುವುದಿಲ್ಲ. ಯಾವ ವ್ಯವಸ್ಥೆಗೆ ಸ್ವಂತ ನಿಲುವು ಇದೆಯೋ ಅದು ತನ್ನ ವಿದ್ಯಾರ್ಥಿಗಳಿಗೂ ಈ ಸ್ವಂತಿಕೆಯನ್ನು ಕೊಡುತ್ತದೆ. ಶಾಲಾ ವ್ಯವಸ್ಥೆ ಸಮಾಜದ ಬಹುಮುಖ್ಯ ಅಂಗ. ಅದು ಜನಮರುಳೋ ಜಾತ್ರೆಮರುಳೋ ಎಂಬಂತೆ ತನ್ನ ಸ್ವಂತಿಕೆಯನ್ನು ಕಳೆದುಕೊಂಡರೆ ಇವರು ಹುಟ್ಟುಹಾಕಿದ ಶಾಲಾವ್ಯವಸ್ಥೆಯೂ ತನ್ನತನ ಕಳೆದುಕೊಂಡುಬಿಡುತ್ತದೆ. ಈ ಶಾಲೆಯಲ್ಲಿ ಕಲಿತ ಮಕ್ಕಳು ಕೂಡ ಸ್ವಂತಿಕೆ ಇಲ್ಲದ, ಅನುಕರಣಾ ಪರಿಣತಿಯನ್ನು ಗಳಿಸಿಕೊಂಡ 'ಆಧುನಿಕ'ರಾಗುತ್ತವೆ. ಹೀಗೆ ಶಾಲೆಗಳು ಸಮಾಜಕ್ಕೆ ಅಂಟಿದ ಖಾಯಿಲೆಯನ್ನು ಗುಣಪಡಿಸುವ ಬದಲು ಹೆಚ್ಚಿಸುತ್ತವೆ.

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಈ ಬಗ್ಗೆ ಏನಾದರೂ ಚರ್ಚಿಸಿದೆಯೇ? ಒಳ್ಳೆಯದನ್ನು ಕೊಡಿ ಎಂದು ಹೇಳುವುದಕ್ಕಿಂತ ಇಂದಿನ ದಿನಗಳಲ್ಲಿ ಕೆಟ್ಟದ್ದು ಯಾವುದು ಮತ್ತು ಏಕೆ ಇದು ಕೆಟ್ಟದ್ದು ಎಂದು ಗುರುತಿಸುವುದೇ ಬಹುಮುಖ್ಯ. ಮಕ್ಕಳನ್ನು ಯಾವುದಕ್ಕಾಗಿ ಸಜ್ಜುಗೊಳಿಸಬೇಕು ಎಂದು ನಿರ್ಧರಿಸುವಂತೆ ಯಾವುದರ ವಿರುದ್ಧ ಸಜ್ಜುಗೊಳಿಸಬೇಕೆಂದೂ ನಾವು ವಿಚಾರ ಮಾಡಬೇಕು. ನಮ್ಮ ಮಕ್ಕಳು ಏನನ್ನು ಆದರಿಸಬೇಕು, ಏನನ್ನು ಕಲಿಯಬೇಕು ಎಂದು ನಿರ್ಧರಿಸಿ ಅವುಗಳನ್ನು ಕಲಿಸುತ್ತೇವೆ. ಆದರೆ ಯಾವುದನ್ನು ಮಕ್ಕಳು ವಿರೋಧಿಸಬೇಕು ಎಂಬ ಬಗ್ಗೆ ನಮಗೆ ಅರಿವಿದ್ದರೂ ಈ ವಿಚಾರವಾಗಿ ನಾವು ಮಕ್ಕಳನ್ನು ತಯಾರು ಮಾಡುವ ಗೋಜಿಗೆ ಹೋಗುವುದಿಲ್ಲ. ಅಧ್ಯಾಪಕನಾದವನು ಇದು ತನ್ನ ಜವಾಬ್ದಾರಿ ಅಲ್ಲ ಎಂದು ಭಾವಿಸುವುದೇ ಹೆಚ್ಚು.

## ತಂತ್ರಜ್ಞಾನದ ಹೊಸ ಸಾಧ್ಯತೆಗಳು

ನಿಜವಾದ ಬದಲಾವಣೆ ಸಾಧ್ಯವಾಗುವುದು ನಾವು ಹಾನಿಕರವಾದದ್ದನ್ನು ವಿರೋಧಿಸಿ ಕಾರ್ಯಾಚರಣೆಯಲ್ಲಿ ತೊಡಗಿದಾಗ ಮಾತ್ರ. ಒಳ್ಳೆಯದನ್ನು ಕಲಿಯುವುದು ಕಷ್ಟ ಆದರೆ ಕೆಟ್ಟದ್ದನ್ನು ವಿರೋಧಿಸುವುದು ಅದಕ್ಕಿಂತ ಕಷ್ಟ ಹಾಗಾಗಿ ಕೆಟ್ಟದ್ದು ಒಳ್ಳೆಯದರ ಜೊತೆ ಸಮಾನಾಂತರವಾಗಿ ಬೆಳೆಯುತ್ತಲೇ ಇದೆ. ಕೆಲವೊಮ್ಮೆ ಒಳ್ಳೆಯದಕ್ಕಿಂತ ಕೆಟ್ಟದ್ದು ಹೆಚ್ಚು ಪ್ರಬಲವಾಗಿ ನಮ್ಮ ಸಂಸ್ಕೃತಿಯಲ್ಲಿ ನೆಲೆಯೂರಿದೆ. ನಮ್ಮ ಇಡೀ ಸಂಸ್ಕೃತಿಯ ಬೆಳವಣಿಗೆಯನ್ನೇ ನೋಡಿ. ಸಾಂಸ್ಕೃತಿಕ ಚರಿತ್ರೆಯಲ್ಲಿ ಸಾಂಸ್ಕೃತಿಕವಾಗಿ ಇತ್ಯಾತ್ಮಕ ಅಂಶಗಳ ಜೊತೆಗೆ ಜಾತಿಪದ್ಧತಿಯಂತಹ ನೇತ್ಯಾತ್ಮಕ ಅಂಶಗಳು ಸಮಾನಾಂತರವಾಗಿ ಹಾಗೆಯೇ ಉಳಿದುಕೊಂಡುಬಂದಿವೆ. ಹಲವಾರು ಪುರಾತನ ಸಂಸ್ಕೃತಿಗಳು ಕೊನೆಗೆ ನಶಿಸಿಹೋಗುವುದಕ್ಕೆ ಕಾರಣ ಅವು ಸವೆಸಿದ ಹಾದಿಯುದ್ದಕ್ಕೂ ಸಂಗ್ರಹಮಾಡಿಕೊಂಡು ಬಂದ ನೇತ್ಯಾತ್ಮಕ ಅಂಶಗಳ ದುಷ್ಪರಿಣಾಮ. ನೇತ್ಯಾತ್ಮಕ ಅಂಶಗಳು ಸೈತಾನನ, ಮಾರನ ರೂಪದಲ್ಲಿ ವ್ಯಕ್ತಿಯ ವೈಯಕ್ತಿಕ ನೆಲೆಗಟ್ಟಿನಲ್ಲಿ ಕಾಡುವಂತೆ ಸಮಾಜವನ್ನೂ ಹಾಗೂ ಒಂದು ಸಂಸ್ಕೃತಿಯನ್ನೂ ಕಾಡುತ್ತವೆ. ಆದರೆ ಶಿಕ್ಷಣ ಪ್ರಬುದ್ಧವಾದಂತೆ ಈ ನೇತ್ಯಾತ್ಮಕತೆಯನ್ನು ತೊಡೆದುಹಾಕಲು ಸಾಧ್ಯವಾಗಬೇಕು. ರಾಮಕೃಷ್ಣ ಪರಮಹಂಸರು ಹೀನ ಸಂಸ್ಕಾರಗಳನ್ನು ಸಂಗ್ರಹಿಸಿಕೊಂಡ ವ್ಯಕ್ತಿಯ ಬಗ್ಗೆ ಆಡುವ ಮಾತುಗಳು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಬುದ್ಧಿವಂತರಾದ ಜನ ಮೊದಮೊದಲು ತಮ್ಮೊಳಗಿರುವ ಹೀನ ಸಂಸ್ಕಾರಗಳನ್ನು ಮುಚ್ಚಿಟ್ಟುಕೊಂಡು ಶುಕ್ಲಪಕ್ಷದ ಚಂದ್ರನಂತೆ ವರ್ಧಿಸುತ್ತಾ ಹೋಗುತ್ತಾರೆ. ಇದು ಹೇಗೆಂದರೆ ಕೆಲವು ಉರುಟಾದ ಹಸಿ ಸೌದೆಗಳು ಮೊದಮೊದಲು ಧಗಧಗನೆ ಚೆನ್ನಾಗಿ ಉರಿಯುವಂತೆ. ಆದರೆ ಅವುಗಳಲ್ಲಿರುವ ನೀರಿನ ಅಂಶ ನಿಧಾನವಾಗಿ ಹಿಂದೆ ಸರಿದು ಹಿಂಬದಿಯಿಂದ ಹೊರಬಂದು ಇಡೀ ಒಲೆಯನ್ನು ಆರಿಸಿಬಿಡುತ್ತದೆ. ಕೆಲವು ವ್ಯಕ್ತಿಗಳು ಮೊದಮೊದಲು ಉತ್ತಮ ಆದರ್ಶಗಳನ್ನು ರೂಢಿಸಿಕೊಂಡಂತೆ ಕಂಡರೂ ಸಮಯ ಕಳೆದಂತೆ ಅವರ ಒಳಗೇ ಇರುವ ನಿಜಸ್ವಭಾವ ಹೀಗೆ ಹೊರಹೊಮ್ಮಿಬಿಡುತ್ತದೆ ಎಂದು ಉದಾಹರಿಸುತ್ತಾರೆ ರಾಮಕೃಷ್ಣರು. ಇದು ವ್ಯಕ್ತಿಗೆ ಅನ್ವಯವಾಗುವಂತೆ ಒಂದು ಜನಾಂಗಕ್ಕೆ ಅಥವಾ ಒಂದು ಸಂಸ್ಕೃತಿಗೂ ಅನ್ವಯವಾಗುತ್ತದೆ. ವ್ಯಕ್ತಿ ಇದಕ್ಕೆ ಮುಖಾಮುಖಿಯಾಗಿ ಪರಿಹರಿಸಿಕೊಳ್ಳಲೇಬೇಕು,ಹಾಗೆಯೇ ಸಮಾಜವೂ ಕೂಡ. ಬುದ್ಧಿಪೂರ್ವಕವಾಗಿ ಇದನ್ನು ಮಾಡದಿದ್ದರೆ ವ್ಯಕ್ತಿ–ಸಮಾಜದ ನೇತ್ಯಾತ್ಮಕತೆಗಳು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತ ಇಡೀ ಸಮಾಜ ನೇತ್ಯಾತ್ಮಕವಾಗುತ್ತದೆ.

ಇಂತಹ ಒಂದು ಸಂದರ್ಭದಲ್ಲಿ **ಆಧುನಿಕ ತಂತ್ರಜ್ಞಾನದ ಕೆಲವು ಇತ್ಯಾತ್ಮಕ ಅಂಶಗಳನ್ನು** ಬಳಸಿಕೊಳ್ಳುವ ಸಾಧ್ಯತೆಯನ್ನು ನಾವು ಮನಗಾಣಬೇಕು. ಹೊಸ ತಂತ್ರಜ್ಞಾನದ ಸಂಪರ್ಕಸಾಧ್ಯತೆಗಳು ಸಮೂಹ ಮನಸ್ಸಿನಲ್ಲಿ ಅಂತರ್ಗತವಾಗಿರುವ ನೇತ್ಯಾತ್ಮಕತೆಯನ್ನು ತೊಡೆದುಹಾಕಲು ನಮಗೆ ಸಹಾಯ ಮಾಡಲಾರದೆ? ಆಧುನಿಕ ತಾಂತ್ರಿಕ ಪ್ರಗತಿಯ

ಫಲಶ್ರುತಿ ಯಾವಾಗಲೂ ನೇತ್ಯಾತ್ಮಕವಾಗಿಯೇ ಇರಬೇಕೆಂದೇನೂ ಇಲ್ಲ. ಮನುಕುಲ ಈವರೆಗೆ ತಾನು ಪಡೆದಿರುವ ಅನುಭವದ ಆಧಾರದ ಮೇಲೆ ತನಗೆ ಯಾವುದು ಒಳ್ಳೆಯದು ಮತ್ತು ಯಾವುದು ಕೆಟ್ಟದ್ದು ಎಂದು ನಿರ್ಧರಿಸುವ ಹಂತಕ್ಕೆ ಬರುವ ಅನಿವಾರ್ಯತೆ ಈಗ ತಲೆದೋರಿದೆ. ಇದು ಕೆಲವೇ ವ್ಯಕ್ತಿಗಳಲ್ಲಿ ಹುಟ್ಟಿದ ಜಾಗೃತಿಯಾದರೂ ಜಾಹೀರಾತಿನಂತಹ ತಂತ್ರಗಾರಿಕೆಯನ್ನು ಬಳಸಿ ಇತ್ಯಾತ್ಮಕವಾದದ್ದು ಜನಪ್ರಿಯವಾಗುವಂತೆ ಮಾಡಬಹುದು. ನಮ್ಮ ಇಂದಿನ ಶಿಕ್ಷಣವೂ ಇದನ್ನು ಮತ್ತಷ್ಟು ದೃಢಪಡಿಸಿದರೆ ಇತ್ಯಾತ್ಮಕ ತಿರುವು ಸಾಧ್ಯ.

**ಸಹಜವಾದದ್ದು ಶ್ರೇಷ್ಠ**

ಜಾಗತಿಕ ಮಾರುಕಟ್ಟೆಯ ಜಾಹೀರಾತುಗಳಿಂದಾಗಿ 'ಅಸಹಜವಾದದ್ದು ಯಾವಾಗಲೂ ಶ್ರೇಷ್ಠ' ಎಂಬ ತಪ್ಪು ಕಲ್ಪನೆಗೆ ನಮ್ಮ ಇಂದಿನ ಜನ ಅದರಲ್ಲೂ ಮುಖ್ಯವಾಗಿ ಮಕ್ಕಳು ಒಳಗಾಗುತ್ತಿರುವುದು ಇಂದಿನ ದುರಂತ. ಇಂದಿನ ಶಿಕ್ಷಣ ಗಟ್ಟಿಗೊಳಿಸುತ್ತಿರುವುದು ಈ ಭಾವನೆಗಳ ವಿಸ್ತೃತ ರೂಪವನ್ನೇ ಅಲ್ಲವೇ? ಒಂದು ಶೈಕ್ಷಣಿಕ ವಿಚಾರ ಸಂಕಿರಣದಲ್ಲಿ ಒಬ್ಬಾತ ಎದ್ದು ನಿಂತು ತನ್ನ ವಾದವನ್ನು ಹೀಗೆ ಮಂಡಿಸಿದ – "ಇಂದು ಸಾಫ್ಟ್‌ವೇರ್ ಜಗತ್ತು ಬೆಳೆಯುತ್ತಿದೆ, ಉತ್ತಮ ಉದ್ಯೋಗಾವಕಾಶಗಳು ಅದರಿಂದ ಹುಟ್ಟುತ್ತಿವೆ, ಹಾಗಾಗಿ ನಾವು ನಮ್ಮ ಮಕ್ಕಳನ್ನು ಈ ಸಾಫ್ಟ್‌ವೇರ್ ಜಗತ್ತಿಗೆ ಸಿದ್ಧಪಡಿಸಬೇಕು, ಪ್ರಾಥಮಿಕ ಶಾಲೆಯಲ್ಲಿಯೇ ನಾವು ಮಕ್ಕಳನ್ನು ಇದಕ್ಕಾಗಿ ತಯಾರು ಮಾಡಬೇಕು." – ಈ ಮಾತುಗಳನ್ನು ಕೇಳಿ ನಾನು ದಿಗ್ಭ್ರಾಂತನಾದೆ. ದೇಶದ ಬೆರಳೆಣಿಕೆಯಷ್ಟು ಜನ ಮಾತ್ರ ಹೀಗೆ ಸಾಫ್ಟ್‌ವೇರ್ ಇಂಜಿನಿಯರ್‌ಗಳಾಗಬಹುದು. ಈ ಸತ್ಯ ಎದುರಿಗಿರುವಾಗ ಇಡೀ ಶಿಕ್ಷಣ ವ್ಯವಸ್ಥೆ ಈ ಅಲ್ಪಸಂಖ್ಯಾತರ ಹಿತವನ್ನಷ್ಟೇ ಗಮನದಲ್ಲಿಟ್ಟುಕೊಳ್ಳಬೇಕೆಂಬ ವಾದದ ಹಿಂದಿರುವ ಮನಸ್ಸಾದರೂ ಎಂತಹದು? ಇವರಿಗೆ ಈ ದೇಶದ ಗ್ರಾಮೀಣ ಜನರು ಕಾಣಿಸುತ್ತಲೇ ಇಲ್ಲವೆ? ಆಶ್ಚರ್ಯವೆಂದರೆ, ಅಲ್ಲಿ ಸೇರಿದ್ದ ಬಹಳಷ್ಟು ಶಿಕ್ಷಣ ಕ್ಷೇತ್ರದ ಪರಿಣಿತರು ಇದನ್ನು ಸಮರ್ಥಿಸಿದರು. ಹೀಗೆ ಶಿಕ್ಷಣವನ್ನು ಕುರಿತು ವಿಶಿಷ್ಟವಾಗಿ ಚಿಂತಿಸುವ ಜನಗಳೇ ಈ ಸಾಫ್ಟ್‌ವೇರ್ ವ್ಯಾಧಿಗೆ ತುತ್ತಾದರೆ ಇನ್ನು ಜನಸಾಮಾನ್ಯರ ಪಾಡು ಏನು?

ಸಹಜವಾದದ್ದು ಶ್ರೇಷ್ಠ ಎಂಬ ಭಾವನೆ ಪ್ರತಿ ಮಕ್ಕಳಲ್ಲೂ ಮೂಡುವಂತೆ ಮಾಡಬೇಕಾದ್ದು ಇಂದಿನ ಶಿಕ್ಷಣದ ಮುಖ್ಯ ಗುರಿಯಾಗಬೇಕು. ಜಾಗತೀಕರಣ – ಜಾಗತಿಕ ಮಾರುಕಟ್ಟೆಯ ವಿರುದ್ಧ ಮನುಕುಲ ಸಾರಬಹುದಾದ ಸಮರದಲ್ಲಿ ಶಿಕ್ಷಣವೇ ಪರಿಣಾಮಕಾರಿ ಅಸ್ತ್ರ. ಈ ಸಮರ ಕೆಲವು ಪೀಳಿಗೆಗಳ ಪರ್ಯಂತ ನಡೆಯಬೇಕಾದ್ದು ಅನಿವಾರ್ಯ. ಸಹಜವಾದದ್ದು ಶ್ರೇಷ್ಠ ಎಂಬುದು ಕೇವಲ ತತ್ತ್ವವಲ್ಲ. ಅದು ಜೀವನದ ವಾಸ್ತವ ಕೂಡ. ಎಲ್ಲವೂ ಸಹಜ ಸ್ಥಿತಿಗೆ ಮರಳುವುದು ಅಸಹಜ ಪಲ್ಲಟಗಳಲ್ಲಿ

ಕಂಡುಬರುವ ಸ್ವಾಭಾವಿಕ ವಿದ್ಯಮಾನ. ಹಾಗಾಗಿ ಸಹಜ ಸ್ಥಿತಿಗೆ ಮರಳುವ ತುಡಿತ ಮನುಷ್ಯ ಸ್ವಭಾವದಲ್ಲಿಯೇ ಅಂತರ್ಗತವಾಗಿರುತ್ತದೆ. ಜೊತೆಗೆ ಇಡೀ ಪ್ರಕೃತಿ ಇದನ್ನು ಅನಿವಾರ್ಯವಾಗಿಸುತ್ತದೆ. ಮಾಡು ಇಲ್ಲವೇ ಮಡಿ ಎಂಬಂತೆ 'ಸಹಜವಾಗಿ ಬದುಕು ಇಲ್ಲವೇ ಸತ್ತು ಹೋಗು' ಎಂಬ ಅನಿವಾರ್ಯತೆಯನ್ನು ಪ್ರಕೃತಿ ಉಂಟು ಮಾಡುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಶಿಕ್ಷಣವೂ ಈ ತಿರುವಿಗೆ ಪೂರಕವಾಗಿರುವುದಾದರೆ ಅದು ಪರಿಣಾಮಕಾರಿಯಾದೀತು. ಹಾಗಾಗಿ **'ಸಹಜವಾದದ್ದು ಶ್ರೇಷ್ಠ"** ಎಂಬ ಮನೋಭಾವನೆಯನ್ನು ಬಿತ್ತುವುದು ಶಿಕ್ಷಣದ ಗುರಿಯಾಗಬೇಕು.

### ವಿಚಾರಶೀಲತೆಯ ಅಭಾವ

ಎಲ್ಲರೂ ಕೃಷಿಜೀವನವನ್ನು ಕೈಬಿಟ್ಟು ಪಟ್ಟಣ ಸೇರಿದರೆ ಜನಕ್ಕೆ ಆಹಾರಧಾನ್ಯಗಳು ಎಲ್ಲಿಂದ ಬರಬೇಕು? ಇಂತಹ ಒಂದು ಪರಿಸ್ಥಿತಿ ಉಂಟಾಗಬಹುದೊ ಇಲ್ಲವೋ ಅದು ಬೇರೆ ವಿಷಯ. ಆದರೆ ಇಂತಹ ಒಂದು ಪ್ರಶ್ನೆ ನಮ್ಮ ಜನಗಳಿಗೆ ಎದುರಾಗುವುದೇ ಇಲ್ಲ. ಏಕೆಂದರೆ, ಈ ಸ್ಪರ್ಧಾತ್ಮಕ ಜಗತ್ತಿನಲ್ಲಿ ನಮ್ಮ ಮಕ್ಕಳನ್ನು ಗೆಲ್ಲುವಂತೆ ನಾವು ತಯಾರು ಮಾಡಿದರೆ ಸಾಕು. ಸೋತವರು ಹೇಗೂ ಕೃಷಿ ಜೀವನಕ್ಕೋ, ಬವಣೆಯ ಬದುಕಿಗೋ ಮರಳುತ್ತಾರೆ. ಇದರ ಒಟ್ಟು ಸಾರಾಂಶ ಏನೆಂದರೆ, ಬುದ್ಧಿವಂತರಲ್ಲದವರು ವಾಸ್ತವ ಬದುಕಿಗೆ ಅವಶ್ಯವಾದ ಉತ್ಪಾದನೆಯಲ್ಲಿ ತೊಡಗುತ್ತಾರೆ. ಅತಿ ಬುದ್ಧಿವಂತರು, ತಂತ್ರಜ್ಞಾನ ಪರಿಣತರು ಮನುಷ್ಯನ ಐಷಾರಾಮಿ ಬದುಕಿನ ಕೃತಕ ಆವಶ್ಯಕತೆಗಳನ್ನು ಪೂರೈಸುವ ಉತ್ಪಾದನೆಯಲ್ಲಿ ತೊಡಗುತ್ತಾರೆ. ಎಂದರೆ ನನ್ನ ಬದುಕು ನನ್ನ ಸುತ್ತಲೂ ಬದುಕುತ್ತಿರುವ ಹುಲುಮಾನವರಿಗಾಗಿ ಅಲ್ಲ; ಅದು ಏನಿದ್ದರೂ ಚಮತ್ಕಾರದ ಬದುಕು ಸಾಗಿಸುವವರಿಗಾಗಿ ಮೀಸಲು! ಸರಳವಾದ ಬದುಕನ್ನು ಸರಳವಾಗಿ ಬದುಕುವುದರಲ್ಲಿ ನಮ್ಮ ಸುಶಿಕ್ಷಿತರು ಸೌಂದರ್ಯವನ್ನು ಕಾಣುವುದಿಲ್ಲ ಏಕೆ? ಯಾವ ಸಾರ್ಥಕತೆಯನ್ನೂ ಕಾಣುವುದಿಲ್ಲ ಏಕೆ? ಇವರ ಜೀವನಸಾಫಲ್ಯವೇ ಬೇರೆ. ಇವರು ತಮ್ಮ ಅಂತರಂಗದ ದನಿಯನ್ನು ಆಲಿಸಿ ಜೀವನ ಸಾಫಲ್ಯವನ್ನು ಕಂಡುಕೊಳ್ಳುವುದಿಲ್ಲ. ಏಕೆಂದರೆ ಇವರು ತಮ್ಮ ಆಂತರ್ಯದ ನೆಲೆಗಳಿಂದ ಈಗಾಗಲೆ ಬಹುದೂರ ತೇಲಿಬಂದಿದ್ದಾರೆ. ಜಾಗತೀಕರಣದ ಪ್ರವಾಹ ಇವರನ್ನು ಇವರ ನೈಜನೆಲೆಗಳಿಂದ ಬಹುದೂರ ಸೆಳೆದುಕೊಂಡು ಹೋಗಿದೆ. ಜಾಗತೀಕರಣದ ಒತ್ತಡಗಳಿಗೆ ಒಳಗಾಗಿ ಇವರ ಜೀವನ ಸಾಫಲ್ಯ ರೂಪುಗೊಳ್ಳುತ್ತದೆ. ಜಾಗತೀಕರಣದ ಆಮಿಷಗಳಿಗೆ ಪೂರಕವಾದ ದೌರ್ಬಲ್ಯಗಳು ಮನುಷ್ಯಸಹಜವಾಗಿ ಇವರೊಳಗೆ ಈಗಾಗಲೇ ಇದೆ. ಎಂದರೆ ತಂತ್ರಜ್ಞಾನ ಒದಗಿಸುವ ಸೌಕರ್ಯಗಳು ಇವರ ಮನಸ್ಸನ್ನು ಸೂರೆಗೊಂಡಿದೆ. ಇದಕ್ಕೆ ಮರುಳಾಗದೆ ಇರುವಷ್ಟು ವಿಚಾರಶೀಲತೆಯನ್ನು ಇವರು ಬೆಳೆಸಿಕೊಂಡಿಲ್ಲ. ಅಥವಾ ಅಂತಹ ವಿಚಾರಶೀಲತೆ ಬೆಳೆಯಲು ಪೂರಕವಾದ ಅಂಶಗಳು ನಮ್ಮ ಇಂದಿನ ಸಮಾಜದಲ್ಲಾಗಲೀ ಅಥವಾ ನಮಗೆ ಸಿಗುತ್ತಿರುವ ಶಿಕ್ಷಣದಲ್ಲಾಗಲೀ ಕಂಡುಬರುತ್ತಿಲ್ಲ. ಹಾಗಾಗಿ ತಂತ್ರಗಾರಿಕೆ ಒದಗಿಸುವ

ಯಾವುದೇ ಸೌಕರ್ಯ ಸಲಕರಣೆ ಇದ್ದರೂ ಅವೆಲ್ಲವೂ ಬೇಕು, ಅವುಗಳನ್ನು ಗಳಿಸುವುದೇ ಜೀವನಸಾಫಲ್ಯ ಎಂಬ ನಿಲುವಿಗೆ ಸಮಸ್ತ ಜನಕೋಟಿ ಬಂದು ನಿಂತಂತಿದೆ. ತಂತ್ರಜ್ಞಾನದ ಪ್ರಗತಿಯಿಂದಾಗಿ ಎಲ್ಲವೂ ನಿರೀಕ್ಷೆಯಂತೆ ನಡೆದುಬಿಡುತ್ತದಾದ್ದರಿಂದ ಸರಳ ಬದುಕಿನಲ್ಲಿ ಸವಾಲುಗಳೇ ಇಲ್ಲ. ಆದ್ದರಿಂದ ಬದುಕಿನಲ್ಲಿ ಅಸಹಜವಾದ ಹೊಸ ಸವಾಲುಗಳನ್ನು ಸೃಷ್ಟಿಸಿ ಸಮರ್ಥರು ಎನಿಸಿಕೊಂಡವರ ನಡುವೆ ಹಾವು-ಏಣಿ ಆಟವಾಡುವುದೇ ಬದುಕಿನ ಸ್ವಾರಸ್ಯ ಎಂದು ಇವರು ಭಾವಿಸುತ್ತಾರೆ.

ಇದೇ ಸಾಮ್ರಾಜ್ಯಶಾಹಿ ಮನಸ್ಸು. ಆದಿಮಾನವನಾಗಿದ್ದಾಗ ಮನುಷ್ಯ ತನ್ನ ಈ ಮಹತ್ವಾಕಾಂಕ್ಷೆಯ ಮಿಡಿತಕ್ಕೆ ದೊಡ್ಡ ದೊಡ್ಡ ಪ್ರಾಣಿಗಳನ್ನು ಬಹುಶಃ ಬೇಟೆಯಾಡಿ ತನ್ನ ಸಾಮರ್ಥ್ಯವನ್ನು ತಾನೇ ಖಚಿತಪಡಿಸಿಕೊಳ್ಳುತ್ತಿದ್ದ. ನಂತರ ಸೈನ್ಯವನ್ನು ಸೇರಿಸಿ ತನ್ನ ಕತ್ತಿಯ ಬಲದಿಂದ ಸಾಮ್ರಾಜ್ಯಗಳನ್ನು ಕಟ್ಟಿ ತನ್ನ ಸಾಮರ್ಥ್ಯವನ್ನು ಖಚಿತಪಡಿಸಿಕೊಂಡಿದ್ದ. ಈಗ ತನ್ನ ಬುದ್ಧಿಯ ಬಲದಿಂದ ಜಾಗತಿಕ ಮಟ್ಟದ ಕಂಪನಿಗಳನ್ನು ಕಟ್ಟಿ ತನ್ನ ಸಾಮರ್ಥ್ಯವನ್ನು ತಾನೇ ಖಚಿತಪಡಿಸಿಕೊಳ್ಳುತ್ತಾನೆ. ಈ ಮಹತ್ವಾಕಾಂಕ್ಷೆಯ ಹಂಬಲ ಅನೇಕ ರೂಪಗಳನ್ನು ತೊಟ್ಟು ಜನರ ಮನಸ್ಸಿನಲ್ಲಿ ಬೇರೆ ಬೇರೆ ಆಕಾರಗಳನ್ನು ಪಡೆಯುತ್ತಿದೆ. ಇಂಗ್ಲಿಷ್ ಹಂಬಲ, (ಹಿಂದೆ ಸಂಸ್ಕೃತದ ಹಂಬಲ) ಕಂಪ್ಯೂಟರ್ ಹಂಬಲ, ವಿದೇಶಗಳಲ್ಲಿ ನೆಲೆಸುವ ಹಂಬಲ ಅಥವಾ ಅಪಾರ ಹಣಗಳಿಕೆಯ ಕೇಂದ್ರವೂ ಆಗಬಲ್ಲ 'ಆಧ್ಯಾತ್ಮಿಕ' ಕೇಂದ್ರಗಳನ್ನು ಕಟ್ಟುವ ಹಂಬಲ- ಹೀಗೆ ಇವೇ ಮೊದಲಾದವು ಇದರ ಕೆಲವು ರೂಪಗಳು. ಈ ಹಂಬಲಗಳ ನಡುವೆ ಮನುಷ್ಯ ಸಂಬಂಧಗಳು ಗೌಣ; ಸರಳವಾಗಿ ಪಡೆಯಬಹುದಾದ ತೃಪ್ತಿ ಗೌಣ. ಮನುಷ್ಯಪ್ರೀತಿ - ಜೀವನ ಪ್ರೀತಿಗಳಂತೂ ಕೈಲಾಗದ, ಸೋತುಹೋದ ಮಂದಮತಿಗಳು ತಮ್ಮ ನಿರರ್ಥಕ ಜೀವನಕ್ಕೆ ಕಂಡುಕೊಳ್ಳುವ ತಾತ್ತ್ವಿಕ ನೆಲೆಗಳು ಎಂಬಂತಿವೆ. ಈ ಸ್ಪರ್ಧೆಯಲ್ಲಿ ಗೆದ್ದು ನಿಲ್ಲುವವರು ಕೆಲವೇ ಮಂದಿ ಎಂಬುದು ಎಲ್ಲರಿಗೂ ತಿಳಿದ ವಿಷಯ. ಆದರೂ ಲಾಟರಿ ಟಿಕೆಟ್ ಕೊಂಡು ಒಂದು ಛಾನ್ಸ್ ತೆಗೆದುಕೊಳ್ಳೋಣ ಎಂಬ ಮನೋಭಾವನೆಯಂತೆ ಪ್ರತಿಯೊಬ್ಬರೂ ಈ ದೊಡ್ಡ ಗುರಿಯ ಲಾಟರಿಯನ್ನು ಗೆಲ್ಲಲು ಹವಣಿಸುತ್ತಾರೆ. ಶಿಕ್ಷಣದ ಮೂಲಕ ಇವರು ಬಯಸುವುದು ಇದನ್ನೇ.

# ೨. ವ್ಯಕ್ತಿತ್ವ ಮತ್ತು ಶಿಕ್ಷಣ

## ಆಧುನಿಕತೆ ಮತ್ತು ಸ್ವಂತಿಕೆ

ಹಿಂದೆ ತಾಂತ್ರಿಕತೆಯ ಅಭಾವದಲ್ಲಿ ತಮ್ಮ ಮಹತ್ವಾಕಾಂಕ್ಷೆಯನ್ನು ಸಾಧಿಸಲು ಕೆಲವರಿಗೆ ಮಾತ್ರ ಸಾಧ್ಯವಾಗುತ್ತಿತ್ತು. ಶ್ರೇಣೀಕೃತ ಸಮಾಜ ಕೆಲವರಿಗೆ ಮಾತ್ರ ಈ ಅವಕಾಶನೀಡುತ್ತಿತ್ತು. ಹಾಗಾಗಿ ಸಾಮಾನ್ಯರು ಸರಳ ಜೀವನವನ್ನು ಬಯಸುತ್ತಿದ್ದರು. ಆ ಕಾಲದ ಸಂತರು ಸರಳವಾಗಿ ಬದುಕು ಸಾಗಿಸುತ್ತಿದ್ದರು. ಆದರೆ ಇಂದಿನ ಸಾಧುಸಂತರು ಐಷಾರಾಮಿ ಬದುಕನ್ನು ಸ್ವತಃ ತಾವೇ ಬದುಕುತ್ತಾ ಜನಸಾಮಾನ್ಯರೆಲ್ಲರಿಗೂ ತಮ್ಮ ಕೃತಿಯ ಮೂಲಕ ಇದನ್ನೇ ಬೋಧಿಸುತ್ತಾರೆ. ಸರಳ ಜೀವನದಲ್ಲಿ ಜೀವನಸೌಂದರ್ಯವಿದೆ ಎಂದು ತೋರುವ ಯಾರೂ ನಮಗೆ ಕಾಣುತ್ತಿಲ್ಲ. ಮಠದ ಸ್ವಾಮಿಗಳೊಬ್ಬರು ತಮ್ಮ ಹುಟ್ಟುಹಬ್ಬವನ್ನು ಕೇಕ್ ಕತ್ತರಿಸಿ ಆಚರಿಸಿಕೊಂಡಿದ್ದನ್ನು ಪತ್ರಿಕೆಯಲ್ಲಿ ನೋಡಿದೆ. ಇದೊಂದು ದೊಡ್ಡ ಮಠ. ಭಾರತೀಯ ಪರಂಪರೆಯ, ಸಂಸ್ಕೃತಿಯ ಪ್ರತೀಕವಾಗಿ ನಿಲ್ಲಬೇಕಾದದ್ದು. ಆದರೆ ಈ ಸ್ವಾಮಿಗಳು 'ತಮ್ಮತನ' ಎಂಬುದನ್ನು ಯಾವ ವಿಷಯದಲ್ಲೂ ಉಳಿಸಿಕೊಂಡದ್ದು ಕಂಡುಬರಲಿಲ್ಲ. ನೂರರಲ್ಲಿ ನಾನೂ ಮತ್ತೊಬ್ಬ ಎನ್ನುವಂತೆ ಇತ್ತು ಅವರ ನಡವಳಿಕೆ. ಕೇಕ್ ಕತ್ತರಿಸಿಕೊಂಡಾಕ್ಷಣ ಭಾರತೀಯ ಸಂಸ್ಕೃತಿ ಹಾಳಾಗಿಬಿಡುತ್ತದೆಯೇ ಎಂದು ಪ್ರಶ್ನಿಸುವವರೂ ಇದ್ದಾರೆ. ಚಿಕ್ಕ ಚಿಕ್ಕ ಪದ್ಧತಿಗಳ ಮೂಲಕ 'ನಮ್ಮತನ'ದ ಬಗ್ಗೆ ನಾವು ಒಂದು ಖಚಿತ ನಿಲುವನ್ನು ಸ್ಥಿರಪಡಿಸಿಕೊಂಡಿರುತ್ತೇವೆ. ಆಳವಾಗಿ ಕೆದಕಿ ನೋಡಿದರೆ, ಯಾರು ತನ್ನ ನಿಲುವುಗಳ ಬಗ್ಗೆ ಖಚಿತ ಆಕಾರಗಳನ್ನು ತಳೆಯಲಾರನೋ ಅವನು ಸುಲಭವಾಗಿ ಅನ್ಯ ವಿಧಾನಕ್ಕೆ ಬದಲಾಗುತ್ತಾನೆ. ತನ್ನ ನಿಲುವನ್ನು ಸುಲಭವಾಗಿ ಬಿಟ್ಟುಕೊಡುವ ಮೂಲಕ ಪರಕೀಯವಾದದ್ದನ್ನು ಅನುಕರಣೆ ಮಾಡುತ್ತ ಬಹುಸಂಖ್ಯಾತರ ಒಪ್ಪಿಗೆ ಪಡೆಯುತ್ತಾನೆ. 'ತನ್ನತನ'ದಲ್ಲಿ ಆಳವಾಗಿ ಬೇರೂರಿರುವ ಮನುಷ್ಯ ತನ್ನತನದ ಬಗ್ಗೆ ನಂಬಿಕೆಯಿಟ್ಟು ಅದರಂತೆಯೇ ಎಲ್ಲಾ ಸಂದರ್ಭಗಳಲ್ಲೂ ನಡೆದುಕೊಳ್ಳುವ ಮೂಲಕ ಬಹುಸಂಖ್ಯಾತರಿಗೆ ಮಾದರಿಯಾಗುತ್ತಾನೆ. ಇಲ್ಲಿ ಗಮನಿಸಬೇಕಾದದ್ದು ಗಟ್ಟಿ – ಜೊಳ್ಳು ವ್ಯಕ್ತಿತ್ವಗಳನ್ನು, ಎಂದರೆ ಸ್ವಂತಿಕೆಯನ್ನು ತನ್ನತನದ ದೃಢತೆಯಿಂದ ಗಟ್ಟಿಗೊಳಿಸಿಕೊಂಡ ವ್ಯಕ್ತಿತ್ವ ಇಡೀ ಜನಸಮುದಾಯದ ಸರಾಸರಿ ಅಲೆಯೊಡನೆ ಕೊಚ್ಚಿಹೋಗುವುದಿಲ್ಲ. ಜನ ಮರುಳೋ ಜಾತ್ರೆಮರುಳೊ ಎಂಬ ಪರಿಸ್ಥಿತಿಯಲ್ಲಿ ಅದು ಬಂಡೆಯಂತೆ ಒಂದು

ಸ್ಥಿರ ಮಾದರಿಯಾಗಿ ನಮ್ಮ ಮುಂದೆ ನಿಲ್ಲುತ್ತದೆ. ಗಾಂಧೀಜಿ ಇದಕ್ಕೆ ಒಂದು ಉದಾಹರಣೆ. ಆದರೆ ಈ ಮಠದ ಸ್ವಾಮಿಗಳು ನೀಡುವ ಸಂದೇಶವಾದರೂ ಏನು?

ಈ ಸಂದರ್ಭದಲ್ಲಿ ನನಗೆ ಸೋಲಿಗರ ಸಾರಿಜಡೆಯನ ನೆನಪಾಗುತ್ತದೆ. ಇವನು ದೊಡ್ಡಸಂಪಿಗೆ ದೇವರನ್ನು ಪೂಜೆ ಮಾಡುವ ತಮ್ಮಡಿ ಅಥವಾ ಪೂಜಾರಿ. ಅವನು ಪೂಜೆ ಮಾಡುವಾಗ ತನ್ನ ದೇವರಿಗೆ ತಿರುಗು ಮುರುಗಾಗಿ ಕರ್ಪೂರದ ಆರತಿ ಬೆಳಗಿದ. ಅಲ್ಲೇ ಇದ್ದ ಒಬ್ಬಾತ ಹೇಳಿದ – "ಏನಯ್ಯ ಪೂಜಾರಿ, ನೀನು ದೇವರಿಗೆ ತಿರುಗು ಮುರುಗಾಗಿ ಮಂಗಳಾರತಿ ಮಾಡ್ತಾ ಇದ್ದೀಯಲ್ಲ?" ಆಗ ಕುಪಿತನಾದ ಸಾರಿಜಡೆಯನು ದೃಢವಾಗಿ ಹೇಳಿದ – "ನೀನು ನಿನ್ನ ದೇವರಿಗೆ ನಿನಗೆ ಬೇಕಾದ ಹಾಗೆ ಮಂಗಳಾರತಿ ಮಾಡು, ನನ್ನ ದೇವರಿಗೆ ಈ ಮಂಗಳಾರತಿಯೆ ಇಷ್ಟ. ನಾವು ಸೋಲಿಗರು ಕಾಡಿನಲ್ಲಿ ನೂರಾರು ವರ್ಷಗಳಿಂದ ದೇವರಿಗೆ ಹೀಗೆಯೇ ಮಂಗಳಾರತಿ ಮಾಡುತ್ತಿದ್ದೇವೆ. ನನ್ನ ದೇವರಿಗೆ ಇದು ಇಷ್ಟ ಎಂದು ನನಗೆ ಗೊತ್ತು".

ಸೋಲಿಗರ ಸಾರಿಜಡೆಯನನ್ನು ಮತ್ತು ನಮ್ಮ ಈ ಸಂಸ್ಥಾನಾಧೀಶರನ್ನು ಹೋಲಿಸಿ ಗಮನಿಸಬೇಕಾದ ಬಹುಮುಖ್ಯ ಅಂಶಗಳಿವೆ. ನಾಗರಿಕತೆಯ ಸೋಂಕು ತಗುಲದ ಕಾಡು ಸೋಲಿಗ 'ತನ್ನತನ'ದಲ್ಲಿ ಗಟ್ಟಿಯಾದ ವಿಶ್ವಾಸ ಇಟ್ಟುಕೊಂಡಿದ್ದ. ಈ ನಾಗರಿಕತೆ, ತಾಂತ್ರಿಕ ಸಲಕರಣೆಗಳು ಮತ್ತು ಈ ಸಲಕರಣೆಗಳ ಹಿಂದೆ ಬೆನ್ನಟ್ಟಿಬರುವ ಹಣ ಮತ್ತು ಆ ಸಂಬಂಧವಾದ ಆಮಿಷಗಳು ಮನುಷ್ಯನನ್ನು ಎಷ್ಟು ಮರುಳು ಮಾಡುತ್ತವೆ ಎಂದರೆ ಸುಲಭವಾಗಿ ತನ್ನದಲ್ಲದ್ದನ್ನು ಜನಾನುರಾಗಕ್ಕಾಗಿ ಇವನು ಒಪ್ಪಿಕೊಂಡು ಬಿಡುತ್ತಾನೆ. ತನ್ನದಲ್ಲದ್ದನ್ನು ನಿರಾಕರಿಸಿ ತನ್ನ ತನವನ್ನು ಗಟ್ಟಿಯಾಗಿ ಕಾಯ್ದುಕೊಳ್ಳಬೇಕೆಂದು ಮಠದ ಸ್ವಾಮಿಗಳೂ ಭಾವಿಸಲಿಲ್ಲ. ಸುಲಭವಾಗಿ ಹೊಸ ಪದ್ಧತಿಗೆ ಬದಲಾಗಿಬಿಟ್ಟರು. ಏಕೆಂದರೆ ಇವರ ನಿಲುವುಗಳೆಲ್ಲಾ ದೃಢವಾದ ಒಂದು ಮೌಲ್ಯದ ಆಧಾರದ ಮೇಲೆ ಬೆಳೆದು ಬಂದದ್ದಲ್ಲ. ಇವರು ದೃಢವಾದ ಯಾವ ನಂಬಿಕೆಯನ್ನೂ ಗಳಿಸಿಲ್ಲ, ಇವರ ನಂಬಿಕೆಯೆಲ್ಲಾ ಹಣ ಮತ್ತು ಯಶಸ್ಸುಗಳನ್ನು ಆಧರಿಸಿದ ಪ್ರಚಲಿತ ಜನಪ್ರಿಯ ಆಚರಣೆಗಳು.

### ಆಚರಣೆಗಳು ಮತ್ತು ಮೌಲ್ಯ

ನಾವು ಆಚರಿಸುವ ಸಣ್ಣಪುಟ್ಟ ಪದ್ಧತಿ–ವಿಧಿವಿಧಾನಗಳು ಹಾಗೂ ಮೌಲ್ಯಗಳ ನಡುವೆ ಒಂದು ಅನ್ಯೋನ್ಯ ಸಂಬಂಧವಿದೆ. ಈ ಪದ್ದತಿಗಳು–ಆಚರಣೆಗಳು ಒಂದು ಕಟ್ಟಡದ ಕಾಲಾವಧಿ ನಿಲುವಿನ ಹಾಗೆ. ತಾರಸಿ ಹಾಕಿದ ಮೇಲೆ ಕಾಲಾವಧಿಯನ್ನು ತೆಗೆದು ಬಿಸಾಡುತ್ತೇವೆ. ಆದರೆ ಕಾಲಾವಧಿಯ ಸಹಾಯವಿಲ್ಲದೆ ಯಾವುದೇ ಕಟ್ಟಡದ ತಾರಸಿಯನ್ನು ನಾವು ನಿರ್ಮಿಸಲು ಸಾಧ್ಯವಿಲ್ಲ. ಹಾಗೆಯೇ ಈ ಸಣ್ಣಪುಟ್ಟ ಪದ್ಧತಿಗಳು ಒಂದು ಬದ್ಧತೆಗೆ ಸಂಬಂಧಪಟ್ಟು ನಡವಳಿಕೆ ಸಮೀಕರಣವನ್ನು ನಮ್ಮ ಮನಸ್ಸಿನಲ್ಲಿ ರೂಪಿಸುತ್ತವೆ. ಗಟ್ಟಿಗೊಳಿಸುತ್ತವೆ. ಆಳವಾದ ಶೀಲನಿರ್ಮಾಣಕ್ಕೂ ಭೌತಿಕ ಚಟುವಟಿಕೆಗಳಿಗೂ ಬಿಡಿಸಲಾರದ ಸಂಬಂಧ ಇರುವುದರಿಂದಲೇ ಮನುಕುಲ ಅನೇಕ

ವಿಧಿವಿಧಾನಗಳನ್ನು ಸಂಸ್ಕೃತಿಯ ಭಾಗವಾಗಿ ರೂಪಿಸಿಕೊಂಡಿದೆ. ದುರಂತವೆಂದರೆ ಈ ವಿಧಿವಿಧಾನಗಳು ಅತಿಯಾಗಿ, ಎಲ್ಲೋ ಒಂದೆಡೆ ತನ್ನ ಒಡೆಯನ ಮನಸ್ಸನ್ನು ನಿಯಂತ್ರಣಕ್ಕೆ ತರುವ ಬದಲು ಇತರರನ್ನು ನಿಯಂತ್ರಿಸುವ ಉಪಕರಣವಾಗಿ ಪರಿಣಮಿಸುತ್ತವೆ. ಹಾಗಾಗಿ ಕಂದಾಚಾರ ಪದ್ಧತಿಗೆ ಹೊರತಾದ ಮುಕ್ತ ನಿಲುವೇ ಮುಖ್ಯ ಎಂದು ಭಾವಿಸುವರೂ ಏಕಾಏಕಿ ಎಲ್ಲವನ್ನೂ ಕಳೆದುಕೊಳ್ಳುತ್ತಾರೆ. ತಮ್ಮ ಶೀಲನಿರ್ಮಾಣಕ್ಕೆ ಪೂರಕವಾಗಬಲ್ಲ ಎಲ್ಲ ಸರಳ ಸಾಧನಗಳನ್ನು ಕಳೆದುಕೊಳ್ಳುತ್ತಾರೆ. ಯಾವುದು ತಕ್ಷಣಕ್ಕೆ ಆಕರ್ಷಕವಾಗಿ ಕಾಣುವುದೋ ಅದನ್ನು ಅನುಸರಿಸುವವರು ಮತ್ತೆ ಕೆಲವರು. ಒಂದು ಸಿದ್ಧಾಂತದ ಕಾರಣಕ್ಕಾಗಿ, ಬದ್ಧತೆಯ ಕಾಳಜಿಗಳಿಂದ ಮೂಡಿಬರುವ ಭೌತಿಕ ಚಟುವಟಿಕೆಗಳು ಇದಕ್ಕೆ ತತ್ಸಮಾನವಾದ ನಮ್ಮ ಆಂತರಿಕ ಸಿದ್ಧಾಂತದ ನೆಲೆಯನ್ನು, ಬದ್ಧತೆಯನ್ನು ಮತ್ತಷ್ಟು ಗಟ್ಟಿಗೊಳಿಸಲು ಸಹಾಯ ಮಾಡುತ್ತವೆ. ಇದು ಮನಃಶಾಸ್ತ್ರದಮೂಲಕ ಅರಿಯಬಹುದಾದ ವಿಷಯ. ಒಂದು ನಿರ್ದಿಷ್ಟ ಉದ್ದೇಶದಿಂದ ಕೈಗೊಂಡ ಕಾರ್ಯ ಅದರೊಡನೆ ನಾವು ಬೆಸೆಯುವ ಭಾವನೆಗೆ ಅನುಗುಣವಾಗಿ ಮನಸ್ಸಿನಲ್ಲಿ ಸಂಸ್ಕಾರದ ಮುದ್ರೆಯನ್ನು ಒತ್ತುತ್ತದೆ. ಈ ಸಂಸ್ಕಾರ ಸಮುಚ್ಚಯ ಶೀಲವಾಗುತ್ತದೆ. ಈ ಶೀಲವಂತ ವ್ಯಕ್ತಿಗಳ ಒಟ್ಟು ಸಮೂಹವೆ ಒಂದು ಸಂಸ್ಕೃತಿ ಹಾಗೂ ಆ ಸಂಸ್ಕೃತಿಯ ಆಚರಣೆಗಳು.

ಈ ವಿಷಯಕ್ಕೆ ಸಂಬಂಧಪಟ್ಟಂತೆ ಮತ್ತೊಂದು ವಾದಸರಣಿ ಇರಲು ಸಾಧ್ಯ. ಮನುಷ್ಯ ಮೊದಲು ತನ್ನ ಆಂತರಿಕ ನೆಲೆಗಳನ್ನು ಗಟ್ಟಿಗೊಳಿಸಿಕೊಂಡಿದ್ದರಿಂದ ಅವನ ಆಚರಣೆಗಳಲ್ಲಿ ಖಚಿತವಾದ ರೂಪುರೇಖೆಗಳು ಕಂಡುಬರುತ್ತವೆ. ಆಂತರಿಕವಾಗಿ ಯಾವ ಗಟ್ಟಿತನವೂ ಇಲ್ಲದೆ ಕೇವಲ ಪ್ರದರ್ಶನಾರ್ಥವಾಗಿ ಕೈಗೊಂಡ ಆಚರಣೆಗಳು ಕಂದಾಚಾರ ಪದ್ಧತಿಯಾಗಿ ಬಿಡುತ್ತವೆ. ನಾವು ಬಹಳಷ್ಟು ಕಾಣುತ್ತಿರುವುದು ಇದನ್ನೆ. ಆದ್ದರಿಂದ ಮೊದಲು ಆಂತರಿಕ ಗಟ್ಟಿತನ ಬರಲು ನಾವು ಮನುಷ್ಯನಿಗೆ ಸಹಾಯ ಮಾಡಬೇಕು; ಈ ವಿಧಿವಿಧಾನಗಳನ್ನು ಸಂಪೂರ್ಣ ಬಿಟ್ಟುಬಿಡಬೇಕು ಎಂದು ಕೆಲವರು ವಾದಿಸಬಹುದು. ಈ ವಾದ ಸರಣಿಯೇ ಹೇಳುವಂತೆ ನಾವು ಮನುಷ್ಯನ ಆಂತರಿಕ ಗಟ್ಟಿತನವನ್ನು ಮತ್ತಷ್ಟು ಗಟ್ಟಿಗೊಳಿಸಬೇಕು ಎನ್ನುವುದಾದರೆ ಅದಕ್ಕಾಗಿ ನಮ್ಮ ಕೈಗೆಟುಕುವ ವಿಧಾನವಾದರೂ ಯಾವುದು? ಈ ಸಂದರ್ಭದಲ್ಲಿ ನಮ್ಮತನದ ಬಗ್ಗೆ ಒಂದು ಗಟ್ಟಿಯಾದ ಆಂತರಿಕ ನೆಲೆ ಹುಟ್ಟುವುದು ಬಾಲ್ಯದಲ್ಲಿ ಎಂಬ ಅಂಶವನ್ನು ನಾವು ಮನಃಶಾಸ್ತ್ರೀಯವಾಗಿ ಗುರುತಿಸಬಹುದು. ಈ ಗಟ್ಟಿತನ ನಮ್ಮ ಮಕ್ಕಳಿಗೆ ಬರಬೇಕಾದರೆ ಅದನ್ನು ನಾವು ಕೊಡಬಹುದಾದ ಸಾಧ್ಯತೆಯನ್ನು ಗುರುತಿಸಬೇಕಲ್ಲವೆ? ಇದನ್ನು ಭೌತಿಕ ಚಟುವಟಿಕೆಗಳಲ್ಲದೆ ಬೇರೆ ಹೇಗೆ ಕೊಡಲು ಸಾಧ್ಯ? ಆದ್ದರಿಂದ ನಮಗೆ ಉಳಿದಿರುವ ಒಂದೇ ಮಾರ್ಗವೆಂದರೆ ಮಗುವಿಗೆ ಅದರ ಆಂತರಿಕ ನೆಲೆಗೆ ತುಂಬಬೇಕಾದ ಗಟ್ಟಿತನದ ಭಾವನೆಗಳ ಜೊತೆಗೆ ಅದಕ್ಕೆ ಹೊಂದಿಕೊಳ್ಳುವ ಭೌತಿಕ ಚಟುವಟಿಕೆಗಳು ಮಾತ್ರ. ಉದಾಹರಣೆಗೆ ಒಂದು

ಮಗುವಿಗೆ ಎಳೆಯಂದಿನಿಂದಲೇ ಕಸವನ್ನು ಕಸದ ಬುಟ್ಟಿಗೆ ಹಾಕುವ ಪಾಠವನ್ನು ನಾವು ಕಲಿಸಿದರೆ ಅದು ದೊಡ್ಡದಾದ ಮೇಲೆಯೂ ಅದನ್ನೇ ಮಾಡುತ್ತದೆ. ಇದನ್ನು ಪ್ರಯೋಗಾತ್ಮಕವಾಗಿ ಮಕ್ಕಳ ಬೆಳವಣಿಗೆ ಸಂದರ್ಭದಲ್ಲಿ ನಾವೆಲ್ಲರೂ ಕಂಡುಕೊಳ್ಳಬಹುದು. ಹೀಗೆ ಮನುಷ್ಯನ ಬಹುಪಾಲು ಕಾರ್ಯಚಟುವಟಿಕೆಗಳು ಅವನ ವೈಚಾರಿಕ ಸ್ತರದಿಂದ ಮೂಡಿಬಂದ ನಡವಳಿಕೆಗಳಲ್ಲ. ಮನುಷ್ಯನ ನಡವಳಿಕೆಗಳು ಇದಕ್ಕೂ ಆಳವಾದ ಮೆದುಳಿನ ಭಾಗದಿಂದ ಹೊಮ್ಮುವ ಕ್ರಿಯೆಗಳು. ಮೆದುಳಿನ ಈ ಸ್ತರವನ್ನು ನಾವು ಕೇವಲ ವಿಚಾರದ ಮೂಲಕ ಸಂಧಿಸಲಾರೆವು. ಅದನ್ನು ನಡವಳಿಕೆಯ ಅಭ್ಯಾಸದಿಂದ ಮಾತ್ರ ನಾವು ಸಂಧಿಸಲು ಸಾಧ್ಯ. ನಡವಳಿಕೆಯ ಅಭ್ಯಾಸದಿಂದ ಈ ಸ್ತರದ ಕ್ರಿಯಾಶೀಲತೆಗೆ ರೂಪು ಕೊಡಲು ಸಾಧ್ಯ. ಮಗು ಕೇವಲ ವೈಚಾರಿಕವಾಗಿ ಕಲಿತದ್ದೆಲ್ಲ ಕೃತಿಯಲ್ಲಿ ಮೈದೋರುವುದಿಲ್ಲ. "ಗಿಳಿಯೋದಿ ಫಲವೇನು ಬೆಕ್ಕು ಬಹುದ ಪೇಳಲರಿಯದು" ಎಂಬಂತೆ. ಅಥವಾ "ಆಚಾರ ಹೇಳೋಕೆ ಬದನೆಕಾಯಿ ತಿನ್ನೋಕೆ" ಎಂಬಂತಹ ಮಾತುಗಳು ಈ ಕಾರಣದಿಂದಲೇ ಹುಟ್ಟುತ್ತವೆ. ದೀಪಹಚ್ಚುವ, ಕುಂಕುಮ ಇಟ್ಟುಕೊಳ್ಳುವ ಅಥವಾ ರಂಗೋಲೆ ಹಾಕುವ ಸರಳಸಾಮಾನ್ಯ ಪದ್ಧತಿಗಳು ಸಂಪೂರ್ಣವಾಗಿ ಅರ್ಥಹೀನ ಎಂದು ಭಾವಿಸುವುದರಿಂದ ನಾವು ಪಡೆಯುವುದಕ್ಕಿಂತ ಕಳೆದುಕೊಳ್ಳುವುದೇ ಹೆಚ್ಚು. ಆದ್ದರಿಂದಲೆ ಕೇಕ್ ಕತ್ತರಿಸುವ ಬಗ್ಗೆ ಚರ್ಚೆ ನಡೆಯಿತು. ದೀಪ ಆರಿಸುವುದನ್ನು ಸಾವಿನ ಸಂಕೇತವಾಗಿ ಬಹಳ ಕಾಲ ಗಮನಿಸಿದ ಮಗು ಹುಟ್ಟುಹಬ್ಬದ ದಿನ ಕ್ಯಾಂಡಲ್ ಆರಿಸುವುದನ್ನು ಹೇಗೆ ಅರ್ಥಮಾಡಿಕೊಳ್ಳಬೇಕು? ಸೋಲಿಗರ ಸಾರಿಜಡೆಯನ ಹಾಗೆ ಪ್ರತಿಭಟಿಸಲಾರದ ಮಗು ತನ್ನದೆಲ್ಲವೂ ಹೇಗೆಂದರೆ ಹಾಗೆ, ಯಾವಾಗೆಂದರೆ ಆಗ ಬದಲಾಬಹುದು ಎಂಬ ತೀರ್ಮಾನಕ್ಕೆ ಬರಬೇಕೆ?

**ಭೌತಿಕ ಆಚರಣೆಗಳ ಹಿನ್ನೆಲೆ**

ಈ ಸಂದರ್ಭದಲ್ಲಿ ಪಾಶ್ಚಾತ್ಯ ಮನಶ್ಶಾಸ್ತ್ರದ ಸಂಶೋಧನೆಗಳು ಈ ವಾದಸರಣಿಗೆ ಪೂರಕವಾಗಿರುವುದನ್ನು ಕಾಣಬಹುದು. ನೀತಿಯ ಬಗ್ಗೆ ನಮಗಿರುವ ಜ್ಞಾನ ದಿನನಿತ್ಯದ ಜೀವನದ ಎಲ್ಲ ಸಂದರ್ಭಗಳಲ್ಲೂ ಅನುಷ್ಠಾನಕ್ಕೆ ಬರುವುದಿಲ್ಲ. ನಮ್ಮ ನೀತಿಯ ತಿಳುವಳಿಕೆ ಆಚರಣೆಯಾಗುವಂತೆ ಪ್ರೇರೆಪಿಸುವ ಕಾರಣಗಳು ಯಾವುವು? ಪಾಶ್ಚಾತ್ಯ ಸಂಶೋಧಕರು ಜಗತ್ತಿನ ವಿಭಿನ್ನ ಸಂಸ್ಕೃತಿಗಳಲ್ಲಿ ಎರಡು ಬಗೆಯ ಅನುಷ್ಠಾನಗಳನ್ನು ನೋಡುತ್ತಾರೆ. ಒಂದು – ಆಚರಣೆಗಳು, ಮತ್ತೊಂದು ನೀತಿಯುಕ್ತ ನಡವಳಿಕೆಗಳು. ಉದಾಹರಣೆಗೆ ಯಾವುದೇ ಪವಿತ್ರ ಸ್ಥಾನಗಳಿಗೆ ಹೋಗುವಾಗ ಚಪ್ಪಲಿಗಳನ್ನು ಹೊರಗೆ ಬಿಟ್ಟು ಹೋಗುವುದು ನಮ್ಮ ದೇಶದಾದ್ಯಂತ ಕಂಡುಬರುವ ಸಂಪ್ರದಾಯ. ಆದರೆ ಮತ್ತೊಂದು ಜನಸಮುದಾಯ ಈ ಸಂಪ್ರದಾಯವನ್ನು ಚರ್ಚ್ ಪ್ರವೇಶಿಸುವಾಗ ಆಚರಿಸದಿರಬಹುದು. ಹೀಗೆ ಸಂಪ್ರದಾಯಗಳು ಆಯಾ ಭೌತಿಕ ಪ್ರದೇಶಗಳಿಗೆ ಅನುಗುಣವಾಗಿ ಬೇರೆ ಬೇರೆಯೇ ಆಗಿರುತ್ತವೆ. ಕಾಲದಿಂದ ಕಾಲಕ್ಕೆ ಬದಲಾಗುತ್ತವೆ. ಹಿಂದಿನ ಕಾಲದಲ್ಲಿ ದೊಡ್ಡ ಅಧಿಕಾರಿಗಳನ್ನು

ನೋಡುವಾಗ ತಲೆಗೆ ಟೋಪಿ ಹಾಕಿಕೊಂಡೇ ಹೋಗಬೇಕಾಗಿತ್ತು. ತಲೆಗೆ ಟೋಪಿ ಅಥವಾ ಪೇಟ ಇಲ್ಲದೆ ದೊಡ್ಡವರನ್ನು ಕಾಣುವುದು ಒಂದು ಅಗೌರವ ಎಂದು ಪರಿಗಣಿಸಲಾಗುತ್ತಿತ್ತು. ಆದರೆ ಈ ಸಂಪ್ರದಾಯ ಈಗಿನ ಕಾಲದಲ್ಲಿ ಆಚರಣೆಯಲ್ಲಿಲ್ಲ. ಹಾಗೆಯೇ ನಮ್ಮ ಕಾಲೇಜು ವಿದ್ಯಾರ್ಥಿಗಳು ತರಗತಿಯ ಒಳಗೆ ಕೂಲಿಂಗ್ ಗ್ಲಾಸ್ ಹಾಕಿ ಕುಳಿತುಕೊಳ್ಳುವುದನ್ನು, ಟೋಪಿ ಹಾಕಿಕೊಂಡು ಕುಳಿತುಕೊಳ್ಳುವುದನ್ನು ಅಥವಾ ಅಧ್ಯಾಪಕರ ಹೆಸರು ಹಿಡಿದು ಕರೆಯುವುದನ್ನು ಹದ್ದುಮೀರಿದ ವರ್ತನೆ ಎಂದು ಪರಿಗಣಿಸುತ್ತೇವೆ. ಆದರೆ ಪಾಶ್ಚಾತ್ಯರು ಇವುಗಳನ್ನು ಸಹಜ ಎಂದು ಪರಿಗಣಿಸಬಹುದು. ಇವು ಸಂಪ್ರದಾಯಗಳು. ಇಂತಹ ಸಂಪ್ರದಾಯಗಳ ಆಚರಣೆಯನ್ನು ದಿನಕಳೆದಂತೆ ವೈಚಾರಿಕತೆಯ ಒರೆಗಲ್ಲಿಗೆ ಹಚ್ಚಿ ಪ್ರಶ್ನಿಸಲಾಗುತ್ತದೆ. ಆದರೆ ನೀತಿಯುತ ನಡವಳಿಕೆಗಳು ಸಾರ್ವತ್ರಿಕವಾಗಿ ಮತ್ತು ಸರ್ವಕಾಲಿಕವಾಗಿ ಅಂಗೀಕರಿಸಲ್ಪಟ್ಟ ನಡವಳಿಕೆಗಳಾಗಿವೆ. ಉದಾಹರಣೆಗೆ ತನ್ನಲ್ಲಿರುವುದನ್ನು ಹಂಚಿಕೊಂಡು ಬಾಳುವುದು, 'ಪರಧನ ಪರಸ್ತ್ರೀಗೆ' ಆಶಿಸದಿರುವುದು ಅಥವ ದುರ್ಬಲರ ನೆರವಿಗೆ ಧಾವಿಸುವುದು ನೀತಿಯ ನಡವಳಿಕೆ. ಮನೋವೈಜ್ಞಾನಿಕ ಸಂಶೋಧನೆಗಳ ಪ್ರಕಾರ ಯಾವ ಸಾಂಸ್ಕೃತಿಕ ಪರಿಸರದಲ್ಲಿ ಸಂಪ್ರದಾಯದ ಆಚರಣೆಗಳು ಹೆಚ್ಚು ಚಾಲ್ತಿಯಲ್ಲಿವೆಯೋ ಆ ಜನಸಮುದಾಯಗಳಲ್ಲಿ ನೀತಿಯ ಆಚರಣೆಯೂ ಪ್ರಬಲವಾಗಿರುತ್ತದೆ. ಯಾವ ಜನಸಮುದಾಯ ವೈಚಾರಿಕ ಒರೆಗಲ್ಲಿನ ಆಧಾರದ ಮೇಲೆ ಸಂಪ್ರದಾಯಗಳನ್ನು ಅವೈಜ್ಞಾನಿಕವೆಂದು, ಅಸಂಬದ್ಧ ಎಂದು ಪರಿಗಣಿಸಿ ತಿರಸ್ಕರಿಸುತ್ತಾರೆಯೋ ಆ ಜನಸಮುದಾಯಗಳ ನೀತಿಯುತ ನಡವಳಿಕೆಗಳು ದುರ್ಬಲವಾಗಿರುತ್ತವೆ. ಎಂದರೆ ಅರ್ಥ ನಿರರ್ಥಕತೆಗಳ ನಿಷ್ಕರ್ಷೆಯನ್ನು ಬದಿಗಿಟ್ಟು ಕೆಲವು ಸಂಪ್ರದಾಯಗಳನ್ನು ಬಹಳ ಕಾಲ ಆಚರಿಸುವುದರಿಂದ ಅಂತಹ ವ್ಯಕ್ತಿಗಳು ತಮ್ಮ ವ್ಯಕ್ತಿತ್ವದ ಖಚಿತ ರೂಪುರೇಖೆಗಳನ್ನು ಸಾಧಿಸುತ್ತಾರೆ. ಇಂತಹ ಗಟ್ಟಿ ವ್ಯಕ್ತಿಗಳು ಸಂಪ್ರದಾಯವನ್ನಷ್ಟೇ ಅಲ್ಲ ನೀತಿಗೆ ಸಂಬಂಧಪಟ್ಟ ನಡವಳಿಕೆಯನ್ನೂ ಸಹ ಶ್ರದ್ದೆಯಿಂದ ಆಚರಣೆಗೆ ತರುತ್ತಾರೆ. ಸಣ್ಣಪುಟ್ಟ ಪ್ರಲೋಭನೆಗಳಿಗೆ ಒಳಗಾಗಿ ತಮ್ಮತನವನ್ನು ಅವರು ಎಂದೂ ಬಿಟ್ಟುಕೊಡುವುದಿಲ್ಲ. ಹೀಗೆ ಭೌತಿಕ ಆಚರಣೆಗಳಿಗೂ ಮನಸ್ಸಿನೊಳಗೆ ರೂಪುಗೊಳ್ಳುವ ವ್ಯಕ್ತಿತ್ವದ ಖಚಿತ ರೂಪುರೇಖೆಗಳಿಗು ಅನ್ಯೋನ್ಯ ಸಂಬಂಧವಿದೆ ಎಂಬುದು ಈ ಆಧುನಿಕ ಸಂಶೋಧನೆಗಳಿಂದ ತಿಳಿದು ಬರುತ್ತದೆ.

ವ್ಯಕ್ತಿತ್ವದ ವಿಕಾಸ ಒಬ್ಬ ವ್ಯಕ್ತಿಯ ಆಂತರಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಆಗಬೇಕು. ಆಂತರಿಕ ಗಟ್ಟಿತನವಿಲ್ಲದೆ ನಮ್ಮೊಳಗಿನ ಸಾಮರ್ಥ್ಯಗಳಿಗೆ ನಾವು ರೂಪ ಕೊಡಲು ಸಾಧ್ಯವಿಲ್ಲ. ನಮ್ಮ ಸಾಮರ್ಥ್ಯಗಳ ಅಭಿವ್ಯಕ್ತಿ ನಮ್ಮೊಳಗಿನ ಗಟ್ಟಿತನವನ್ನು ಅವಲಂಬಿಸಿದೆ. ಅಥವಾ ನಮ್ಮ ಸಾಮರ್ಥ್ಯ ವಿಕೃತ ರೂಪ ಪಡೆಯದೆ, ಅನುಕರಣೆಯ ದಾಸನಾಗದೆ ಆರೋಗ್ಯ ವಾಗಿರಬೇಕೆಂದರೆ ನಮ್ಮ ಆಂತರಿಕ ಗಟ್ಟಿತನವನ್ನು ನಾವು ಉಳಿಸಿಕೊಳ್ಳಬೇಕು. ಈ ಸಂದರ್ಭದಲ್ಲಿ ಜ್ಯೂಯಿಸ್ ಎಂಬ ಯಹೂದ್ಯರ ಗುರುವಿನ ಮಾತುಗಳು ನೆನಪಿಗೆ

ಬರುತ್ತವೆ. ಅವನು ಹೇಳುತ್ತಾನೆ – ನಾನು ಸತ್ತು ಸ್ವರ್ಗಕ್ಕೆ ಹೋದಾಗ ದೇವರು ನನ್ನನ್ನು 'ನನ್ನ ಪ್ರೀತಿಯ ಝ್ಯೂಯೆಸ್, ನೀನೇಕೆ ಮೋಸಸ್ ಆಗಲಿಲ್ಲ, ನೀನೇಕೆ ಡೇವಿಡ್ ಆಗಲಿಲ್ಲ' ಎಂದೇನೂ ಕೇಳುವುದಿಲ್ಲ. ಆದರೆ ಕೇಳುತ್ತಾನೆ – 'ನನ್ನ ಪ್ರೀತಿಯ ಝ್ಯೂಯೆಸ್ ನೀನು ನೀನೇ ಏಕೆ ಆಗಲಿಲ್ಲ?'

## ಕ್ವಾಲಿಟಿ ಕಂಟ್ರೋಲ್

ಪ್ರಶ್ನೆ ಏನೆಂದರೆ, ನಾನು ನಾನೇ ಆಗಿ ಉಳಿಯಲು ನಮ್ಮ ಶಿಕ್ಷಣ ನಮಗೆ ಎಷ್ಟು ಸಹಾಯ ಮಾಡುತ್ತಿದೆ? ಶಿಕ್ಷಣದ ಸುಪ್ತ ಆಶಯಗಳೆಲ್ಲ ನಮ್ಮ ಮಕ್ಕಳನ್ನು ಜಾಗತೀಕರಣದ ಮಾರುಕಟ್ಟೆಯ ಬಳಕೆದಾರರನ್ನಾಗಿ ತಯಾರು ಮಾಡುವುದೇ ಅಲ್ಲವೆ? ಜಾಗತೀಕರಣದ ಜಗತ್ತಿಗೆ ಬೇಕಾದ ಕೌಶಲಗಳನ್ನು ಕಲಿಸುವುದೇ ಇಂದಿನ ಶಿಕ್ಷಣದ ಉದ್ದೇಶವಾಗಿದೆ. ಕೇವಲ ಕೌಶಲಗಳನ್ನು ಕಲಿಸುವ ಶಿಕ್ಷಣ ಆ ಕೌಶಲಗಳನ್ನು ಕಲಿಯುವ ಮನುಷ್ಯನ ಬಗ್ಗೆ ಪ್ರೀತಿಯನ್ನು, ಕಾಳಜಿಯನ್ನು ತೋರುತ್ತಿದೆಯೇ? ಮಗುವನ್ನು ಮೊದಲು ವ್ಯಕ್ತಿ ಎಂದು ಗುರುತಿಸಿ ಆನಂತರ ಆ ಮಗುವಿನ ಸಾಮರ್ಥ್ಯದ ಕಡೆಗೆ ಗಮನ ನೀಡಿದರೆ ಸರಿ. ಆದರೆ ನಮ್ಮ ಶಿಕ್ಷಣ ಕುದುರೆಗಿಂತ ಲಗಾಮೇ ಬಹಳ ಮುಖ್ಯ ಎನ್ನುವಂತಿದೆ. ಮನುಷ್ಯನನ್ನು ಫ್ಯಾಕ್ಟರಿಗಳ ಉತ್ಪಾದನಾ ಘಟಕದಂತೆ, ಉತ್ಪಾದನೆಗೆ ತಯಾರಾಗಬೇಕಾಗಿರುವ ಸರಕು ಎಂಬಂತೆ ನೋಡುತ್ತೇವೆ. ಯಾವ ಬಿಡಿಭಾಗಗಳು ಈ ಕಾರ್ಖಾನೆಗೆ ಸೂಕ್ತವಲ್ಲವೋ ಅವುಗಳನ್ನು ನಿರ್ದಾಕ್ಷಿಣ್ಯವಾಗಿ ಹೊರಗೆಸೆಯುವ ಕೆಲಸ ನಡೆಯುತ್ತದೆ. ನಿಧಾನ ಕಲಿಕೆಯ ಮಕ್ಕಳನ್ನು, ನಿರೀಕ್ಷಿತ ಕೌಶಲಗಳನ್ನು ಕಲಿಯಲಾರದ ಮಕ್ಕಳು, ಜಾಗತೀಕರಣದ ಅವಸರದ ವ್ಯವಸ್ಥೆಗೆ ಹೊಂದಿಕೊಳ್ಳಲಾರದ ಮಕ್ಕಳನ್ನು ಕೆಲಸಕ್ಕೆ ಬಾರದ ಸಾಮಗ್ರಿಗಳೊ ಎಂಬಂತೆ ನಮ್ಮ ಶಿಕ್ಷಣ ಹೊರಗೆಸೆದುಬಿಡುತ್ತದೆ. ಒಂದು ಬಹುರಾಷ್ಟ್ರೀಯ ಕಂಪನಿಯ ನೆರವಿನಿಂದ ಕೆಲಸಮಾಡುವ ಸ್ವಯಂಸೇವಾ ಸಂಸ್ಥೆ ಶಿಕ್ಷಣ ಇಲಾಖೆಯ ಕೆಲವು ಸಿಬ್ಬಂದಿಗಳನ್ನು ಶೈಕ್ಷಣಿಕ ಪ್ರವಾಸಕ್ಕೆಂದು ವೋಲ್ವೋ ಬಸ್ ಕಂಪನಿಗೆ ಕರೆದುಕಂಡುಹೋಯಿತು. ಕ್ವಾಲಿಟಿ ಕಂಟ್ರೋಲ್ ಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದು ಈ ಪ್ರವಾಸದ ಉದ್ದೇಶ. ಹೇಗೆ ಈ ಕಂಪನಿಯಲ್ಲಿ ಇನ್ಪುಟ್–ಔಟ್‌ಪುಟ್‌ಗಳ ನಡುವೆ ಕ್ವಾಲಿಟಿ ಮೂಡಿಬರುತ್ತಿತ್ತೋ ಹಾಗೆಯೇ ಶಾಲೆಗಳಲ್ಲಿ ಈ ಶಿಕ್ಷಣ ಇಲಾಖೆಯ ನಿಯಂತ್ರಣಾಧಿಕಾರಿಗಳು ಕ್ವಾಲಿಟಿ ಕಂಟ್ರೋಲ್ ಮಾಡಬಹುದೇ ಎಂಬುದನ್ನು ಕುರಿತು ಚಿಂತನಮಂಥನ ಮಾಡುವುದು ಈ ಪ್ರವಾಸದ ಉದ್ದೇಶ! ದಿಗ್ಭ್ರಾಂತರಾದ ಈ ಶಿಕ್ಷಣಾಧಿಕಾರಿಗಳು ಬಂದು ನನಗೆ ಹೇಳಿದರು – "ನಾವು ಸರ್ಕಾರಿ ಅಧಿಕಾರಿಗಳಾಗಿರಬಹುದು; ಆದರೆ ನಾವು ಕೂಡ ಮಕ್ಕಳು–ಮೆಷಿನ್‌ಗಳು ಬೇರೆಬೇರೆ ಎಂದು ಭಾವಿಸ್ತೀವಿ. ಆದರೆ ಈ ದುಡ್ಡಿನ ಜನಕ್ಕೆ ಮನುಷ್ಯರಿಗೂ ಮೆಷಿನ್ನೂಗ್ಗ ವ್ಯತ್ಯಾಸವೇ ಇಲ್ವಲ್ಲ ಸಾರ್ !"

# ೩. ನಮ್ಮ ವಿಶ್ವವಿದ್ಯಾಲಯಗಳು

"This crippling of individuals, I consider the worst evil of capitalism – our whole educational system suffers from this evil: an exaggerated competitive attitude is inculcated in to the student, who is trained to worship acquisitive success as a preparation for his future career." - **Einstein**

"University is a place where the pebbles are polished and diamonds are dimmed." **- Ingersol**

"I claim that I am not an enemy of higher education. But I am an enemy of higher education as it is given in this country."

**- Mahatma Gandhi**

## ಬ್ರೈನ್‌ವಾಷ್ ತಂತ್ರ

ಆಧುನಿಕ ಸಾಮಾಜಿಕ ಮತ್ತು ಆರ್ಥಿಕ ಸನ್ನಿವೇಶಗಳು ಹೊಸ ಸಾಧ್ಯತೆಗಳನ್ನು ಎಲ್ಲರಿಗೂ ತೆರೆದಿಟ್ಟಿವೆ. ಬುದ್ಧಿಬಲದಿಂದ ಯಾರು ಬೇಕಾದರೂ ಗೆಲ್ಲಬಹುದಾದ ದಾರಿಗಳನ್ನು ತೋರಿಸಿಕೊಟ್ಟಿವೆ. ಹಾಗಾಗಿ ಪ್ರತಿಯೊಬ್ಬರೂ ಮಹತ್ವಾಕಾಂಕ್ಷೆ – ಅತೃಪ್ತಿ– ಮಹತ್ವಾಕಾಂಕ್ಷೆ ಎಂಬ ವಿಷವರ್ತುಲದಲ್ಲಿ ಸಿಕ್ಕಿಬಿದ್ದಿದ್ದಾರೆ. ನಮ್ಮ ಶಿಕ್ಷಣ ವ್ಯವಸ್ಥೆ ಇದನ್ನೆಲ್ಲಾ ಪೂರೈಸಲು ಅಗತ್ಯವಾದ ರೂಪ– ಪರಿವರ್ತನೆಗಳನ್ನು ಪಡೆಯುತ್ತಿದೆ. ಫ್ಲೆಕ್ಸ್ ಪ್ರಿಂಟಿಂಗ್ ಪ್ರಾರಂಭವಾದ ಮೇಲೆ ಕೆಲವು ಶಿಕ್ಷಣ ಸಂಸ್ಥೆಗಳು ತಮ್ಮ ಸಂಸ್ಥೆಗಳಲ್ಲಿ ಓದಿ ಹೆಚ್ಚು ಅಂಕ ಗಳಿಸಿದವರ ಭಾವಚಿತ್ರಗಳನ್ನೂ, ಅವರು ಪಡೆದ ಅಂಕಗಳನ್ನೂ ಸಹ ಅಲ್ಲಿ ಪ್ರಕಟಿಸುವ ರೂಢಿ ಮಾಡಿಕೊಂಡಿದ್ದಾರೆ. ಹೀಗೆ ಶಿಕ್ಷಣವೂ ವ್ಯಾಪಾರದ ಶೈಲಿಯಲ್ಲಿ ಕೆಲಸ ಮಾಡುತ್ತಿದೆ. ಅಥವಾ ಅಪ್ಪಟ ವ್ಯಾಪಾರಿಗಳಿಗೆ ಶಿಕ್ಷಣ ಒಂದು ಲಾಭದಾಯಕ ಉದ್ಯಮವಾಗಿ ಕಂಡುಬರುತ್ತಿದೆ. ಇದರ ಮುಂದುವರಿದ ರೂಪಗಳು ಕಾರ್ಪೊರೇಟ್ ರೂಪಗಳಾಗುವುದರಲ್ಲಿ ಸಂಶಯವಿಲ್ಲ. ಹೀಗೆ ಶಿಕ್ಷಣ ಕಾರ್ಪೊರೇಟ್

ಶೈಲಿಯಲ್ಲಿ ಕೆಲಸ ಪ್ರಾರಂಭಿಸಿದರೆ ಅದು ತಾನು ನಂಬಿದ ಜಾಗತೀಕರಣದ ಮೌಲ್ಯಗಳನ್ನಲ್ಲದೆ ಬೇರೇನನ್ನು ಕೊಡಲು ಸಾಧ್ಯ? ಇಂದಿನ ವಿಶ್ವವಿದ್ಯಾನಿಲಯಗಳ ಸಂಖ್ಯೆಯನ್ನೇ ಗಮನಿಸಿ. ಈ ಹೊಸ ಪೀಳಿಗೆಯ ವಿಶ್ವವಿದ್ಯಾನಿಯಗಳು ಮುಕ್ತ ಮಾರುಕಟ್ಟೆಯಲ್ಲಿ ಶಿಕ್ಷಣವನ್ನು ಬಿಕರಿಮಾಡುವ ಹಂತಕ್ಕೆ ಬಂದುನಿಂತಿರುವುದನ್ನು ನಾವು ಅರ್ಥಮಾಡಿಕೊಳ್ಳಲಾರೆವೆ? ಈ ವಿಶ್ವವಿದ್ಯಾಲಯಗಳು ಜಾಗತೀಕರಣ ಪ್ರಾಯೋಜಿತ ಸಂಸ್ಥೆಗಳಾಗುತ್ತಿವೆ. ಜಾಗತೀಕರಣ ಮನುಷ್ಯನ ಸ್ನಾಯುಬಲ ಮತ್ತು ಮೆದುಳಿನ ಬಲಗಳೆರಡನ್ನೂ ಶೋಷಣೆಗೆ ಒಳಪಡಿಸುತ್ತದೆ. ಹೊಸ ಪೀಳಿಗೆಯ ಈ ವಿಶ್ವವಿದ್ಯಾಲಯುಗಳು ಹಣಪ್ರಧಾನವಾದ ಜಾಗತೀಕರಣ ಸಂಬಂಧ ಚಟುವಟಿಕೆಗಳೆಲ್ಲಕ್ಕೂ ಮೆದುಳಿನ ಶಕ್ತಿಯನ್ನು ಪೂರೈಸುವ ಸಾಧನಗಳು. ಇವು ಮನುಷ್ಯನ ಜ್ಞಾನವನ್ನು ವಿಸ್ತರಿಸುವ ಉದ್ದೇಶವನ್ನೇ ಹೊಂದಿಲ್ಲ. ಜಾಗತಿಕ ಮಾರುಕಟ್ಟೆಗೆ ಬೇಕಾದ ಮ್ಯಾನೇಜ್‌ಮೆಂಟ್ ಜ್ಞಾನವನ್ನು ಒದಗಿಸಿದರೆ ಸಾಕು. ಈ ಬಗೆಯ ಮ್ಯಾನೇಜ್‌ಮೆಂಟ್ ಜ್ಞಾನವನ್ನು ಬದುಕಿನ ಹೆಗ್ಗುರಿಯಾಗಿ ಮಾಡಿಕೊಂಡು ಒಂದು ಕಂಪನಿಯ ಉತ್ಪನ್ನವನ್ನು ಜನಗಳಿಗೆ ತಲುಪಿಸಿ ಅವರಿಂದ ಹಣ ಕಸಿಯುವ ಕೆಲಸವನ್ನು ಮಾಡುತ್ತ ಕೃತಾರ್ಥನಾದೆ ಎಂದು ಭಾವಿಸುವ ಒಬ್ಬ ಮನುಷ್ಯ ಯಾವ ಪ್ರಮಾಣದ ಬ್ರೈನ್‌ವಾಷ್‌ಗೆ ಒಳಗಾಗಿರಬಹುದೆಂಬುದನ್ನು ಭಾವಿಸಿನೋಡಿ. ಈ ವಿಶ್ವವಿದ್ಯಾಲಯಗಳು ಮನುಷ್ಯರನ್ನು ಅವರ ಸ್ವತಂತ್ರ ಆಲೋಚನೆಗಳು, ಸ್ವತಂತ್ರವಾದ ಸಹಜ ಬದುಕಿನ ಸಾಧ್ಯತೆಗಳು ಚಿಗುರುವುದರೊಳಗೆ ಬ್ರೈನ್‌ವಾಷ್ ಟೆಕ್ನಿಕ್ ಬಳಸಿ ಒಂದು ಜಾಗತಿಕ ಮಾರುಕಟ್ಟೆಯ ನಿರ್ಜೀವ ಸರಕಿನ ಹಾಗೆ ಹಣಕ್ಕೆ ವಿಧೇಯರಾದ ವ್ಯಕ್ತಿಗಳನ್ನಾಗಿ ತಯಾರು ಮಾಡುವುದನ್ನು ನಾವು ಶಿಕ್ಷಣ ಎನ್ನಬೇಕೆ? ಜಾಹೀರಾತುಗಳಿಂದ ಇಡೀ ಜಗತ್ತನ್ನೇ ಗೆಲ್ಲಬಹುದೆಂಬನಂಬಿಕೆ ನಮ್ಮ ಬಹುರಾಷ್ಟ್ರೀಯ ಕಂಪನಿಗಳಿಗೆ ಬಂದುಬಿಟ್ಟಿದೆ. ಕೋಕಾಕೋಲಾ ಕಂಪನಿಯ ಜಾಹೀರಾತೊಂದು ಹೀಗಿತ್ತು– "ಹಿಟ್ಲರ್, ನೆಪೋಲಿಯನ್, ಸ್ಟಾಲಿನ್ ಈ ಜಗತ್ತನ್ನು ಗೆಲ್ಲಲಾಗಲಿಲ್ಲ; ಆದರೆ ಕೋಕಾಕೋಲಾ ಗೆಲ್ಲುತ್ತಿದೆ. ಕೋಕಾಕೋಲಾ ಕುಡಿಯಿರಿ". ಮನುಷ್ಯನ ದೌರ್ಬಲ್ಯಗಳನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಳ್ಳುತ್ತಿರುವ ಈ ಬಹುರಾಷ್ಟ್ರೀಯ ಕಂಪನಿಗಳಿಗೆ ಇರಬಹುದಾದ ಶಿಕ್ಷಣದ ಆಶಯುಗಳನ್ನು ಸುಲಭವಾಗಿ ಊಹಿಸಿಬಿಡಬಹುದು. ಒಂದು ಅದ್ಭುತವಾದ ಮಹಾಕಾವ್ಯವನ್ನು ಅಳಿಸಿ ಪುಸ್ತಕದ ಎಲ್ಲಾ ಹಾಳೆಗಳಲ್ಲೂ ಒಂದೇ ಬಗೆಯ ಕೋಕಾಕೋಲ ಬಾಟಲಿಯ ಚಿತ್ರವನ್ನು ಬರೆದರೆ ಹೇಗಿರುತ್ತದೋ ಹಾಗೆ ಇದು. ಮಹಾಕಾವ್ಯವಾಗಬಲ್ಲ ಈ ಅಗಾಧವಾದ ಬದುಕಿನ ಬೆಲೆಯನ್ನು ಕೇವಲ ಒಂದು ಕೋಕಾಕೋಲ ಬಾಟಲಿಗೆ ವಿನಿಮಯ ಮಾಡಿಕೊಳ್ಳುವಷ್ಟು ಬ್ರೇನ್‌ವಾಷ್‌ಗೆ ಜನ ಒಳಗಾದರೆ ನಮ್ಮ ಶಿಕ್ಷಣ ಕ್ಷೇತ್ರ ಮಾಡುತ್ತಿರುವುದಾದರೂ ಏನು?

## ಹೆಚ್ಚುತ್ತಿರುವ ಬಿರುಕು

ವಿಶ್ವವಿದ್ಯಾಲಯಗಳು ತಮ್ಮ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿಕೊಳ್ಳಲು ಶಿಕ್ಷಣವನ್ನು ದುಬಾರಿ ಮಾಡಬೇಕೆಂಬ ಸಲಹೆಗಳಿವೆ. ಈಗಾಗಲೇ ಮೆಡಿಕಲ್-ಇಂಜಿನಿಯರಿಂಗ್ ಕೋರ್ಸ್‌ಗಳು ಬಡವರಿಗೆ ಕೈಗೆಟುಕದಷ್ಟು ದುಬಾರಿಯಾಗಿವೆ. ಪ್ರತಿಭೆಯುಳ್ಳ ಬಡಕುಟುಂಬದ ಮಕ್ಕಳು ಏನು ಮಾಡಬೇಕು? ಹಾಗೆ ನೋಡಿದರೆ ವಿಶ್ವೇಶ್ವರಯ್ಯನವರಂಥ ಪ್ರತಿಭಾವಂತ ಇಂಜಿನಿಯರ್ ಬಂದಿದ್ದು ಒಂದು ಬಡಕುಟುಂಬದಿಂದ. ಬಹಳಷ್ಟು ಪ್ರತಿಭೆಗಳು ಬರುವುದೇ ಬಡಕುಟುಂಬಗಳಿಂದ. ಇದಕ್ಕೆ ಇರಬಹುದಾದ ಪರ್ಯಾಯ ಕಾರಣವೆಂದರೆ ನಮ್ಮ ದೇಶದ ಶೇಕಡಾ 80ರಷ್ಟು ಜನ ಬಡವರೆ. ಹೀಗೆ ಶೇಕಡಾ 80 ರಷ್ಟು ಬಡವರೇ ತುಂಬಿರುವ ನಮ್ಮ ದೇಶದಲ್ಲಿ ವಿಶ್ವವಿದ್ಯಾನಿಲಯಗಳು ಪ್ರತಿಭೆಗಿಂತ ಹಣಕ್ಕೆ ಹೆಚ್ಚು ಪ್ರಾಧಾನ್ಯ ಕೊಡುವುದಾದರೆ ಈ ವಿಶ್ವವಿದ್ಯಾನಿಲಯಗಳ ಮೂಲ ಉದ್ದೇಶವಾದರೂ ಏನು? ಇದು ವಸಾಹತುಶಾಹಿ ಮನಸ್ಸನ್ನು ಬಿಂಬಿಸುತ್ತದೆ. ಬ್ರಿಟಿಷರ ಆಳ್ವಿಕೆಯಲ್ಲಿ ದೇಶದ ಅನಕ್ಷರತೆ ಜಾಸ್ತಿಯಾಗಿದ್ದಷ್ಟೇ ಅಲ್ಲ, ಶಿಕ್ಷಣ ದುಬಾರಿಯಾಯಿತು. ಲಾರ್ಡ್ ಕರ್ಜನ್ ವಿಶ್ವವಿದ್ಯಾಲಯದ ಶಿಕ್ಷಣವನ್ನು ದುಬಾರಿಮಾಡಿದ. ಆಗ ಸ್ವಾಮಿ ವಿವೇಕಾನಂದರು ವೈಸ್ರಾಯ್ ಒಳ್ಳೆಯ ಕೆಲಸವನ್ನೇ ಮಾಡಿದ ಎನ್ನುತ್ತಾರೆ. ಏಕೆಂದರೆ ಇದರಿಂದಾಗಿ ಸಾಕಷ್ಟು ಜನ ಈ ವಿಶ್ವವಿದ್ಯಾನಿಲಯದಿಂದ ದೂರವೇ ಉಳಿಯುತ್ತಾರೆ. ಹಣ ತೆತ್ತು ಕೆಟ್ಟ ಶಿಕ್ಷಣ ಪಡೆಯುವುದಕ್ಕಿಂತ ಹೀಗೆ ವಿಶ್ವವಿದ್ಯಾಲಯದಿಂದ ದೂರ ಉಳಿಯುವುದೇ ಒಳ್ಳೆಯದು ಎನ್ನುವುದು ಅವರ ಅಭಿಪ್ರಾಯ.

ಶ್ರೀಮಂತರನ್ನು ಮತ್ತಷ್ಟು ಶ್ರೀಮಂತರನ್ನಾಗಿ ಮಾಡುತ್ತ ಸಮಾಜದ ಬಿರುಕುಗಳನ್ನು ಮತ್ತಷ್ಟು ವಿಸ್ತರಿಸುವುದೇ ಈ ವಿಶ್ವವಿದ್ಯಾಲಯಗಳ ಕೆಲಸ. ನಾಯಿಕೊಡೆಗಳಂತೆ ತಲೆ ಎತ್ತುತ್ತಿರುವ ಖಾಸಗಿ ವಿಶ್ವವಿದ್ಯಾನಿಲಯಗಳ ಹಾವಳಿಯ ಬಗ್ಗೆ ಭಾರತ ಸರ್ಕಾರ ತನ್ನ ನಿಸ್ಸಹಾಯಕತೆಯನ್ನು ಅಧಿಕೃತ ವೆಬ್‌ಸೈಟ್ ಒಂದರಲ್ಲಿ ತೋಡಿಕೊಂಡಿದೆ. ಖಾಸಗಿ ವಿಶ್ವವಿದ್ಯಾಲಯಗಳು ಪ್ರಭಾವಿ ರಾಜಕಾರಣಿಗಳ ಒಡೆತನದಲ್ಲಿರುವುದರಿಂದ ಇವುಗಳ ಮೇಲೆ ಕ್ರಮ ಜರುಗಿಸಲು ಸಾಧ್ಯವಾಗುತ್ತಿಲ್ಲ ಎನ್ನುತ್ತದೆ ಸರ್ಕಾರ. ಈ ವೆಬ್ ಸೈಟ್‌ನ ಒಂದು ವಿವರ ಹೀಗಿದೆ– 'ಅಮಿಟಿ ಯುನಿವರ್ಸಿಟಿ' ಎಂಬ ಒಂದು ಖಾಸಗಿ ಯೂನಿವರ್ಸಿಟಿಯ ಮುಖ್ಯಸ್ಥೆ ಕೆಲಸ ಹುಡುಕಿಕೊಂಡು ಬಂದ ಒಬ್ಬ ಪ್ರತಿಭಾವಂತ ಪಿಎಚ್.ಡಿ ಪದವೀಧರ ಅಭ್ಯರ್ಥಿಗೆ ಹೇಳಿದಳಂತೆ – 'ನಮ್ಮ ವಿಶ್ವವಿದ್ಯಾನಿಲಯದಲ್ಲಿ ಶ್ರೀಮಂತ ಕುಟುಂಬಗಳಿಂದ ಬಂದ ಮಕ್ಕಳು ಓದುತ್ತಿದ್ದಾರೆ. ಹಾಗಾಗಿ ಈ ವಾತಾವರಣದಲ್ಲಿ ಕೆಲಸ ಮಾಡಲು ನೀವು ಸೂಕ್ತ ವ್ಯಕ್ತಿ ಅಲ್ಲ. ಏಕೆಂದರೆ ನೀವು ಬಡಕುಟುಂಬದ ಹಿನ್ನಲೆಯಿಂದ ಬಂದಿದ್ದೀರಿ'. ಇಂತಹ ವಿದ್ಯಾಸಂಸ್ಥೆಗಳಿಂದ ಹೊರಬಂದ ವಿದ್ಯಾರ್ಥಿಗಳು ಯಾವ ಜೀವನದೃಷ್ಟಿಯನ್ನು ಪಡೆಯಲು ಸಾಧ್ಯ?

**ಮೌಲ್ಯ - ಸಿದ್ಧಾಂತಗಳ ಅಭಾವ**

ಖಾಸಗಿ ವಿಶ್ವವಿದ್ಯಾಲಯಗಳು ಹಣವನ್ನೆ ಮುಖ್ಯ ಗುರಿಯನ್ನಾಗಿಟ್ಟುಕೊಂಡು ಕೆಲಸ ಮಾಡುತ್ತವೆ. ಆದ್ದರಿಂದ ಅವುಗಳನ್ನು ನಿಯಂತ್ರಿಸಬೇಕಾದದ್ದು ಸರ್ಕಾರದ ಕೆಲಸ. ಆದರೆ ಈ ಬಗ್ಗೆ ನಿಯಂತ್ರಣ ಸಾಧ್ಯವಿಲ್ಲ ಎಂದು ಸರ್ಕಾರ ತನ್ನ ಅಸಹಾಯಕತೆಯನ್ನು ತೋಡಿಕೊಂಡರೆ ಅದಕ್ಕೆ ಅರ್ಥವಿದೆಯೆ? ಸರ್ಕಾರವೇ ಇದು ತಪ್ಪು ಎಂದು ತಿಳಿದೂ ನಿಯಂತ್ರಿಸಲು ಸಾಧ್ಯವಾಗದೆ ಹೋದರೆ ಈ ಸಮಸ್ಯೆಗೆ ಪರಿಹಾರ ಕೊಡುವವರು ಯಾರು? ಇದು ಖಾಸಗಿ ವಿಶ್ವವಿದ್ಯಾಲಯಗಳಿಗೆ ಸಂಬಂಧಪಟ್ಟ ಸಮಸ್ಯೆಯಾದರೆ ನಮ್ಮ ಅಧಿಕೃತವಾದ ಸರ್ಕಾರಿ ವಿಶ್ವವಿದ್ಯಾಲಯಗಳು ಮಾಡುತ್ತಿರುವುದೇನು? ಸ್ವಾಮಿ ವಿವೇಕಾನಂದರು ಈಗ್ಗೆ ನೂರೈವತ್ತು ವರ್ಷಗಳ ಹಿಂದೆಯೆ ಬ್ರಿಟಿಶ್ ವಸಾಹತುಶಾಹಿ ವಿಶ್ವವಿದ್ಯಾಲಯಗಳ ಬಗ್ಗೆ ಟೀಕೆ ಮಾಡಿದರು. ಅವರು ಕೇಳುತ್ತಾರೆ - 'ನಿಮ್ಮ ವಿಶ್ವವಿದ್ಯಾಲಯಗಳನ್ನೆ ತೆಗೆದುಕೊಳ್ಳಿ, ಈ ಐವತ್ತು ವರ್ಷಗಳ ಅಸ್ತಿತ್ವದಲ್ಲಿ ಅವು ಸಾಧಿಸಿರುವುದಾದರೂ ಏನನ್ನು? ಸ್ವೋಪಜ್ಞತೆಯುಳ್ಳ ಒಬ್ಬನನ್ನಾದರೂ ನಿರ್ಮಾಣ ಮಾಡಿಲ್ಲ. ಅವು ಕೇವಲ ಪರೀಕ್ಷೆ ನಡೆಸುವ ಅಂಗಗಳಾಗಿವೆ'. ಈಗ ಎರಡು ಶತಮಾನಗಳನ್ನು ದಾಟಿದ ಬಳಿಕವೂ ಪರಿಸ್ಥಿತಿ ಉತ್ತಮವಾಗಿದೆಯೇ? ಇಂದಿನ ವಿಶ್ವವಿದ್ಯಾಲಯಗಳ ಪಂಡಿತರು ತಮ್ಮದೇ ಈ ಸಂಸ್ಥೆಗಳ ಬಗೆಗೆ ಜವಾಬ್ದಾರಿಯನ್ನು ಹೊರುತ್ತಾರೆಯೆ? ಈ ವಿಶ್ವವಿದ್ಯಾನಿಲಯ ನನ್ನದು; ಹಾಗಾಗಿ ಇದರ ಕಾರ್ಯವೈಖರಿಗೆ, ಇದರ ನಿಲುವುಗಳಿಗೆ, ಇದರ ಸಾಧಕ-ಬಾಧಕಗಳಿಗೆ ನಾನು ಜವಾಬ್ದಾರನಾಗಬೇಕೆಂಬ ಸಮಗ್ರ ಪ್ರಜ್ಞೆ ಇವರಿಗಿದೆಯೆ? ವಿಶ್ವವಿದ್ಯಾನಿಲಯ ಒಟ್ಟಾರೆಯಾಗಿ ನನಗೆ ಸೇರಿದ್ದು ಎಂಬ ಲೇಶಮಾತ್ರ ಭಾವನೆಯೂ ಇಲ್ಲದಿದ್ದರೆ ಈ ಪಂಡಿತರು ತಮ್ಮನ್ನು ತಾವು ಯಾವುದರೊಂದಿಗೆ ಗುರುತಿಸಿಕೊಳ್ಳುತ್ತಾರೆ? ಸಮಾಜದೊಡನೆ ಒಂದು ಆರೋಗ್ಯಕರವಾದ ಸಂಬಂಧವನ್ನು ಬೆಳೆಸಿಕೊಳ್ಳುವುದನ್ನು ವಿದ್ಯಾರ್ಥಿಗಳಿಗೆ ಹೇಳಿಕೊಡಬೇಕಾದ ಈ ಪ್ರೊಫೆಸರ್‌ಗಳು ತಮ್ಮದೇ ಮಾತೃಸಂಸ್ಥೆ- ವಿಶ್ವವಿದ್ಯಾಲಯದೊಡನೆ ಯಾವ ತಾದಾತ್ಮ್ಯವನ್ನು ಹೊಂದಿದ್ದಾರೆ? ತಮ್ಮ ಸಂಸ್ಥೆಯು ಆರೋಗ್ಯಕರ ನಿಲುವುಳ್ಳದ್ದಾಗಿರಬೇಕು ಎಂಬ ಕಾಳಜಿ ಇವರಿಗಿದೆಯೆ? ಅಥವಾ ಅದರ ಅನಾರೋಗ್ಯಕರ ನಿಲುವುಗಳ ಬಗ್ಗೆ ಚಿಂತಿತರಾಗಿದ್ದಾರೆಯೆ? ವಿಶ್ವವಿದ್ಯಾಲಯಗಳು ಅನುಸರಿಸುವ ಮಾರ್ಗ, ಮೌಲ್ಯಗಳ ಬಗ್ಗೆ, ತತ್ತ್ವಸಿದ್ಧಾಂತಗಳ ಬಗೆಗೆ ಈ ಪಂಡಿತರಿಗೆ ಒಡೆತನದ ಭಾವನೆ ಇದೆಯೆ? ಈ ಪ್ರಶ್ನೆಗಳನ್ನು ನಾನು ಕಾರಣವಿಲ್ಲದೆ ಕೇಳುತ್ತಿಲ್ಲ.

ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವ ಸಮಾರಂಭವೊಂದಕ್ಕೆ ಹೋಗಿದ್ದ ಒಂದು ಘಟನೆ ನೆನಪಾಗುತ್ತಿದೆ. ಆಗ ನನ್ನ ಮನಸ್ಸಿನಲ್ಲಿ ಇಂತಹ ಹತ್ತು ಹಲವು ಪ್ರಶ್ನೆಗಳು ಕಾಡತೊಡಗಿದವು. ಏಕೆಂದರೆ ಕುವೆಂಪು, ಹಿರಿಯಣ್ಣ, ರಾಧಾಕೃಷ್ಣನ್- ಅವರಂತಹ ಮಹಾನ್ ಸಾಧಕರಿಗೆ ಆಶ್ರಯವಿತ್ತ ಈ ವಿಶ್ವವಿದ್ಯಾನಿಲಯದ ಬಗ್ಗೆ ಸ್ವಲ್ಪ

ಹೆಚ್ಚಿನ ನಿರೀಕ್ಷೆ ಇರುವುದು ಸಹಜ. ಆದರೆ ಅಂದಿನ ಸಮಾರಂಭದಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ನೂರಾರು ಚಿನ್ನದ ಪದಕಗಳನ್ನು ನೀಡಲಾಯಿತು. ಇದು ಸಂತೋಷದ ಸಂಗತಿ. ಪದಕ ನೀಡುವಾಗ ಆಯಾ ಪದಕಗಳನ್ನು ಪ್ರಾಯೋಜಿಸಿದ ಮಹನೀಯರ ಹೆಸರನ್ನು ಅಥವಾ ಸಂಸ್ಥೆಗಳನ್ನು ಪ್ರಕಟಿಸುತ್ತಿದ್ದರು. ಬಿ.ಎಂ.ಶ್ರೀ., ತೀ.ನಂ.ಶ್ರೀ. ಅಥವಾ ಕುವೆಂಪು ಹೆಸರಿನಲ್ಲಿದ್ದ ಪದಕವನ್ನು ಪ್ರಕಟಿಸಿದಾಗ ಸಂತೋಷವಾಗುತ್ತಿತ್ತು. ಆದರೆ ಕುದುರೆ ಜೂಜು ನಡೆಸುವ ಸಂಸ್ಥೆಯ ಹೆಸರಿನಲ್ಲೊಂದು ಪದಕ, ಸಾರಾಯಿ ವ್ಯಾಪಾರ ಮಾಡುವ ಸಂಸ್ಥೆಗಳ ಹೆಸರಿನಲ್ಲಿ ಒಂದು ಪದಕ, ಸಮಾಜಕ್ಕೆ ಯಾವ ರೀತಿಯಲ್ಲೂ ಮಾದರಿಯಾಗಲಾರದ ಅಪ್ಪಟ ವ್ಯಾಪಾರಿಗಳ ಹೆಸರಿನಲ್ಲಿ ಪದಕ ನೀಡಿದಾಗ ಗಾಬರಿಯಾಗುತ್ತಿತ್ತು. ಹಣದ ಬಲವೊಂದಿದ್ದರೆ ಎಂತಹ ಕುಖ್ಯಾತ ವ್ಯಕ್ತಿಗಳೂ ತಮ್ಮ ಹೆಸರಿನಲ್ಲಿ ಪದಕ ಸ್ಥಾಪಿಸಬಹುದು ಎಂಬ ಸಂದೇಶವನ್ನು ಈ ಮೂಲಕ ವಿಶ್ವವಿದ್ಯಾನಿಲಯ ಬಿತ್ತರಿಸುತ್ತಿತ್ತು. ಆದರ್ಶಪ್ರಿಯತೆಯನ್ನು ಹೆಚ್ಚಿಸಬೇಕಾದ ವಿಶ್ವವಿದ್ಯಾನಿಲಯವೆ ಹೀಗೆ ಆದರ್ಶಹೀನತೆಯಿಂದ ಬಳಲುತ್ತಿದ್ದರೆ ಜನಸಾಮಾನ್ಯರ ಪಾಡೇನು? ಅನೇಕ ವರ್ಷಗಳಿಂದ ವಿತರಿಸುತ್ತಿರುವ ಈ ವಿಧದ ಪದಕಗಳ ಬಗೆಗೆ ನಮ್ಮ ವಿಶ್ವವಿದ್ಯಾನಿಲಯದ ಪ್ರಜ್ಞಾವಂತ ಪ್ರೊಫೆಸರ್‌ಗಳಾಗಲೀ ಅಥವಾ ಪದಕ ಪ್ರಾಯೋಜನೆ ಮಾಡುವವರಿಂದ ಹಣ ಪಡೆಯುವ ವೈಸ್ ಛಾನ್ಸಲರ್ ಆಗಲಿ ಏಕೆ ಇದನ್ನು ಪ್ರತಿಭಟಿಸಲಿಲ್ಲ? ಒಮ್ಮೆ ಒಬ್ಬ ಯುನಿವರ್ಸಿಟಿ ವೈಸ್ ಛಾನ್ಸಲರ್ ಅವರನ್ನು ಗೌರ್ನರ್ ತರಾಟೆಗೆ ತೆಗೆದುಕೊಂಡ ದೃಶ್ಯವನ್ನು ಟಿ.ವಿ.ಯಲ್ಲಿ ತೋರಿಸಿದರು. ದುರಂಹಕಾರಿಯಾದ ಗೌರ್ನರ್ ಸಭ್ಯನಾದ ವೈಸ್ ಛಾನ್ಸಲರ್‌ನನ್ನು ಶಾಲಾಬಾಲಕರನ್ನು ಬೈಯ್ಯುವಂತೆ ತರಾಟೆಗೆ ತೆಗೆದುಕೊಂಡಿದ್ದರು. ಆದರೆ ತನ್ನದಲ್ಲದ ತಪ್ಪಿಗೆ ಬೈಸಿಕೊಂಡದ್ದೂ ಅಲ್ಲದೆ ಬಲಹೀನರಾಗಿದ್ದ ಆ ವೈಸ್ ಛಾನ್ಸಲರ್ ಸ್ವಲ್ಪವೂ ಪ್ರತಿರೋಧ ವ್ಯಕ್ತಪಡಿಸಲಿಲ್ಲ. ಸ್ವಂತ ವ್ಯಕ್ತಿತ್ವವುಳ್ಳ ಯಾವುದೇ ವೈಸ್ ಛಾನ್ಸಲರ್ ಹಿಂದಕ್ಕೆ ಸರಿಯಾಗಿ ಝಾಡಿಸದೆ ಬಿಡುತ್ತಿರಲಿಲ್ಲ. ನನ್ನ ಪ್ರಶ್ನೆ ಏನೆಂದರೆ ನಮ್ಮಲ್ಲಿ ದೊಡ್ಡ ಪಂಡಿತರಿದ್ದಾರೆ, ಉನ್ನತ ಹುದ್ದೆಯನ್ನು ಅಲಂಕರಿಸಬಲ್ಲ ಸಮರ್ಥರು ಇದ್ದಾರೆ. ಆದರೆ ತಾತ್ತ್ವಿಕವಾಗಿ ದೃಢನಿಲುವು ಇರುವ ಜನಗಳು ಇಲ್ಲವಲ್ಲ. ಇದು ಏಕೆ?

**ಜರ್ಮನ್ ಹುಡುಗಿಯರು ಹೇಳಿದ್ದು.**

ಈ ಸಂದರ್ಭದಲ್ಲಿ ನಮ್ಮ ಆಶ್ರಮಕ್ಕೆ ಬಂದು ಒಂದು ವರ್ಷ ಕಾಲ ಸೇವೆ ಸಲ್ಲಿಸಿದ ಜರ್ಮನ್ ಸ್ವಯಂಸೇವಕಿಯರ ನೆನಪು ಬರುತ್ತದೆ. ಆಗ ನಾನು ಜರ್ಮನಿಯ ತತ್ವಶಾಸ್ತ್ರಜ್ಞರಾದ ಶೋಪನ್ ಹೊವರ್ ಮತ್ತು ಕ್ಯಾಂಟ್ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದೆ. ಇವರ ಕ್ಲಿಷ್ಟವಾದ ವಾದಸರಣಿ ಜರ್ಮನಿಯ ಜನಸಾಮಾನ್ಯರ ಮೇಲೆ ಏನು ಪ್ರಭಾವ ಬೀರಿರಬಹುದು ಎಂದು ಕುತೂಹಲ ಉಂಟಾಯಿತು. ಇದೇ ಪ್ರಶ್ನೆಯನ್ನು ಜರ್ಮನಿಯ ಸ್ವಯಂಸೇವಕಿ ಸೂಸೆನ್‌ಗೆ ಹಾಕಿದೆ. ನನ್ನ ಪ್ರಶ್ನೆಯಲ್ಲೆ ಈ

ತತ್ತ್ವಶಾಸ್ತ್ರಜ್ಞರ ವಿಚಾರಗಳಿಗೂ ಜರ್ಮನಿಯ ಜನಸಾಮಾನ್ಯರ ಜೀವನಕ್ಕೂ ಯಾವುದೇ ಸಂಬಂಧ ಇರುವುದಿಲ್ಲ ಎಂಬ ಸೂಚನೆಯಿತ್ತು. ಈ ಸೂಚನೆಯ ಧಾಟಿ ಹಿಡಿದು ಈ ಹುಡುಗಿ ಉತ್ತರಿಸುತ್ತಾಳೆ ಎಂಬ ನಿರೀಕ್ಷೆಯೂ ಇತ್ತು. ಆದರೆ ಈ ಜರ್ಮನ್ ಹುಡುಗಿಯ ಉತ್ತರದಲ್ಲಿ ಪ್ರತಿಭಟನೆ ಇತ್ತು. ಆಕೆ ಇದನ್ನು ಒಪ್ಪಲಿಲ್ಲ. ಆಕೆಯ ಪ್ರಕಾರ ಕ್ಯಾಂಟ್‌ನ ಚಿಂತನೆಯಿಂದಾಗಿ ಜರ್ಮನಿಯ ಜನ ತಮ್ಮ ಕಾರ್ಯಗಳಿಗೆ ತಾವೆ ಹೊಣೆ ಎಂಬುದನ್ನು ಅರಿಯತೊಡಗಿದ್ದಾರೆ; ಹಾಗೆ ಆಲೋಚನೆಯನ್ನು ಮಾಡುತ್ತಾರೆ. ತಮ್ಮ ಕಾರ್ಯಗಳ ಪರಿಣಾಮಗಳಿಗೆ ತಾವೆ ಹೊಣೆ ಎಂಬುದನ್ನು ಅರಿತು ಜನ ನಡೆದುಕೊಳ್ಳಲು ಪ್ರಾರಂಭಿಸಿದ್ದಕ್ಕೆ ಕ್ಯಾಂಟ್ ಒಬ್ಬನೆ ಕಾರಣ ಎಂದು ಹೇಳಲಾಗುವುದಿಲ್ಲ. ಬಹುಶಃ ಇದರ ಜೊತೆ ವೈಜ್ಞಾನಿಕ ಪ್ರಗತಿಯೂ ಕಾರಣವಿರಬಹುದು. ಆದರೂ ಕ್ಯಾಂಟ್‌ನ ವಿಚಾರಧಾರೆ ಜರ್ಮನಿಯ ಜನರ ಮೇಲೆ ಬಹಳ ಪ್ರಭಾವ ಬೀರಿದೆ ಎಂದು ಈ ಹುಡುಗಿ ವಿವರಿಸಿದಳು. ಜೊತೆಗೆ ಮತ್ತೊಂದು ವಿಷಯವನ್ನು ಹೇಳಿದಳು. ಅದೇನೆಂದರೆ ಭಾರತದಲ್ಲಿ ಜನರ ನಡವಳಿಕೆಯನ್ನು ಗಮನಿಸಿದರೆ ಅವರಾರೂ ತಾವು ಸ್ವಂತ ವ್ಯಕ್ತಿಗಳಲ್ಲವೇನೊ ಎಂಬಂತೆ ನಡೆದುಕೊಳ್ಳುವುದು ಕಂಡುಬರುತ್ತದೆ. "They are not themselves" ಎಂದಳು. ಈ ಪದವನ್ನು ಅನೇಕ ಬಾರಿ ಬಳಸಿ ತನ್ನ ಅನಿಸಿಕೆಯನ್ನು ತಿಳಿಸಲು ಪ್ರಯತ್ನಿಸಿದಳು. ಭಾರತೀಯರು ಸರಳ ನಿರ್ಧಾರಗಳನ್ನೂ ತೆಗೆದುಕೊಳ್ಳಲಾರದೆ ಯಾವುದೋ ಆದೇಶಕ್ಕಾಗಿ ಕಾಯುವಂತೆ ಕಂಡು ಬರುತ್ತದೆ; ಯಾರಾದರೂ ಹೇಳಿದರಷ್ಟೆ ಮಾಡುವ ಪ್ರವೃತ್ತಿ ಕಂಡುಬರುತ್ತದೆ ಎಂದು ಹೇಳಿದಳು. ನಮ್ಮ ಜನಗಳ ನಡವಳಿಕೆಯನ್ನು ಗಮನಿಸಿದರೆ ಈ ಜರ್ಮನ್ ಯುವತಿಯ ಮಾತುಗಳನ್ನು ಸಂಪೂರ್ಣವಾಗಿ ತೆಗೆದುಹಾಕಲು ಸಾಧ್ಯವಿಲ್ಲ. ಈ ಬಗೆಯ ನಡವಳಿಕೆ ನಮ್ಮ ಜನಗಳಲ್ಲಿ ಹಾಸುಹೊಕ್ಕಾಗಿರುವುದು ಸ್ಪಷ್ಟವಾಗಿ ಕಾಣುತ್ತದೆ. ನಾವು ನಮ್ಮ ಮಕ್ಕಳನ್ನು ಅತಿಯಾದ ನಿಯಂತ್ರಣದಲ್ಲಿ ಬೆಳೆಸುವುದೂ ಇದಕ್ಕೆ ಕಾರಣ ವಿರಬಹುದು. ಅಲ್ಲದೆ ಕರ್ಮ-ವಿಧಿ ಸಿದ್ಧಾಂತಗಳು ನಮ್ಮ ಮೂಳೆಗಳಾಳಕ್ಕೆ ಇಳಿದು ವಿಕೃತಗೊಂಡು ಮನುಷ್ಯರು ಕ್ರಿಯಾಶೂನ್ಯರಾಗಿದ್ದಾರೆಯೆ? ತಿಳಿಯದು. ಕ್ರಿಯಾಶೀಲತೆಯ ಕೊರತೆಗೆ ಅನುಕರಣಾ ಪ್ರವೃತ್ತಿ ಒಂದು ಕಾರಣವಾದರೆ ಜಾಗತೀಕರಣ ನೀಡುವ ಸುಲಭೋಪಾಯ ಮತ್ತೊಂದು ಕಾರಣವಾಗುತ್ತದೆ.

# ೪. ಬದುಕಿನ ವಾಸ್ತವತೆ ಮತ್ತು ಶಿಕ್ಷಣ

## ಸರಳ ಬದುಕಿನ ಸೌಂದರ್ಯ

ಸ್ಪರ್ಧಾ ಮನೋಭಾವದಿಂದ ಹುಟ್ಟುವ ಮಹತ್ತ್ವಾಕಾಂಕ್ಷೆ ಮತ್ತು ಗುರಿಗಳು ನಮ್ಮನ್ನು ನಾವು ಇತರರೊಡನೆ ಹೋಲಿಕೆ ಮಾಡಿಕೊಳ್ಳುವುದರಿಂದ ಹುಟ್ಟುವ ಕಾಯಿಲೆಗಳು. ಬದುಕು ಎಂಬುದು ಯಾರೊಡನೆಯೂ ಹೋಲಿಕೆ ಮಾಡಿಕೊಳ್ಳದೆ ತನಗೆ ತಾನೇ ಪಡೆಯಬಹುದಾದ ಸಂತೋಷ, ನೆಮ್ಮದಿ, ತೃಪ್ತಿಗಳಿಗೆ ಸಂಬಂಧ ಪಟ್ಟುದಲ್ಲವೆ? ಮನುಷ್ಯ ಈ ಬದುಕಿನಲ್ಲಿ ಏನೆಲ್ಲವನ್ನು ಸಾಧಿಸಿದರೂ ಅದು ತನ್ನೊಳಗೆ ತಾನು ಪಡೆಯಬಹುದಾದ ಸಂತೋಷ ತೃಪ್ತಿಗಳಿಗಾಗಿ ಅಲ್ಲವೆ? ಇವುಗಳನ್ನು ಪಡೆಯಲು ನಾವು ನಮ್ಮ ಮಣ್ಣಿನ ಕಣ್ಣನ್ನು ಕುರುಡು ಮಾಡಿಕೊಳ್ಳಬೇಕೆ? ಅಳುವ ಮಗುವಿನ ದುಃಖ ಶಮನ ಮಾಡಿದಾಗ, ಬಹಳ ಕಾಲದಿಂದ 'ನನ್ನದು' ಎಂದು ಕಾಪಾಡಿಕೊಂಡು ಬಂದ ಒಂದು ಭಾವನೆಯನ್ನೋ, ವಸ್ತುವನ್ನು ಅನಿವಾರ್ಯ ಪ್ರಸಂಗದಲ್ಲಿ ನಿರುಮ್ಮಳವಾಗಿ ತ್ಯಜಿಸಿದಾಗ ಅಥವಾ ಇತರರೊಡನೆ ಹಂಚಿಕೊಂಡಾಗ ಪಡೆಯಬಹುದಾದ ಸಂತೋಷ ಕೆಳಮಟ್ಟಕ್ಕೆ ಸೇರಿದೆಯೆ?

ನಮ್ಮ ಇಂದಿನ ಶಿಕ್ಷಣ ಇಂತಹ ಪ್ರಶ್ನೆಗಳಿಗೆ ಎಡೆಮಾಡಿಕೊಡಲಾರದು. ಯಾವುದೇ ನಿಲ್ದಾಣದಲ್ಲಿ ನಿಲ್ಲದೆ, ನಿಂತರೂ ಕೆಲವೇ ಕ್ಷಣ ನಿಂತು ವೇಗವಾಗಿ ಸಾಗುವ ರೈಲುಗಾಡಿಯಂತೆ ಶಿಕ್ಷಣ ಮಕ್ಕಳನ್ನು ಮೊದಲನೇ ತರಗತಿಯಿಂದ ಎಳೆದೊಯ್ದು ಕೊನೆ ಮುಟ್ಟುವವರೆಗೆ ಸಾಗಿಸಿಬಿಡುತ್ತದೆ. ಆಗೊಮ್ಮೆ ಈಗೊಮ್ಮೆ ನಿಂತು ತಾನು ಸವೆಸಿದ ದಾರಿಯನ್ನು ಹಿಂತಿರುಗಿ ನೋಡುವ, ಆತ್ಮವಿಮರ್ಶೆ ಮಾಡುವ ಯಾವ ಅವಕಾಶವೂ ಇಲ್ಲ, ಯಾವ ಪರಿಪಾಟವೂ ಇಲ್ಲ. ಸಮಾಜದ ಭಾಗವಾಗಿ ಬದುಕಬೇಕಾಗಿರುವ ನಮ್ಮ ಮಕ್ಕಳಿಗೆ ಈ ಶಿಕ್ಷಣ ಸಮಾಜದ ವಾಸ್ತವತೆಗಳಿಗೆ ಸುತ್ತಣ ಪರಿಸರಕ್ಕೆ ಸ್ಪಂದಿಸಲು ಅವಕಾಶವನ್ನೇ ಮಾಡಿಕೊಡುವುದಿಲ್ಲ. ವಿಕಾಸದ ಹಾದಿಯಲ್ಲಿ ಅನೇಕ ಪ್ರಾಣಿಪಕ್ಷಿಗಳು ಸಂತತಿ ಹೀನವಾಗಿ ನಶಿಸಿಹೋಗಿದ್ದಕ್ಕೆ ಕಾರಣ ಈ ಪ್ರಾಣಿಗಳು ತಮ್ಮ ಸುತ್ತಣ ಪರಿಸರಕ್ಕೆ ಅಗತ್ಯ ಹೊಂದಾಣಿಕೆ ಮಾಡಿಕೊಳ್ಳಲಾರದೆ ಹೋದದ್ದು. ಇಂದಿನ ಶಿಕ್ಷಣವೂ ಮಕ್ಕಳನ್ನು ತಮ್ಮ ವಾಸ್ತವ ಪರಿಸರಕ್ಕೆ ಸ್ಪಂದಿಸದಂತೆ ಕೇವಲ ಯಶಸ್ಸಿನ ಕನಸಿನ ಲೋಕಕ್ಕೆ ತಯಾರು ಮಾಡುತ್ತಿದೆ. ಇದು ಕೊನೆಗೆ ಮನುಕುಲದ ವಿನಾಶಕ್ಕೇ ಕಾರಣವಾಗಬಹುದು.

## ಲಿಂಕನ್ ಶಿಕ್ಷಕನಿಗೆ ಹೇಳಿದ್ದು

ಅಬ್ರಹಾಂ ಲಿಂಕನ್ ತನ್ನ ಮಗ ಓದುತ್ತಿದ್ದ ಶಾಲೆಯ ಮುಖ್ಯೋಪಾಧ್ಯಾಯನಿಗೆ ಬರೆದ ಪತ್ರದಲ್ಲಿ ಹೇಗೆ ಗ್ರಹಿಕೆ ಎಂಬುದು ಪುಸ್ತಕದಾಚೆಗೆ ವಿಸ್ತರಿಸಬೇಕೆಂಬುದನ್ನು ವಿವರಿಸುತ್ತಾನೆ. ತನ್ನತನದಲ್ಲಿ ನಂಬಿಕೆ ಇಟ್ಟು ಬಾಜಾಬಜಂತ್ರಿಯಿಂದ ದೂರವಿರಬೇಕಾದುದನ್ನು ಶಾಲಾಶಿಕ್ಷಣ ಕಲಿಸಬೇಕೆಂದು ಬಯಸುತ್ತಾನೆ. ಇದು ಶಿಕ್ಷಣದ ಬಹಳ ಮುಖ್ಯ ಉದ್ದೇಶ. ಇದನ್ನು ಪ್ರೊ. ಬಿ.ವಿ. ವೀರಭದ್ರಪ್ಪನವರು ಕನ್ನಡಕ್ಕೆ ಹೀಗೆ ಅನುವಾದಮಾಡಿದ್ದಾರೆ:

ನಾ ಬಲ್ಲೆ
ಎಲ್ಲರೂ ನ್ಯಾಯಪರರಲ್ಲ
ಎಲ್ಲರೂ ಸತ್ಯವಂತರಲ್ಲ ಎಂಬುದನು.
ಆದರೆ ಪ್ರತಿಯೊಬ್ಬ ಮುಟ್ಠಾಳನಿಗೆ ಪ್ರತಿಯಾಗಿ
ಒಬ್ಬ ಧೀರೋದಾತ್ತ,
ಪ್ರತಿಯೊಬ್ಬ ಸ್ವಾರ್ಥಿ ರಾಜಕಾರಣಿಗೆ ಬದಲು
ಒಬ್ಬ ನಿಷ್ಠಾವಂತ ನಾಯಕ,
ಪ್ರತಿಯೊಬ್ಬ ಶತ್ರುವಿಗೆ ಬದಲು
ಒಬ್ಬ ಸನ್ಮಿತ್ರನಿರುವನೆಂಬುದನು ಕಲಿಸು
ನಿನಗೆ ಸಾಧ್ಯವಾದರೆ ಕಲಿಸು.
ಗಳಿಸಿದ ಒಂದು ಡಾಲರು
ಸಿಕ್ಕ ಐದಕ್ಕಿಂತ ಹೆಚ್ಚು ಬೆಲೆಯುಳ್ಳದೆಂಬುದನು
ಕಲಿಸು ಸೋಲುವುದನು ಕಲಿಯಲು
ಮತ್ತು ಗೆಲುವಿನಲ್ಲಿ ಹರ್ಷಿಸುವುದನು
ಪುಸ್ತಕಗಳ ಅದ್ಭುತಗಳನ್ನು ಅವನಿಗೆ ಕಲಿಸು.
ಆದರೆ ಆಕಾಶದ ಹಕ್ಕಿಗಳನ್ನು,
ಹಾರಾಡುವ ದುಂಬಿಗಳನ್ನು ಮತ್ತು
ಹಸಿರು ಮಲೆಯ ಹೂಗಳನ್ನು ಕುರಿತು
ಧ್ಯಾನಿಸಲು ಅವನಿಗೆ ಬಿಡುವು ಮಾಡಿಕೊಡು
ಶಾಲೆಯಲಿ ವಂಚಿಸುವುದಕ್ಕಿಂತ
ಫೇಲಾಗುವುದು ಹೆಚ್ಚು ಗೌರವವೆಂಬುದನು ಕಲಿಸು
ಎಲ್ಲರೂ ತಪ್ಪೆಂದಾಗ
ತನ್ನ ವಿಚಾರಗಳಲಿ ಅವನು ನಂಬಿಕೆ ಉಳಿಸಿಕೊಳ್ಳಲು ಕಲಿಸು

ನಯದ ಜನರಲಿ ವಿನಯದಲಿ ಮತ್ತು
ಒರಟರಲಿ ಒರಟುತನದಿ ನಡೆಯುವುದನು ಕಲಿಸು
ಬೆವರು ಬುದ್ಧಿಗಳನು
ಹೆಚ್ಚು ಬೆಲೆ ತೆರುವವನಿಗೆ ಮಾರುವುದನು
ಆದರೆ ತನ್ನ ಹೃದಯ ಮತ್ತು ಆತ್ಮಕ್ಕೆ
ಬೆಲೆಯ ಚೀಟಿಯನು
ಎಂದಿಗೂ ಅಂಟಿಸದಿರುವುದನು ಕಲಿಸು
ಬೇಸರಗೊಂಡಾಗ ಗುನುವುದನು
ಕಣ್ಣೀರಿನಲಿ ಅವಮಾನವಿಲ್ಲೆಂಬುದನು ಮತ್ತು
ತನ್ನಲ್ಲಿ ತಾನು ವಿಶ್ವಾಸ ಹೊಂದುವುದನು ಕಲಿಸು
ಆಗಲೇ ಅವನಿಗೆ ಮಾನವೀಯತೆಯಲಿ
ದಿವ್ಯ ವಿಶ್ವಾಸ ಮೂಡುವುದು

ಶಿಕ್ಷಣ ಕೇವಲ ಅಕ್ಷರಗಳ ಮೂಲಕ ಕಲಿಯುವ ಪ್ರಕ್ರಿಯೆಯಲ್ಲ. ಹಾಗೆ ಮಾತ್ರ ಕಲಿತವರು ನಿಜವಾಗಿಯೂ ಏನನ್ನೂ ಕಲಿತಿಲ್ಲ. ಕೌಶಲಗಳನ್ನು ಕಲಿಯುತ್ತ ಸರಳವಾಗಿರಬಲ್ಲ, ಗಳಿಸಿದ ಆತ್ಮವಿಶ್ವಾಸದಿಂದ ಇತರರ ಶೋಷಣೆ ಮಾಡದೆ ಬದುಕಬಲ್ಲ, ವಿಚಾರಶೀಲತೆಯ ಜೊತೆಗೆ ಸೌಂದರ್ಯವನ್ನು ಆಸ್ವಾದಿಸಬಲ್ಲ ಹೃದಯವಂತಿಕೆಯೆ ಶಿಕ್ಷಣ. ಆದರೆ ಇಂದಿನ ಶಾಲಾ ಶಿಕ್ಷಣ ಈ ಅಂಶಗಳನ್ನು ಶಿಕ್ಷಣಾರ್ಹ ವಿಷಯ ಎಂದು ಪರಿಗಣಿಸುತ್ತದೆಯೆ? ಬದಲಾಗಿ 'ಈ ಬಗೆಯ ಆದರ್ಶಗಳು ಕಂಪ್ಯೂಟರ್ ಯುಗದ ಬದುಕಿಗೆ ಎಳ್ಳಷ್ಟೂ ಸಂಬಂಧಪಡುವುದಿಲ್ಲ. ಮನುಷ್ಯಸಂತೋಷದ ನೆಲೆಗಳು ಯಾವಾಗಲೂ ವಸ್ತು ಪರಿಕರಗಳನ್ನು ಪಡೆಯುವುದರಿಂದ ಮಾತ್ರ ಸಾಧ್ಯ, ಅದನ್ನು ತ್ಯಜಿಸುವುದರಿಂದಲ್ಲ' ಎಂಬ ಗಟ್ಟಿಗೊಂಡ ನಂಬಿಕೆಯ ಮೇಲೆ ರೂಪಿತವಾಗಿದೆ. ಈ ನಂಬಿಕೆಯ ದುಷ್ಪರಿಣಾಮಗಳು ಪರಿಸರವನ್ನೂ ಮನುಷ್ಯ ಸಂಬಂಧಗಳನ್ನು ದುರಂತಮಯವಾಗಿ ಮಾಡಿರುವುದು ಅನುಭವಕ್ಕೆ ಬರುತ್ತಿದ್ದರೂ ಈ ಸಂವೇದನೆಗಳಿಗೆ ಸ್ಪಂದಿಸದೆ ಸಮೂಹದ ಮನಸ್ಸನ್ನು ಸ್ನಿಗ್ಧಗೊಳಿಸುವಲ್ಲಿ ನಮ್ಮ ಇಂದಿನ ಜಾಗತೀಕರಣ ಹಾಗೂ ಶಿಕ್ಷಣ ಯಶಸ್ವಿಯಾಗಿವೆ. ವಾಸ್ತವ ಸತ್ಯದಿಂದ ದೂರಾಗುವ ಮೂಲಕ ಮಾತ್ರ ಹೆಚ್ಚು ಬೆಲೆ ಗಿಟ್ಟಿಸಬಹುದಾದ ಇಂದಿನ ದಿನಗಳಲ್ಲಿ ಶಿಕ್ಷಣವೂ ಇದೇ ಮಾರುಕಟ್ಟೆಯ ಸಮೀಕರಣವನ್ನು ಬಳಸುತ್ತಿದೆ. ಹಾಗಾಗಿ ಇಂದಿನ ಶಿಕ್ಷಣವನ್ನು ಒಂದೇ ಮಾತಿನಲ್ಲಿ ವ್ಯಾಖ್ಯಾನಿಸಬೇಕೆಂದರೆ "ವಾಸ್ತವಕ್ಕೆ ಸ್ಪಂದಿಸದ ಮನಸ್ಸುಗಳನ್ನು ತಯಾರಿಸುವ ಪದ್ಧತಿ" ಎಂದು ಹೇಳಬೇಕಾಗುತ್ತದೆ.

## ಪ್ರತಿಭೆ, ಶಿಕ್ಷಣ ಮತ್ತು ಹಣ

ಅದ್ವಿತೀಯ ಪ್ರತಿಬಯುಳ್ಳವರು ಎಲ್ಲೊ ಕೆಲವರು. ಹಾಗಾಗಿ ಇಂತಹ ಬೆರಳೆಣಿಕೆಯ ಮಕ್ಕಳಿಗಾಗಿ ಅವರ ಪ್ರತಿಭೆಗಳು ಅರಳಲು ಸಹಾಯ ಮಾಡುವಂತೆ ಇಡೀ ಶಿಕ್ಷಣ ರೂಪುಗೊಳ್ಳುವುದು ಊಹಿಸಲಾರದ ಸಂಗತಿ. ಭೀಮ್‌ಸೇನ ಜೋಶಿಯವರಾಗಲೀ, ಗಣಿತಜ್ಞ ರಾಮಾನುಜಂ ಆಗಲಿ, ಶಿವರಾಮ ಕಾರಂತರಾಗಲೀ ಅಥವಾ ಸುಬ್ಬುಲಕ್ಷ್ಮಿಯಂಥವರಾಗಲಿ ಶಾಲೆಯಿಂದ ದೂರವಾಗಿ ಉಳಿದದ್ದರಿಂದಲೇ ಅವರು ಅದ್ವಿತೀಯರಾದರೆಂದೂ ಆದ್ದರಿಂದ ಇಡೀ ಶಿಕ್ಷಣ ವ್ಯವಸ್ಥೆ ನಿರುಪಯುಕ್ತವೆಂದೂ ಹೇಳಲಾಗದು. ಶಾಲೆಗಳು ಕೆಲಸ ಮಾಡಬೇಕಾದದ್ದು ಬಹುಸಂಖ್ಯಾತರಾದ ಸರಾಸರಿ ಪ್ರತಿಭೆಗಳು ಅರಳಲು. ಇವರು ನೆಮ್ಮದಿಯ ಜೀವನ ನಡೆಸಲು ಅಗತ್ಯವಾದ ಶಿಕ್ಷಣವನ್ನು ನಮ್ಮ ಶಿಕ್ಷಣ ವ್ಯವಸ್ಥೆ ಕೊಡಬೇಕು. ನಮ್ಮ ಶಾಲೆಗಳು ಕೆಲವು ಮಕ್ಕಳಲ್ಲಾದರೂ ಇರಬಹುದಾದ ಅಸಾಧಾರಣ ಪ್ರತಿಭೆಗಳನ್ನು ಗುರುತಿಸುವ, ಪುರಸ್ಕರಿಸುವ ಪರಿಪಾಟವನ್ನು ರೂಢಿಸಿಕೊಳ್ಳಬೇಕು. ನಮ್ಮ ಶಾಲೆಗಳು ಸದಾಕಾಲವೂ ಒಂದು ಸರಾಸರಿಗೆ ಸೀಮಿತವಾಗಿ ಕಾರ್ಯ ನಿರ್ವಹಿಸುವುದರಿಂದ ಅಸಾಧಾರಣ ಪ್ರತಿಭೆಗಳನ್ನು ಗುರುತಿಸದಾಗಿದೆ. ಹಾಗಾಗಿ ಈ ಪ್ರತಿಭೆಗಳು ಹೊರಗುಳಿಯಬೇಕಾದದ್ದು ಅನಿವಾರ್ಯ.

ನಮ್ಮ ಶಾಲೆಗಳು ಇಂದಿನ ದಿನಗಳಲ್ಲಿ ರೂಪಿಸುವ ಪ್ರತಿಭೆಗಳು ಯಾವುವು? ನಮ್ಮ ಇಂದಿನ ಸಮಾಜ ಯಾವುದನ್ನು ಯಶಸ್ಸು ಎಂದು ಭಾವಿಸುತ್ತದೆಯೋ ಅದನ್ನು ಹೊಂದಬಲ್ಲ ಸಾಮರ್ಥ್ಯಗಳನ್ನು ಕೊಡುವುದೇ ಶಿಕ್ಷಣದ ಉದ್ದೇಶವಾಗಿದೆ. ಅದರಲ್ಲೂ ಮುಖ್ಯವಾಗಿ ಹಣಗಳಿಕೆಯ ಸಾಮರ್ಥ್ಯವೇ ಪ್ರಮುಖ ಪ್ರತಿಭೆಯಾಗಿದೆ. ಇದಕ್ಕಾಗಿ ನಮ್ಮ ಶಿಕ್ಷಣ ಕ್ಷೇತ್ರ ಎಂದರೆ ಶಾಲಾಕಾಲೇಜುಗಳು ತಾವೇ ತಮ್ಮ ಹಣಗಳಿಕೆಯ ಸಾಮರ್ಥ್ಯವನ್ನು ಪ್ರಾಯೋಗಿಕವಾಗಿ ಸಿದ್ಧಪಡಿಸಿ ತೋರಿಸಿಕೊಳ್ಳಬೇಕಾಗಿದೆ. ಒಂದು ಬಡಶಾಲೆ ತಾನೇ ಬಡವಾಗಿರುವಾಗ ಮಕ್ಕಳಿಗೆ ಹಣ ಗಳಿಸುವ ಸಾಮರ್ಥ್ಯವನ್ನು ಕೊಡುತ್ತದೆಂದು ನಿರೀಕ್ಷಿಸಲಾಗುವುದಿಲ್ಲ. ಹಣ ಗಳಿಸಲು ಭಾರತದಂತಹ ಬಡರಾಷ್ಟ್ರದಲ್ಲಿ ಶೋಷಣೆ ಬಿಟ್ಟರೆ ಅನ್ಯಮಾರ್ಗವಿಲ್ಲ. ಹಾಗಾಗಿ ಈ ಶಾಲೆಗಳು ಸ್ವಯಂ ತಾವೇ ಶೋಷಣೆಯ ದೊಡ್ಡ ಕೇಂದ್ರಗಳಾಗಬೇಕು. ಬಲಾಢ್ಯರು ಮಾತ್ರ ಬೆಳೆಯಬಹುದಾದ ವಾತಾವರಣವನ್ನು ಸೃಷ್ಟಿಸಬೇಕು. ಹಣಬಲ ಇರುವ, ಶೋಷಣೆಯನ್ನು ಯಾವ ಅಪರಾಧಿಪ್ರಜ್ಞೆಯೂ ಇಲ್ಲದೆ ಜೀವನದ ಮುಖ್ಯ ಉದ್ದೇಶವನ್ನಾಗಿ ರೂಢಿಸಿಕೊಳ್ಳಬಲ್ಲ ಮಕ್ಕಳು ಇಲ್ಲಿ ಬೆಳೆಯಬೇಕು. ಇದರ ಮುಂದುವರಿದ ಭಾಗ ಎಂದರೆ, ಸಮಾಜದಲ್ಲಿ ಬಡವ–ಬಲ್ಲಿದ ತಾರತಮ್ಯ ಹೆಚ್ಚಾದಷ್ಟೂ ಈ ಸಾಹುಕಾರರು ತಮ್ಮ ಯಶಸ್ಸಿನ ರುಚಿಯನ್ನು ಹೆಚ್ಚು ಅನುಭವಿಸಬಹುದು, ಹೆಮ್ಮೆಪಡಬಹುದು. ಹಾಗಾಗಿ ಇಂತಹ ಶಾಲೆ ಮೂಲತಃ ತಾನೇ ಈ ಬಗೆಯ ಯಶಸ್ಸನ್ನು ಬಯಸುವ ಮೂಲಕ ತನ್ನ ಶಿಕ್ಷಣಾರ್ಥಿಗಳಿಗೆ ಈ ಯಶಸ್ಸನ್ನು ಕೊಡುವ ಅತ್ಯಂತ ಸುಲಭ ಮಾರ್ಗವನ್ನು ಹುಡುಕುತ್ತದೆ. ಎಂದರೆ ತಾನು

ಆಯ್ಕೆ ಮಾಡುವ ವಿದ್ಯಾರ್ಥಿಗಳು ಮೊದಲಿಗೆ ಶಾಲೆಯ ಯಶಸ್ಸನ್ನು ಪೋಷಿಸುವ ಹಣವಂತರಾಗಿರಬೇಕು ಮತ್ತು ಎರಡನೆಯದಾಗಿ ಬುದ್ಧಿವಂತರಾಗಿದ್ದು ಅಧ್ಯಾಪಕರ ಕಡಿಮೆ ಶ್ರಮದಲ್ಲಿ ಹೆಚ್ಚು ಅಂಕ ಗಳಿಸಿ ಶಾಲೆಗೆ ಕೀರ್ತಿ ತರಬೇಕು ಎಂದು ಅಪೇಕ್ಷಿಸುತ್ತದೆ. ಇಂತಹ ಒಂದು ಹೆಗ್ಗುರಿಯನ್ನು ಹಾಕಿಕೊಡುವ ಶಾಲೆಗಳೇ ನಮ್ಮ ನಡುವಿನ ಪ್ರತಿಷ್ಠಿತ ವರ್ಗದ 'ಅಂತಾರಾಷ್ಟ್ರೀಯ ಖ್ಯಾತಿ'ಯ ಶಾಲೆಗಳು.

## ಶಿಕ್ಷಣದ ಪ್ರಗತಿ ಮತ್ತು ಲಿಂಗಾನುಪಾತ

**ಓದಿಸುವಣ್ಣಗಳೆನ್ನ ಮಾತಾಡ ಕಲಿಸಿದರಲ್ಲದೆ**
**ಮನಕ್ಕೆ ಮಾತಾಡ ಕಲಿಸಲಿಲ್ಲವಯ್ಯ**
**ಧನಕ್ಕೆ ಮುನಿವರಲ್ಲದೆ, ಎನ್ನ ಮನಕ್ಕೆ ಮುನಿವರಿಲ್ಲಯ್ಯ**
**ಧನಕ್ಕೆ ಮುನಿವರಿಗೆ ಮುನಿದು ಮನಕ್ಕೆ ಮುನಿದ**
**ಕೂಡಲಸಂಗಮದೇವ, ಮಡಿವಾಳ ಮಾಚಯ್ಯನು**

ಈ ವಚನದಲ್ಲಿ ಧನಕ್ಕೆ ಮುನಿಯುವುದಕ್ಕೂ ಮನಕ್ಕೆ ಮುನಿಯುವುದಕ್ಕೂ ನಡುವಿನ ಅಂತರವನ್ನು ತೋರಲಾಗಿದೆ. ಜಾಗತೀಕರಣ ಪ್ರಣೀತ ಶಿಕ್ಷಣ ಧನಕ್ಕೆ ಮುನಿವುದಲ್ಲದೆ ಮನಕ್ಕೆ ಮುನಿಯುವುದಿಲ್ಲ. ಮನಕ್ಕೆ ಶಿಕ್ಷಣ ಕೊಡುವುದಕ್ಕಿಂತ ಜಾಣ ಮಾತುಗಳನ್ನಾಡುವುದನ್ನು ಕಲಿಸುವುದು ಸುಲಭ. ಸಾಕ್ಷರತೆ ಹೆಚ್ಚಾದಂತೆಲ್ಲ ನಮ್ಮ ಸಾಕ್ಷಿಪ್ರಜ್ಞೆಯೂ ಹೆಚ್ಚಾಗುತ್ತದೆ, ಅದ್ದರಿಂದ ಸಮಾಜದಲ್ಲಿ ಶೋಷಣೆ ಅಸಮಾನತೆಗಳು ಕಡಿಮೆಯಾಗುತ್ತವೆ, ದುರ್ಬಲರಿಗೂ ಬದುಕುವ ಅವಕಾಶಗಳು ಹೆಚ್ಚಾಗುತ್ತವೆ ಎಂದು ಭಾವಿಸುತ್ತೇವೆ. ಹಾಗಾಗಿ ಲಿಂಗತಾರತಮ್ಯದ ಸಮಾಜದಲ್ಲಿ ಸಾಕ್ಷರತೆಯ ಹೆಚ್ಚಳವು ಮಹಿಳೆಯರಿಗೆ ಬದುಕುವ ಸಮಾನ ಹಕ್ಕುಗಳನ್ನು ನೀಡಿ ಸಮತೋಲನ ಸಾಧಿಸುತ್ತದೆ ಎಂದು ನಿರೀಕ್ಷಿಸುತ್ತೇವೆ. ಪ್ರಪಂಚದ ಸರಾಸರಿ ಲಿಂಗಾನುಪಾತ ೧೦೦೦ ಪುರುಷರಿಗೆ ೯೯೦ ಮಹಿಳೆಯರು. ಆದರೆ ನಮ್ಮ ದೇಶದ ಲಿಂಗಾನುಪಾತವನ್ನು ಗಮನಿಸಿದರೆ ಗಾಬರಿಯಾಗುತ್ತದೆ. ೧೯೦೧ರಲ್ಲಿ ೧೦೦೦ ಪುರುಷರಿಗೆ ೯೭೨ ಮಹಿಳೆಯರಿದ್ದರು. ಆಗಿನ ನಮ್ಮ ಸಾಕ್ಷರತಾ ಪ್ರಮಾಣ ಶೇಕಡ ೫.೩೯. ಇಂದು ೨೦೧೧ರಲ್ಲಿ ನಮ್ಮ ಸಾಕ್ಷರತಾ ಪ್ರಮಾಣ ೭೪.೦೪ಕ್ಕೆ ಏರಿದೆ. ದೇಶದಲ್ಲಿ ೬೩ ಕೋಟಿ ಪುರುಷರಿದ್ದರೆ ೫೮ ಕೋಟಿ ಮಹಿಳೆಯರಿದ್ದಾರೆ. ಆರು ವರ್ಷದ ಒಳಗಿನ ಮಕ್ಕಳ ಲಿಂಗಾನುಪಾತ ತೆಗೆದುಕೊಂಡರೆ ೨೦೦೧ರ ಜನಗಣತಿಯಲ್ಲಿ ೧೦೦೦ ಗಂಡುಮಕ್ಕಳಿಗೆ ೯೨೭ ಹೆಣ್ಣು ಮಕ್ಕಳಿದ್ದವು. ಆದರೆ ೨೦೧೧ರ ಜನಗಣತಿಯಂತೆ ೧೦೦೦ ಗಂಡು ಮಕ್ಕಳಿಗೆ ೯೧೪ ಹೆಣ್ಣು ಮಕ್ಕಳ ಹಂತಕ್ಕೆ ಕುಸಿದಿದೆ. ಸ್ವಾತಂತ್ರ್ಯಾನಂತರದ ಭಾರತದಲ್ಲಿ ನಮ್ಮ

ದೇಶದ ಐದು ಕೋಟಿ ಹೆಣ್ಣು ಮಕ್ಕಳು ಕಾಣೆಯಾಗಿದ್ದಾರೆ. ಇದಕ್ಕೆ ನಮ್ಮ ನಾಗರಿಕ ಸಮಾಜ ಏನು ವಿವರಣೆ ನೀಡುತ್ತದೆ? ಅಭಿವೃದ್ಧಿ ಹೆಚ್ಚಾಗಿರುವುದನ್ನು ಸಾಕ್ಷರತೆಯ ಹೆಚ್ಚಳಕ್ಕೆ ಸಮನಾಗಿಸಿ ನಾವು ಬಿಂಬಿಸುತ್ತಿದ್ದೇವೆ. ಆದರೆ ಈ ಅಂಕಿ ಅಂಶಗಳ ಹಿನ್ನಲೆಯಲ್ಲಿ ಶಿಕ್ಷಣ ಮತ್ತು ಸಾಕ್ಷರತೆ ನಮ್ಮ ಬದುಕನ್ನು ಹೇಗೆ ಕಟ್ಟಿಕೊಡುತ್ತಿದೆ ಎಂಬ ಕುರಿತು ಮರುಚಿಂತನೆ ಅಗತ್ಯ.

# ೫. ಶಿಕ್ಷಣದ ಆದರ್ಶಗಳ ಸಾಧ್ಯತೆಗಳು ಮತ್ತು ಮಿತಿಗಳು

## ತತ್ತ್ವ-ಅನುಷ್ಠಾನಗಳ ನಡುವಿನ ಕಂದರ

ಶಿಕ್ಷಣದ ತಾತ್ತ್ವಿಕ ನಿರೀಕ್ಷೆಗಳಿಗೂ ಅನುಷ್ಠಾನಕ್ಕೂ ನಡುವೆ ಇರುವ ದೊಡ್ಡ ಕಂದಕದ ಬಗ್ಗೆ ಮತ್ತಷ್ಟು ಚಿಂತನೆ ಅಗತ್ಯ. ಅನುಷ್ಠಾನ ಶಿಕ್ಷಣ ಬಹಳ ಕಾಲದಿಂದಲೂ ತನ್ನ ತಾತ್ತ್ವಿಕ ನೆಲೆಗಳಿಂದ ದೂರವಾಗಿ ಅಂತರವನ್ನು ಕಾಯ್ದುಕೊಂಡೇ ಬಂದಿದೆ. ಹಾಗೆ ನೋಡಿದರೆ ಎತ್ತರದ ಆದರ್ಶಗಳನ್ನು ಪ್ರತಿಪಾದಿಸುವ ಯಾವುದೇ ಅಧ್ಯಯನದ ಶಾಖೆ ತನ್ನ ತಾತ್ತ್ವಿಕ ನೆಲೆಗಳಿಂದ ಸಂಬಂಧಗಳನ್ನು ಕಳಚಿಕೊಂಡು 'ಪ್ರಾಕ್ಟಿಕಲ್' ಎಂದು ಯಾವುದನ್ನು ಕರೆಯುತ್ತೇವೆಯೋ ಆ ಸ್ತರಕ್ಕೆ ಇಳಿದುಬಿಡುತ್ತದೆ. ಹೀಗೆ ಆದರ್ಶಗಳು ಅನುಷ್ಠಾನ ಸಾಧ್ಯವಲ್ಲದ ತತ್ತ್ವಗಳನ್ನೇ ಪ್ರಧಾನವಾಗಿ ಒಳಗೊಂಡಿದ್ದರೆ ಆಗ ಅನುಷ್ಠಾನ ಸಾಧ್ಯವಾದದ್ದು, ಎಂದರೆ ಪ್ರಾಕ್ಟಿಕಲ್ ಆಗಿರುವುದು ಯಾವಾಗಲೂ ತನ್ನ ತಾತ್ತ್ವಿಕ ನೆಲೆಗಳಿಗೆ ವಿಮುಖವಾಗಿ ಚಲಿಸಬೇಕಾದ್ದು ಅನಿವಾರ್ಯ.

ಹೀಗೆ ಶಿಕ್ಷಣದಂತಹ ಒಂದು ಶಾಖೆ ತನ್ನೆಲ್ಲಾ ಆದರ್ಶಗಳನ್ನು ಕೈಗೆಟುಕದ ಎತ್ತರದಲ್ಲಿ ಸ್ಥಾಪಿಸಿಬಿಟ್ಟರೆ ಪ್ರಾಯೋಗಿಕ ಶಿಕ್ಷಣ ಈ ಆದರ್ಶಗಳಿಂದ ದೂರ ನಿಲ್ಲಬೇಕಾದ್ದು ಅನಿವಾರ್ಯವಾಗುತ್ತದೆ. ಹಾಗಾಗಿ ನಾವು ಶಿಕ್ಷಣಕ್ಕೆ ಅನುಷ್ಠಾನಸಾಧ್ಯ ಆದರ್ಶಗಳನ್ನು ಗುರುತಿಸಬೇಕು. ಇದರ ಅರ್ಥ ಕೇವಲ ತಾತ್ವಿಕ ನೆಲೆಗಳಿಗೆ ಸೀಮಿತವಾಗಬಹುದಾದ ಶಿಕ್ಷಣದ ಆದರ್ಶಗಳ ಹುಡುಕಾಟವನ್ನು ಎಲ್ಲರೂ ಈ ಕೂಡಲೆ ನಿಲ್ಲಿಸಬೇಕು ಎಂದೇನೂ ಅಲ್ಲ. ವಾಸ್ತವ ನೆಲೆಗಳಿಗೆ ನೇರವಾಗಿ ಸಂಬಂಧಪಡುವ ಶಿಕ್ಷಣದ ಆದರ್ಶಗಳನ್ನು ಕ್ಷೇತ್ರದಲ್ಲಿ ದುಡಿಯುತ್ತಿರುವ ನಾವು ಕೆಲವರಾದರೂ ಸ್ಫುಟವಾಗಿ ಗುರುತಿಸಬೇಕು. ವೃತ್ತಿನಿರತ ಅಧ್ಯಾಪಕರಿಗೆ ಅಥವಾ ಭಾವೀ ಶಿಕ್ಷಕರಿಗೆ ಈ ಅನುಷ್ಠಾನಸಾಧ್ಯ ಶಿಕ್ಷಣದ ತಾತ್ವಿಕ ಅಂಶಗಳನ್ನು ಪರಿಚಯ ಮಾಡಿಕೊಡಬೇಕು. ಸ್ವಾಮಿ ವಿವೇಕಾನಂದರ, ರವೀಂದ್ರನಾಥ ಟ್ಯಾಗೂರ್ ಹಾಗೂ ಗಾಂಧೀಜಿಯವರ ಶಿಕ್ಷಣದ ಆಶಯಗಳು ಇಂದು ನಮ್ಮ ಕಣ್ಣೆದುರಿಗೆ ಇವೆ.

ಸ್ವಾಮಿ ವಿವೇಕಾನಂದರ ಈ ಹೇಳಿಕೆಗಳನ್ನು ಗಮನಿಸಿ.

೧. ಶಿಕ್ಷಣ ಎಂಬುದು ಮನುಷ್ಯನಲ್ಲಿ ಈಗಾಗಲೇ ಅಂತರ್ಗತವಾಗಿರುವ ಪರಿಪೂರ್ಣತೆಯ ಅಭಿವ್ಯಕ್ತಿ. ಆದ್ದರಿಂದ ಅಧ್ಯಾಪಕನ ಏಕಮಾತ್ರ ಕರ್ತವ್ಯವೆಂದರೆ ....... ಈ ದಾರಿಯಲ್ಲಿ ಬರುವ ಎಲ್ಲಾ ಅಡಚಣೆಗಳನ್ನು ತೆಗೆಯುವುದು.

೨. ಶಿಕ್ಷಣ ಎಂಬುದು ಕೊನೆಯಿಲ್ಲದ ಮಾಹಿತಿಯನ್ನು ಮೆದುಳಿನಲ್ಲಿ ತುಂಬುವುದಲ್ಲ. ಈ ಮಾಹಿತಿ ಮೆದುಳಿನಲ್ಲಿ ಕುಳಿತು ಜೀವನಪರ್ಯಂತ ಅರಗದೆ ದೊಂಬಿ ಎಬ್ಬಿಸುತ್ತದೆ; ಜೀವನ ಕಟ್ಟುವ, ಮಾನವನನ್ನು ನಿರ್ಮಾಣ ಮಾಡುವ, ಶೀಲವನ್ನು ಕೊಡುವ ಭಾವನೆಗಳನ್ನು ಅಂತರ್ಗತ ಮಾಡಿಕೊಳ್ಳಲು ನೆರವಾಗುವ ತರಭೇತಿ ನಮಗೆ ಬೇಕು.

೩. ಅನ್ಯರ ವಿಚಾರಗಳನ್ನು ವಿದೇಶಿ ಭಾಷೆಯಲ್ಲಿ ಗಟ್ಟಿಮಾಡಿ ಮೆದುಳಿಗೆ ತುಂಬಿಕೊಂಡು ಕೆಲವು ವಿಶ್ವವಿದ್ಯಾನಿಲಯದ ಡಿಗ್ರಿಗಳನ್ನು ಪಡೆದುಕೊಂಡಾಕ್ಷಣ ನಿಮ್ಮನ್ನು ನೀವೇ ವಿದ್ಯಾವಂತರು ಎಂದು ಭಾವಿಸುವಿರೇನು? ಇದು ಶಿಕ್ಷಣವೇ? ಇದರ ಗುರಿ ಗುಮಾಸ್ತ ಅಥವಾ ವಕೀಲನಾಗುವುದಲ್ಲದೆ ಮತ್ತೇನಿದೆ? ಹೆಚ್ಚೆಂದರೆ ಡೆಪ್ಯೂಟಿ ಮ್ಯಾಜಿಸ್ಟ್ರೇಟ್ ಆಗುವುದು. ಎಂದರೆ ಮತ್ತೊಂದು ಬಗೆಯ ಗುಮಾಸ್ತನಾಗುವುದು. ಇದರಿಂದ ನಿಮಗಾಗಲೀ ನಿಮ್ಮ ದೇಶಕ್ಕಾಗಲೀ ಆದ ಪ್ರಯೋಜನವೇನು?

೪. ನಾವು ಯಾವುದನ್ನು ಮನುಷ್ಯ ಅರಿತಿದ್ದಾನೆ ಎಂದು ಹೇಳುತ್ತೇವೋ ಅದನ್ನು ಸ್ಪಷ್ಟವಾದ ಮನಃಶಾಸ್ತ್ರೀಯ ಪರಿಭಾಷೆಯಲ್ಲಿ ಹೇಳುವುದಾದರೆ ಅದು ಅವನು 'ಕಂಡುಕೊಂಡದ್ದು' ಅಥವಾ ಈಗಾಗಲೇ ಇರುವ ಜ್ಞಾನದ ಮೇಲೆ ಇದ್ದ ಹೊದಿಕೆಯನ್ನು ತೆರೆದದ್ದು. ಯಾವುದನ್ನು ಮನುಷ್ಯ ಕಲಿತ ಎಂದು ಹೇಳುತ್ತೇವೆಯೋ ಅವೆಲ್ಲ ಅವನು ತನ್ನೊಳಗೇ ಅಡಗಿದ್ದ ಜ್ಞಾನವನ್ನು ಮುಚ್ಚಿದ್ದ ತೆರೆಯನ್ನು ಸರಿಸುವುದರ ಮೂಲಕ ಕಂಡುಹಿಡಿದಿದ್ದು; ಯಾವ ಆತ್ಮ ಅನನ್ಯ ಜ್ಞಾನದ ಗಣಿಯೊ ಅದರ ಮೇಲಿದ್ದ ಹೊದಿಕೆಯನ್ನು ತೆರೆಯುವುದರ ಮೂಲಕ ಕಂಡುಹಿಡಿದದ್ದು.

ಶಿಕ್ಷಣ ಕುರಿತು ಈ ಹೇಳಿಕೆಗಳಲ್ಲಿನ ಸಿದ್ಧಾಂತ ಮತ್ತು ವಾಸ್ತವಿಕ ನೆಲೆಗಳಲ್ಲಿ ಅವುಗಳನ್ನು ಅನ್ವಯಿಸುವ ವಿಧಾನ – ಇವುಗಳನ್ನು ಕುರಿತು ಚರ್ಚಿಸಬೇಕು. 'ಜೀವನವನ್ನು ಕಟ್ಟುವ, ಮಾನವ ನಿರ್ಮಾಣ ಮಾಡುವ, ಶೀಲವನ್ನು ಕೊಡುವ' ಶಿಕ್ಷಣ ಎಂದು ಸ್ವಾಮಿ ವಿವೇಕಾನಂದರು ಯಾವುದನ್ನು ಹೇಳುತ್ತಾರೆ? ಅದನ್ನು ಕೊಡುವ ಬಗೆ ಹೇಗೆ? ಇದರ ಬಗ್ಗೆ ಹೊಸ ಸೈದ್ಧಾಂತಿಕ ಪ್ರತಿಪಾದನೆಗಳ ಬದಲು ಅಧ್ಯಾಪಕನಿಗೆ ನಿರ್ದಿಷ್ಟವಾದ, ತರಗತಿಯ ಸಂವಹನದಲ್ಲಿ ಸಾಧ್ಯವಾಗುವ ಸ್ಪಷ್ಟ ನಿರ್ದೇಶನಗಳನ್ನು ನಾವು ಕೊಡಲು ಸಾಧ್ಯವೆ? ಈ ಸವಾಲುಗಳ ಕುರಿತು ವೈಜ್ಞಾನಿಕವಾಗಿ ನಾವು

ಸಂಶೋಧನೆಗಳನ್ನು ನಡೆಸಿದ್ದೇವೆಯೆ? ಮಕ್ಕಳು ಏನನ್ನು ಕಲಿಯುತ್ತಾರೆ, ಹೇಗೆ ಕಲಿಯುತ್ತಾರೆ ಎಂಬ ಬಗ್ಗೆ ಪಾಶ್ಚಾತ್ಯ ದೇಶಗಳಲ್ಲಿ ಸಾಕಷ್ಟು ಸಂಶೋಧನೆಗಳಾಗಿವೆ. ಇವುಗಳನ್ನು ನಮ್ಮ ಪರಿಸ್ಥಿತಿಗೆ ಅಳವಡಿಸಿಕೊಳ್ಳುವ ಪ್ರಯತ್ನ ಮಾಡಿದ್ದೇವೆಯೆ? ನಾವು ಕೇವಲ ಸಿದ್ಧಾಂತಗಳ ಮೇಲೆ ಸಿದ್ಧಾಂತಗಳನ್ನು ಹೇಳುತ್ತ ಹಿಂದಿನವರು ಹೇಳಿದ ಸಿದ್ಧಾಂತಗಳನ್ನೇ ಅಲ್ಲಿ ಇಲ್ಲಿ ಪ್ರಕಟಿಸುತ್ತ ಮಂತ್ರದಿಂದ ಮಾವಿನಕಾಯಿ ಉದುರುತ್ತದೆ ಎಂಬ ನಂಬಿಕೆಯಲ್ಲಿ ಬದುಕು ಸಾಗಿಸುತ್ತಿದ್ದೇವೆ. ಹಾಗಾಗಿ ಇಂದಿನ ದಿನಗಳಲ್ಲಿ ವಸ್ತುನಿಷ್ಠಸ್ಥಿತಿಯನ್ನು ಅರಿಯಲಾರದ ಎರಡನೇ ದರ್ಜೆಯ 'ನಾಗರಿಕ'ರಿಂದ ಈ ದೇಶ ತುಂಬಿಹೋಗಿದೆ, ಅನೈತಿಕತೆ ತಾಂಡವಾಡುತ್ತಿದೆ. ನೈತಿಕತೆ ಆಧ್ಯಾತ್ಮಿಕತೆಗಳು ನಮ್ಮ ದೇಶದ ಮೂಲ ಬಂಡವಾಳ ಎಂದು ಘೋಷಿಸುವ ನಾವು ಬದಲಾದ ಪರಿಸ್ಥಿತಿಯಲ್ಲಿ ಏಕಾಏಕಿ ವಸ್ತುಲಾಭವನ್ನುಳಿದು ಈ ಬದುಕಿಗೆ ಬೇರಾವ ಅರ್ಥವೂ, ಗುರಿಯೂ ಇಲ್ಲ ಎಂಬಂತೆ ನಡೆದುಕೊಳ್ಳುತ್ತಿದ್ದೇವೆ. ಹಾಗೆ ನೋಡಿದರೆ ವಿದೇಶಿಯರು ಜೀವನದ ಕೆಲವು ಆದರ್ಶಗಳಿಗಾದರೂ ಒಂದು ಬದ್ಧತೆಯನ್ನು ತೋರುತ್ತಾರೆ. ಸಮಯಪ್ರಜ್ಞೆಯ ವಿಷಯವೇ ಆಗಿರಬಹುದು ಅಥವಾ ಯಾರಿಗಾದರೂ ಕೊಟ್ಟ ಆಶ್ವಾಸನೆಗೆ ಸಂಬಂಧಪಟ್ಟ ಅನುಷ್ಠಾನ ದೂರವಾದ ವಿಷಯವಾಗಿರಬಹುದು. ನಮ್ಮ ಇಂದಿನ ಅಧಃಪತನಕ್ಕೆ ನಾವು ನಮ್ಮ ಸಿದ್ಧಾಂತಗಳಿಂದ ಕೂಡಿದ ಈ ಶಿಕ್ಷಣವನ್ನೇ ಗುರಿಮಾಡಬೇಕು. ಸಿದ್ಧಾಂತಗಳು ಆಚರಣೆಯ ಮೌಲ್ಯಗಳಾಗಿ ಬದುಕಿಗೆ ಒದಗಿಬರಬೇಕಾದರೆ ಕೆಲವು ಮೂಲಭೂತ ವಿಧಿವಿಧಾನಗಳನ್ನು ಶಿಕ್ಷಣದ ಪ್ರಕ್ರಿಯೆಯಲ್ಲಿ ಗುರುತಿಸಬೇಕು. ಈ ಪ್ರಕ್ರಿಯೆಗಳು ಪುನಃ ಕೇವಲ ಹೊಸ ಸಿದ್ಧಾಂತಗಳಿಗೆ ನಮ್ಮನ್ನು ಕೊಂಡೊಯ್ಯದೆ ಪ್ರಾಯೋಗಿಕ ವಿಧಾನಗಳ ಅನ್ವೇಷಣೆಗೆ ದಾರಿ ಮಾಡಿಕೊಡಬೇಕು. ಮಕ್ಕಳ ಮನಃಶಾಸ್ತ್ರೀಯ ವಿಚಾರಗಳು ಈ ಸಂದರ್ಭದಲ್ಲಿ ಸಿದ್ಧಾಂತಗಳಿಗಿಂತ ಪ್ರಮುಖವಾಗುತ್ತವೆ. ಮಕ್ಕಳ–ಅಧ್ಯಾಪಕರ ನಡುವೆ ನಡೆಯುವ ಸಂವಹನದಲ್ಲಿ ಕೆಲವು ಸ್ಪಷ್ಟವಾದ ರೀತಿ ನೀತಿಗಳನ್ನು ಗುರುತಿಸಿ ಆಚರಣೆಗೆ ತರುವ ಮುಖಾಂತರ ನಾವು ಮಕ್ಕಳಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ತರಲು ಸಾಧ್ಯ. ಪಾಶ್ಚಾತ್ಯ ಸಂಶೋಧಕರು ಈ ಸಂಬಂಧವಾಗಿ ಅನೇಕ ಸಂಶೋಧನೆಗಳನ್ನು ಕೈಗೊಂಡಿದ್ದಾರೆ. ಇವು ಭಾರತೀಯ ಮನಸ್ಸಿಗೆ ಅತ್ಯಂತ ವಾಚ್ಯವಾದ ಪ್ರಕ್ರಿಯೆಗಳಂತೆ ಕಾಣಬಹುದು. ಆದರೂ ಇದು ಬಹಳ ಮುಖ್ಯ ಎಂದು ನಾವು ಪ್ರಾಯೋಗಿಕವಾಗಿ ಕಂಡುಕೊಳ್ಳಬಹುದು.

ಅನುಷ್ಠಾನದ ನೆಲೆಯಲ್ಲಿ ಸ್ವಲ್ಪ ಕಷ್ಟ ಎನ್ನಿಸಬಹುದಾದ ಕೆಲವೊಂದು ಆದರ್ಶಗಳನ್ನು ಪಾಶ್ಚಾತ್ಯರೂ ಪ್ರತಿಪಾದಿಸಿದ್ದಾರೆ. ರೋಸೊ ಮಹಾಶಯನ ಪ್ರಕಾರ ಮಗುವಿಗೆ ಯಾರೂ ಏನನ್ನೂ ಹೇಳಿಕೊಡಬಾರದು. ಅದು ಅದರ ಸ್ವಭಾವದ ಅನ್ವಯ ಪ್ರಕೃತಿಯಿಂದಲೇ ಎಲ್ಲವನ್ನೂ ಕಲಿಯಬೇಕು. ಮೊದಲ ಹಂತದ ಶಿಕ್ಷಣದಲ್ಲಾದರೂ ಮಗು ಪುಸ್ತಕದಿಂದ ದೂರ ಉಳಿಯುವುದು ಮುಖ್ಯ ಎಂಬುದು ರೋಸೋನ ಅಭಿಪ್ರಾಯ. 'ಛಾಂದೋಗ್ಯ

ಉಪನಿಷತ್ತಿ'ನಲ್ಲಿ ಬರುವ ಸತ್ಯಕಾಮ ಜಾಬಾಲಿಯ ಕಥೆಯಲ್ಲೂ ಇಂತಹ ಒಂದು ನಿದರ್ಶನ ಇದೆ. ಸತ್ಯಕಾಮ ಹಸುಗಳನ್ನು ಮೇಯಿಸುತ್ತಾ ಒಬ್ಬನೇ ಪ್ರಕೃತಿಯೊಡನೆ ಒಂದಾಗಿರುತ್ತಾನೆ. ಪ್ರಕೃತಿ ಅವನಿಗೆ ಜಡವೆನಿಸದೆ ಅವನೊಡನೆ ಮಾತನಾಡತೊಡಗುತ್ತದೆ. ತನ್ನ ರಹಸ್ಯವನ್ನೆಲ್ಲಾ ಬಿಟ್ಟುಕೊಡುತ್ತದೆ. ಅವನಿಗೆ ಜ್ಞಾನ ದೊರೆಯುತ್ತದೆ. ಸತ್ಯಕಾಮ ಪ್ರಕೃತಿಯಿಂದಲೇ ಎಲ್ಲವನ್ನೂ ಕಲಿಯುತ್ತಾನೆ.

ಅಸ್ತಿತ್ವವಾದಿಗಳು ಯಾವುದೇ ಸಾರ್ವತ್ರಿಕವಾದ ವಸ್ತುನಿಷ್ಠ ಸತ್ಯವನ್ನಾಗಲಿ, ಅತೀತವನ್ನು ಕುರಿತಾದ ಅಥವಾ ಜ್ಞಾನಮೀಮಾಂಸೆ ಕುರಿತಾದ ಪರಿಕಲ್ಪನೆಗಳನ್ನಾಗಲಿ ಒಪ್ಪುವುದಿಲ್ಲ. ಜೊತೆಗೆ ಸಾರ್ವತ್ರಿಕವಾದ ನೀತಿಯ ಅಸ್ತಿತ್ವವನ್ನು ಒಪ್ಪದೆ ಪ್ರತಿಯೊಬ್ಬನೂ ಒಳಗಿನ ದನಿಯನ್ನು ಆಲಿಸಿ ತಾನೇ ಕಂಡುಕೊಂಡ ನಿಲುವಿಗೆ ಬದ್ಧನಾಗಿರಬೇಕು ಎಂದು ಭಾವಿಸುತ್ತಾರೆ.

ಒಂದು ದೃಷ್ಟಿಯಿಂದ ಪಾಶ್ಚಾತ್ಯ ಚಿಂತನೆಗೂ ಭಾರತೀಯ ಚಿಂತನೆಗೂ ಒಂದು ಮೂಲಭೂತ ವ್ಯತ್ಯಾಸವಿದೆ. ನಮ್ಮ ದೇಸೀ ಚಿಂತನೆಯ ಶಕ್ತಿಯನ್ನು ಉಳಿಸಿಕೊಳ್ಳಲು ನಾವು ಈ ಎರಡರ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಬೇಕು. ಪಾಶ್ಚಾತ್ಯ ಚಿಂತಕರು ಮನುಷ್ಯನ ಆಂತರಿಕ ಸ್ವರೂಪಕ್ಕಿಂತ ಅವನು ಕಲಿಯುವ ಕೌಶಲಗಳ ಕಡೆ ಗಮನವಿಡುತ್ತಾರೆ. ಈ ಕೌಶಲಗಳನ್ನು ಕಲಿಯುವ ಸಂದರ್ಭದಲ್ಲಿ ಮನುಷ್ಯ ಸ್ವಭಾವದಲ್ಲಿ ಬದಲಾವಣೆಗಳಾಗಬೇಕಾಗುತ್ತದೆ. ಇದನ್ನು ಪಾಶ್ಚಾತ್ಯ ಚಿಂತನೆ ಒಪ್ಪುತ್ತದೆ. ಆದರೆ ಈ ಆಂತರಿಕ ಬದಲಾವಣೆಯ ಹಿಂದೆ ಮನುಷ್ಯ ಮೂಲಭೂತವಾಗಿ ಬದಲಾಗಬೇಕು, ಅವನೊಳಗೆ ಅವನನ್ನೆ ಆಳುವ ಶಕ್ತಿಗಳು ಮನೆಮಾಡಿವೆ, ಅವುಗಳನ್ನು ನಿಯಂತ್ರಣಕ್ಕೆ ತಂದು ತಾನೆ ತನ್ನ ಯಜಮಾನನಾಗಬೇಕು ಎಂಬಂತಹ ನಿರೀಕ್ಷೆ ಇಲ್ಲ. 'ಸ್ವಾಮಿ' ಎಂಬ ಪದ ಯಾರು ತನ್ನನ್ನು ತಾನು ಸಂಪೂರ್ಣವಾಗಿ ನಿಯಂತ್ರಣಕ್ಕೆ ತಂದುಕೊಂಡಿದ್ದಾನೋ ಅವನಿಗೆ ಸಲ್ಲುವ ಬಿರುದು. "ಮನೆಯೊಳಗೆ ಮನೆಯೊಡಯ"ನಿರುವುದು ಈ ಅರ್ಥದಲ್ಲಿ. ಪಾಶವೀ ಶಕ್ತಿಗಳ ಹೊರತಾಗಿಯೂ ಯಾವುದೊಂದು ಸ್ವಾಮಿತ್ವದ ಸಾಧ್ಯತೆ ನಮ್ಮೊಳಗಿದೆಯೋ ಅದೇ 'ಮನೆಯೊಡೆತನ'. ಈ ಸಾಧ್ಯತೆಯನ್ನು ಪಾಶ್ಚಾತ್ಯ ಚಿಂತನೆ ಗುರುತಿಸುವುದಿಲ್ಲ, ಬದಲಾಗಿ 'ಸರ್' ಆಗುವ ಸಾಧ್ಯತೆಯನ್ನು ಮಾತ್ರ ಗುರುತಿಸುತ್ತದೆ. 'ಸರ್' ಆಗುವ ಮೂಲಕ ಇತರರಿಗಿಂತ ಎತ್ತರದಲ್ಲಿದ್ದು, ಇತರರನ್ನು ನಿಯಂತ್ರಣದಲ್ಲಿಡುವ ನಿರೀಕ್ಷೆಯೆ ಇಲ್ಲಿ ಹೆಚ್ಚು. ತಾಂತ್ರಿಕ ಪ್ರಗತಿಯನ್ನೇ ಮುಂದುಮಾಡಿ ವಿಸ್ತರಿಸುತ್ತಿರುವ ಜಾಗತೀಕರಣದ ಈ ಸಂದರ್ಭದಲ್ಲಿ 'ಸರ್' ಆಗುವುದೇ ಜೀವನದ ಪರಮಗುರಿಯಾಗಿದೆ. ನನ್ನನ್ನೇ ನಾನು ನಿಯಂತ್ರಣ ಮಾಡಿಕೊಳ್ಳುವುದಕ್ಕೂ, ಸದಾಕಾಲವೂ ಇತರರನ್ನು ನಿಯಂತ್ರಣಮಾಡುವ ಮನಸ್ಸಿನ ಸ್ವಭಾವಕ್ಕೂ ಇರುವ ವ್ಯತ್ಯಾಸವೇ 'ಸ್ವಾಮಿ' ಮತ್ತು 'ಸರ್' ಆಶಯಗಳ ನಡುವೆ ಇರುವ ವ್ಯತ್ಯಾಸ.

ಮನುಷ್ಯ ಸ್ವಭಾವ ಪ್ರಕೃತಿಯೊಡನೆ ಸಾಧಿಸುವ ಏಕತೆಯಿಂದಾಗಿ ವಿಶ್ವಕುಟುಂಬಿಯಾಗುವ ಉದ್ದೇಶವನ್ನು ಮತ್ತು ಇದು ವೈಯಕ್ತಿಕ ನೆಲೆಗಟ್ಟಿನಲ್ಲಿ ಒಂದು ಅನುಭವವಾಗುವುದನ್ನು ಭಾರತೀಯ ಚಿಂತನೆ ಪ್ರತಿಪಾದಿಸುತ್ತದೆ. ವೇದಮಂತ್ರಗಳಲ್ಲಿ ಈ ತಾದಾತ್ಮ್ಯ ಅದ್ಭುತ ಆಯಾಮಗಳಿಗೆ ಚಿಮ್ಮುತ್ತದೆ. ಈ ಪ್ರಕೃತಿ ಆರಾಧನೆಯಲ್ಲಿ ಮನುಷ್ಯ ಸಾಧಿಸಿದ ಹೆಚ್ಚುಗಾರಿಕೆ ಪ್ರಕೃತಿಯನ್ನು ನಿಯಂತ್ರಣ ಮಾಡುವಂತಹದ್ದಲ್ಲ. ಅದಕ್ಕೆ ತಲೆಬಾಗುವ ಒಂದು ಶರಣಾಗತಿಯ ಧನ್ಯತಾ ಭಾವವಿದೆ. ದುರದೃಷ್ಟವೆಂದರೆ ವಿಜ್ಞಾನ ಮತ್ತು ಜಾಗತೀಕರಣದ ತಾಂತ್ರಿಕ ಪ್ರಗತಿ ಪ್ರಕೃತಿಯನ್ನು ನಿಯಂತ್ರಿಸುವ ಅನುಕೂಲ ದೃಷ್ಟಿಕೋನದಿಂದ ಮಾತ್ರ ನೋಡುವ ಒಂದು ವಿನಾಶಕಾರಿ ನಿಲುವನ್ನು ತಂದುಕೊಟ್ಟಿದೆ. "ಯೂರೋಸೆಂಟ್ರಿಕ್" ಚಿಂತನೆಗಳು ಭಾರತೀಯ ವಲಯಗಳಲ್ಲೂ ಹೆಚ್ಚಾಗುತ್ತಿರುವ ಈಗಿನ ಕಾಲದಲ್ಲಿ "ಯೂರೋಕಿಡ್" ಶಾಲೆಗಳು ತಲೆಯೆತ್ತುತ್ತಿವೆ. ಯಾರಿಗೂ ಭಾರತೀಯರಾಗುವ ತವಕವಿಲ್ಲ, ಯೂರೋಪಿಯನ್ನರಾಗುವ ಬಯಕೆ! ಆರ್ಥಿಕವಾಗಿ ಗೆಲ್ಲುವ ಮಾದರಿಗಳನ್ನು ಆರಾಧಿಸುತ್ತ ಅನುಕರಣೆ ಮಾಡುವ ಜಾಡ್ಯ ಜಗತ್ತಿನಾದ್ಯಂತ ಹಬ್ಬುತ್ತಿದೆ. ಪರಿಣಾಮವಾಗಿ ತತ್ವ-ಅನುಷ್ಠಾನಗಳ ನಡುವೆ ಬಿರುಕು ವಿಸ್ತರಿಸುತ್ತಲೇಇದೆ. ಜಾಗತೀಕರಣದ ಅಲೆಯನ್ನು ಎದುರಿಸಿ ನಿಲ್ಲಬಲ್ಲ ಶಕ್ತಿಯನ್ನು ಈ ಯಾವ ತತ್ವಸಿದ್ಧಾಂತಗಳಿಂದಲೂ ಮನುಕುಲ ಪಡೆಯುವ ಸಾಧ್ಯತೆ ಇಲ್ಲವೇನೋ ಎನ್ನಿಸುತ್ತಿದೆ.

### ಸ್ವಯಂ ಕಲಿಕೆ ಮತ್ತು ಮಾರ್ಗದರ್ಶನದಲ್ಲಿ ಕಲಿಕೆ

ಶಿಕ್ಷಣದ ತಾತ್ತ್ವಿಕ ನೆಲೆಗಳು ಆದರ್ಶಪ್ರಾಯವಾಗಿದ್ದು ಸ್ವಯಂಕಲಿಕೆಗೆ ಪ್ರಧಾನ್ಯವನ್ನು ನೀಡುತ್ತವೆ. ವ್ಯಕ್ತಿವಿಶಿಷ್ಟ ಗ್ರಹಿಕೆ ಸರಾಸರಿ ಗ್ರಹಿಕೆಗಿಂತ ಬೇರೆಯಾಗಿರುವುದು ಅನಿವಾರ್ಯ. ಹಾಗಾಗಿ ಸ್ವಯಂಕಲಿಕೆಗೆ ತನ್ನದೇ ಪ್ರಾಧಾನ್ಯವಿದೆ. ವಿಶೇಷ ಸಂದರ್ಭಗಳಲ್ಲಿ ಹೊಸ ತಾತ್ತ್ವಿಕ ನಿಲುವುಗಳನ್ನು ಪ್ರತಿಪಾದಿಸುವಾಗ ಅಥವಾ ವಿಜ್ಞಾನದ ಗುರುತ್ವಾಕರ್ಷಣೆಯಂತಹ ವೈಜ್ಞಾನಿಕ ವಿಷಯಕ್ಕೆ ಸಂಬಂಧಪಟ್ಟಾಗ ವ್ಯಕ್ತಿವಿಶಿಷ್ಟ ಗ್ರಹಿಕೆ ಬಹಳ ಮುಖ್ಯವಾಗುತ್ತದೆ. ನ್ಯೂಟನ್ ಒಬ್ಬನೇ ಗುರುತ್ವಾಕರ್ಷಣೆ ಕುರಿತು ಭಿನ್ನವಾಗಿ ಯೋಚಿಸಿದ. ಆದರೆ ಸರ್ವೇ ಸಾಮಾನ್ಯ ವಿಷಯಗಳಾದ ಶಾಲಾಮಟ್ಟದ ವಿಜ್ಞಾನ, ಗಣಿತ ಮುಂತಾದವುಗಳನ್ನು ಕಲಿಯುವಾಗ ಅನುಭವಿ ವ್ಯಕ್ತಿಯ ಮಾರ್ಗದರ್ಶನದಲ್ಲಿ ಕಲಿಯುವುದು ಉತ್ತಮ. ಈ ಸಂಬಂಧವಾಗಿ ಸ್ವಯಂ ಕಲಿಕೆ ಹಾಗೂ ಮಾರ್ಗದರ್ಶನದ ಕಲಿಕೆಗಳ ಬಗ್ಗೆ ಸಂಶೋಧನೆ ಏನು ಹೇಳುತ್ತದೆ ಎಂಬುದನ್ನು ತಿಳಿಯುವುದು ಉಪಯುಕ್ತ. ಒಂದು ನಿರ್ದಿಷ್ಟ ಮಾರ್ಗದರ್ಶನದಲ್ಲಿ ಉಂಟಾದ ಕಲಿಕೆ ಹೆಚ್ಚುಕಾಲ ಮಕ್ಕಳ ಮನಸ್ಸಿನಲ್ಲಿ ಉಳಿಯುತ್ತದೆ ಎಂಬುದು ಈ ಸಂಶೋಧನೆಯಿಂದ ಕಂಡುಬಂದ ಸಂಗತಿ. ಒಂದು ವಿಜ್ಞಾನದ ಪ್ರಯೋಗವನ್ನೇ ಆಗಲಿ ಅಥವಾ ಗಣಿತದ ಸಮೀಕರಣವನ್ನೇ ಆಗಲಿ ಮಕ್ಕಳು ಪ್ರಯೋಗಮಾಡಿ ತಾವೇ ಕಲಿತರೂ ಆ ವಿದ್ಯಮಾನಗಳ ಇನ್ನಿತರ ಮಗ್ಗಲುಗಳನ್ನು ಸರಿಯಾಗಿ ಅರ್ಥಮಾಡಿ ಕೊಳ್ಳಬೇಕಾದರೆ ಅಥವಾ ಅರ್ಥಮಾಡಿಕೊಂಡಿದ್ದು ಅನ್ವಯಿಕ

ಜ್ಞಾನವಾಗಬೇಕಾದರೆ ಆ ಬಗ್ಗೆ ಒಂದು ಮಾರ್ಗದರ್ಶನದಲ್ಲಿ ನಡೆಯುವ ಚರ್ಚೆ ಅಗತ್ಯವಾಗುತ್ತದೆ ಎಂದು ಇತ್ತೀಚಿನ ಸಂಶೋಧನೆಗಳು ತಿಳಿಸುತ್ತವೆ.

### ಮಿದುಳು ಮತ್ತು ಕಲಿಕೆ

ಮೆದುಳಿನ ಅಧ್ಯಯನ ಮುಂದುವರಿದಂತೆ ಮಕ್ಕಳ ಕಲಿಕೆಯ ಬಗ್ಗೆ, ಕಲಿಕಾ ಸಮಸ್ಯೆಗಳ ಬಗ್ಗೆ ಅನೇಕ ಹೊಸ ತಿಳುವಳಿಕೆಗಳು ಮೂಡಿವೆ. ಉದಾಹರಣೆಗೆ ಮೆದುಳಿನ ಯಾವ ಯಾವ ಭಾಗಗಳು ಯಾವ ಯಾವ ಕಲಿಕೆಗೆ ಕಾರಣವಾಗಿವೆ ಎಂದು ಈಗ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ವಾಸನೆಯನ್ನು ಗ್ರಹಿಸಲು, ಮಾತನಾಡಲು, ರುಚಿ ನೋಡಲು ಹೀಗೆ ಇಂದ್ರಿಯಗ್ರಹಣಕ್ಕೆ ಸಂಬಂಧಪಟ್ಟಂತೆ ಮೆದುಳಿನಲ್ಲಿ ನಿರ್ದಿಷ್ಟ ಸ್ಥಾನ ಇರುವುದನ್ನು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಹಾಗೆಯೇ ಮಗು ಕಲಿಯುವಾಗ ಮೆದುಳಿನಲ್ಲಿ ಏನೆಲ್ಲ ಕ್ರಿಯೆಗಳು ನಡೆಯುತ್ತವೆ ಎಂಬ ಬಗ್ಗೆಯೂ ಸಾಕಷ್ಟು ತಿಳುವಳಿಕೆ ಇದೆ. ಉದಾಹರಣೆಗೆ ನೆನಪಿನ ಶಕ್ತಿಯ ಹಿಂದೆ ಇರುವ ಭೌತಿಕ ವಿದ್ಯಮಾನಗಳ ಬಗ್ಗೆ ಇತ್ತೀಚಿನ ಸಂಶೋಧನೆಗಳು ಬೆಳಕು ಚೆಲ್ಲುತ್ತವೆ. ಆಗತಾನೆ ಹುಟ್ಟಿದ ಮಗುವಿನ ಮೆದುಳಿನಲ್ಲಿ ನೂರು ಬಿಲಿಯನ್ (ನೂರು ಶತಕೋಟಿ) ನರಕೋಶಗಳಿರುತ್ತವೆ. ಮಗು ಹುಟ್ಟಿದ ನಂತರ ಇವುಗಳಲ್ಲಿ ಕೆಲವು ಸಾಯುತ್ತವೆ. ಆದರೆ ಉಳಿದದ್ದು ಮೆದುಳಿನ ಕೆಲಸಕ್ಕೆ ಸಾಕು. ಜೀವನಪರ್ಯಂತ ದೇಹದ ಇತರ ಭಾಗಗಳಲ್ಲಿ ಜೀವಕೋಶಗಳ ಸಂಖ್ಯೆ ವೃದ್ಧಿಯಾಗುತ್ತದೆ. ಹಾಗಾಗಿ ಆರು ಅಡಿ ಎತ್ತರದ ದೇಹ ಬೆಳೆಯಲು ಸಾಧ್ಯ. ಆದರೆ ಮೆದುಳಿನಲ್ಲಿ ಮಾತ್ರ ಒಂದೇ ಒಂದು ಹೊಸ ನರಕೋಶವೂ ಹುಟ್ಟುವುದಿಲ್ಲ. ಇರುವ ನರಕೋಶಗಳೇ ತಮ್ಮ ರೆಂಬೆಕೊಂಬೆಯಂತಹ ಕವಲುಗಳಿಂದ ಒಂದು ಮತ್ತೊಂದನ್ನು ಕೂಡಿಕೊಂಡು ವಿಶಿಷ್ಟವಾದ ನರಜಾಲವನ್ನು ರಚಿಸುತ್ತವೆ. ಆದರೆ ಮೆದುಳಿನಲ್ಲಿರುವ 'ಹಿಪ್ಪೊಕ್ಯಾಂಪಸ್' ಎಂಬ ಸಣ್ಣ ಭಾಗ ಇದಕ್ಕೆ ಅಪವಾದ. ಈ ಭಾಗದಲ್ಲಿ ನೆನಪಿನ ಕ್ರಿಯೆಗೆ ಸಂಬಂಧಪಟ್ಟಂತೆ ಹೊಸ ನರಕೋಶಗಳು ಹುಟ್ಟುತ್ತಲೇ ಇರುತ್ತವೆ. ಹೀಗೆ ಉತ್ಪತ್ತಿಯಾದ ನೆನಪಿನ ನರಕೋಶಗಳು ತಾತ್ಕಾಲಿಕ ನೆನಪಿನ ಶಕ್ತಿಯಾಗಿ ನಮ್ಮ ಮನಸ್ಸಿನಲ್ಲಿ ಉಳಿಯುತ್ತವೆ. ಆ ನಂತರ ನೆನಪನ್ನು ಹೊತ್ತ ಈ ಹೊಸ ನರಕೋಶಗಳು ಮೆದುಳಿನ ನಿಯೋಕಾರ್ಟೆಕ್ಸ್ ಎಂಬ ಭಾಗಕ್ಕೆ ಹೋಗಿ ಅಲ್ಲಿ ಶಾಶ್ವತ ನೆನಪಾಗಿ ಸೇರಿಕೊಳ್ಳುತ್ತವೆ. ಹೀಗೆ ನಾವು ಕ್ಲಿಷ್ಟವಾದ ಮೆದುಳಿನ ವಿದ್ಯಮಾನವನ್ನು ಸರಳೀಕರಿಸಿ ವಿವರಿಸಬಹುದು. ಮಕ್ಕಳ ಕಲಿಕೆಯ ದೃಷ್ಟಿಯಿಂದ ನಾವು ಗಮನಿಸಬೇಕಾದದ್ದು ಯಾವುದೆಂದರೆ ಮಗುವಿನ ಕಲಿಕೆಯ ಸಮಯದಲ್ಲಿ ಹಿಪ್ಪೊಕ್ಯಾಂಪಸ್ ಭಾಗ ನೆನಪಿಗೆ ಸಂಬಂಧಪಟ್ಟ ನರಕೋಶಗಳನ್ನು ಉತ್ಪತ್ತಿ ಮಾಡುತ್ತಲೆ ಇರುತ್ತದೆ ಮತ್ತು ಈ ನರಕೋಶಗಳ ಉತ್ಪಾದನೆಗೂ ಮಗು ಪಡೆಯುವ ನೆನಪಿನ ಶಕ್ತಿಗೂ ಸಂಬಂಧವಿದೆ. ಒಂದು ವೇಳೆ ಹಿಪ್ಪೊಕ್ಯಾಂಪಸ್ ನರಕೋಶಗಳನ್ನು ಉತ್ಪತ್ತಿ ಮಾಡದೆ ಇದ್ದರೆ?

ಇಂದಿನ ಮೆದುಳು ಸಂಶೋಧನೆ ಈ ಸಾಧ್ಯತೆಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ತರಗತಿಗಳಲ್ಲಿ ಮಕ್ಕಳನ್ನು ಬಹಳವಾದ ಒತ್ತಡಕ್ಕೆ, ಆತಂಕಕ್ಕೆ ಒಳಪಡಿಸಿದರೆ ಈ ಒತ್ತಡದಿಂದಾಗಿ ಗ್ಲೂಕೋಕಾರ್ಟಿಕಾಯ್ಡ್ ಎಂಬ ರಾಸಾಯನಿಕ ಉತ್ಪತ್ತಿಯಾಗುತ್ತದೆ ಮತ್ತು ಈ ರಾಸಾಯನಿಕವು ಹಿಪ್ಪೊಕ್ಯಾಂಪಸ್‌ನಲ್ಲಿ ನರಕೋಶಗಳ ಉತ್ಪಾದನೆಯನ್ನು ತಡೆಯುತ್ತದೆ. ಹೀಗೆ ತೀವ್ರ ಒತ್ತಡಕ್ಕೆ ಸಿಲುಕಿದ ಮಗು ಪಾಠಪ್ರವಚನಗಳನ್ನು ನೆನಪಿಡಲಾರದೆ ಕಲಿಕೆಯಲ್ಲಿ ಹಿಂದೆ ಉಳಿದುಬಿಡುತ್ತದೆ. ಪ್ರೀತಿಯಿಂದ ಪಾಠ ಹೇಳಿ ಕೊಡಬೇಕು, ತರಗತಿಯ ವಾತಾವರಣ ಶಾಂತಿ ನೆಮ್ಮದಿಯನ್ನು ಹುಟ್ಟಿಸುವಂತಿರಬೇಕು ಎಂಬ ನಿರೀಕ್ಷೆ ಸರ್ವೇಸಾಮಾನ್ಯವಾಗಿ ಎಲ್ಲ ಅಧ್ಯಾಪಕರಲ್ಲೂ ಇರುತ್ತದೆ. ಆದರೆ ಈ ನಿರೀಕ್ಷೆಗೆ ಭೌತಿಕವಾಗಿ ಗುರುತಿಸಬಹುದಾದ ಕಾರಣಗಳಿವೆ ಎಂದು ನಮ್ಮ ಅಧ್ಯಾಪಕರಿಗೆ ತಿಳಿದಿರುವುದಿಲ್ಲ. ಆದ್ದರಿಂದ ತಾವು ಊಹಿಸುವ ಈ ತಾತ್ತ್ವಿಕ ನಿಲುವಿನ ಬಗ್ಗೆ ಅಧ್ಯಾಪಕರು ತಮ್ಮದೇ ಒತ್ತಡಗಳ ಕಾರಣದಿಂದಾಗಿ ಶ್ರದ್ಧೆ ಕಳೆದುಕೊಳ್ಳುತ್ತಾರೆ. ಆದರೆ ತಮ್ಮ ಈ ಮಗುವಿನ ಪರವಾದ ಕಾಳಜಿಗಳಿಗೆ ಮೇಲೆ ತಿಳಿಸಿದಂತಹ ವೈಜ್ಞಾನಿಕ ಕಾರಣಗಳಿವೆ ಎಂಬುದನ್ನು ಅಧ್ಯಾಪಕರು ಮನಗಂಡಾಗ, ಇದೊಂದು ವೈಜ್ಞಾನಿಕ ಸತ್ಯ ಎಂದು ಅವರಿಗೆ ಮನವರಿಕೆ ಮಾಡಿಕೊಟ್ಟಾಗ ತಮ್ಮ ನಂಬಿಕೆಗಳ ಮೇಲೆ ಅವರಿಗೆ ಅಪಾರ ಶ್ರದ್ಧೆ ಮೂಡುತ್ತದೆ.

### ವಿಜ್ಞಾನ ಮತ್ತು ಸಂಸ್ಕೃತಿ

ಕಣ್ಣಿಗೆ ಕಾಣುವ ಮತ್ತು ಕಾಣದ ವೈಜ್ಞಾನಿಕ ಸತ್ಯಗಳ ಬಗ್ಗೆ ಶ್ರದ್ಧೆಯನ್ನು ಹುಟ್ಟಿಸುವುದೇ ವಿಜ್ಞಾನ ಪಾಠಗಳ ಪ್ರಮುಖ ಉದ್ದೇಶವಾಗಿರಬೇಕು. ಚಾರಿತ್ರಿಕವಾಗಿ ವಿಜ್ಞಾನಪ್ರಧಾನವಾದ ಸಮಾಜವನ್ನು ಕಟ್ಟಿಕೊಂಡಿರುವ ಪಾಶ್ಚಾತ್ಯರಿಗೆ ತಮ್ಮ ವಿಜ್ಞಾನದ ಆವಿಷ್ಕಾರಗಳ ಬಗ್ಗೆ ಆಳವಾದ ನಂಬಿಕೆ ಇದೆ. ಅಲ್ಲದೆ ಈ ನಂಬಿಕೆ ಶ್ರದ್ಧೆಗಳು ಅವರ ನಿತ್ಯ ಜೀವನದ ಅವಿಭಾಜ್ಯ ಅಂಗವಾಗಿ ಕಂಡುಬರುತ್ತವೆ. ಈ ನಂಬಿಕೆ ಹುಟ್ಟಿರುವುದಕ್ಕೆ ಕಾರಣ ಪಾಶ್ಚಾತ್ಯರೆಲ್ಲರಿಗೂ ವಿಜ್ಞಾನದ ಪರಿಕಲ್ಪನೆ, ಅರ್ಥವ್ಯಾಪ್ತಿಗಳು ಸಂಪೂರ್ಣವಾಗಿ ತಿಳಿದಿದೆ ಎಂದೇನೂ ಅಲ್ಲ. ಆದರೆ ವಿಜ್ಞಾನ ಹೀಗೆ ಹೇಳುತ್ತದೆ ಎಂದಾದರೆ ಸಾಕು. ಅವರಿಗೆ ಆ ಬಗ್ಗೆ ಶ್ರದ್ಧೆ ಮೂಡಿ ಅದು ಅವರ ಸಮೂಹ ನಡವಳಿಕೆಯಲ್ಲಿ ಸಹಜವಾಗಿ ಕಂಡುಬರುತ್ತದೆ. ಇದು ವಿಜ್ಞಾನ ಅವರ ಸಂಸ್ಕೃತಿಯ ಭಾಗವಾಗಿರುವುದನ್ನು ನಿರ್ವಿವಾದವಾಗಿ ತೋರಿಸುತ್ತದೆ.

ವಿಜ್ಞಾನವಿಮುಖವಾದ ಸರಾಸರಿ ಭಾರತೀಯ ಮನಸ್ಸು ಈ ಬಗೆಯ ವೈಜ್ಞಾನಿಕ ಚಿಂತನೆಗಳು ದಿನನಿತ್ಯದ ಬದುಕಿನಲ್ಲಿ ಅನ್ವಯವಾಗುತ್ತವೆ ಎಂಬುದನ್ನು ಮನಗಾಣುವುದೇ ಇಲ್ಲ. ಈ ವಿಜ್ಞಾನವಿಮುಖತೆಗೆ ಚಾರಿತ್ರಿಕ ಕಾರಣಗಳಿವೆ ಎಂದು ಪ್ರೊ. ಕೃಷ್ಣಕುಮಾರ್ ಭಾವಿಸುತ್ತಾರೆ. ಅವರ ಪ್ರಕಾರ ಭಾರತ ತನ್ನನ್ನು ತಾನು ಪಾಶ್ಚಾತ್ಯ ಸಂಸ್ಕೃತಿಗೆ ತೆರೆದುಕೊಂಡದ್ದು ವಸಾಹತುಶಾಹಿ ಸಂದರ್ಭದಲ್ಲಿ. ಈ ಸಂದರ್ಭದಲ್ಲಿ ಭಾರತೀಯ ಮನಸ್ಸು ವಸಾಹತುಶಾಹಿಗೆ ಸ್ವಾಭಾವಿಕವಾಗಿಯೆ ತೋರಬಹುದಾದ ತಿರಸ್ಕಾರ

ಪಾಶ್ಚಾತ್ಯಮೂಲದ ವಿಜ್ಞಾನಕ್ಕೂ ಅನ್ವಯವಾಗಿಬಿಟ್ಟಿತು. ಹಾಗಾಗಿ ಭಾರತೀಯ ಮನಸ್ಸು ಸಾರಾಸಗಟಾಗಿ ವಿಜ್ಞಾನಕ್ಕೆ ವಿಮುಖವಾದ ಸ್ವಭಾವವನ್ನು ಬೆಳೆಸಿಕೊಂಡಿತು. ವಿಜ್ಞಾನ ಎಂಬುದು 'ವಿದೇಶೀ ವಿರೋಧ' (Xenophobia)ದ ಭಾಗವಾಗಿ ಭಾರತೀಯ ಮನಸ್ಸಿನಲ್ಲಿ ಬೇರೂರಿ ಇಡೀ ಒಂದು ಜನಸಮುದಾಯ ವಿಜ್ಞಾನವನ್ನು ಗಂಭೀರವಾಗಿ ತೆಗೆದುಕೊಳ್ಳಲೇ ಇಲ್ಲ. ಒಂದು ಹೆಜ್ಜೆ ಮುಂದೆ ಹೋಗಿ ಹೇಳಬೇಕೆಂದರೆ ವಿಜ್ಞಾನಿವಿರೋಧಿ ಭಾವನೆಯನ್ನು ಬೆಳೆಸಿಕೊಂಡಿತು. ಆದರೆ ಇಂತಹದೇ ಒಂದು ಸಂದರ್ಭದಲ್ಲಿ ಜಪಾನ್ ನಮ್ಮಂತೆ ಆಗಲಿಲ್ಲ ಎಂದು ಬಾರನ್ ಎಂಬ ತಜ್ಞ ಭಾವಿಸುತ್ತಾನೆ. ಜಪಾನೀಯರು ತಮ್ಮತನವನ್ನು ಕಳೆದುಕೊಳ್ಳದೆ ವಿಜ್ಞಾನವನ್ನು ತಮ್ಮದಾಗಿಸಿಕೊಂಡರು. ಮೇಲ್ನೋಟಕ್ಕೆ ಸಮಂಜಸವಾಗಿ ಕಾಣುವ ಈ ವಿಚಾರಸರಣಿಯನ್ನು ತೀವ್ರ ವಿಮರ್ಶೆಗೆ ಗುರಿಪಡಿಸಬೇಕೆಂಬುದೂ ನಿಜ.

## ಮೌಲ್ಯ ಮತ್ತು ವೈಜ್ಞಾನಿಕ ಮನಸ್ಸು

ವೈಜ್ಞಾನಿಕ ಮನೋಭಾವನೆಯನ್ನು ರೂಢಿಸಿಕೊಳ್ಳುವುದು ಎಂದರೆ ಹಿಂದಿನ ಎಲ್ಲಾ ಪರಂಪರಾನುಗತ ನಂಬಿಕೆಗಳಿಂದ ಬಿಡಿಸಿಕೊಂಡು ಏಕಾಏಕಿ ಆಧುನಿಕವಾಗುವುದು ಎಂದು ಭಾವಿಸುವವರೇ ಹೆಚ್ಚು. ವಿಜ್ಞಾನ–ತಂತ್ರಜ್ಞಾನ ತರುವ ಆಧುನಿಕತೆಯ ಜೊತೆಜೊತೆಗೇ ಮೌಲ್ಯರಹಿತವಾದ ಒಂದು ಸ್ವೇಚ್ಛಾಚಾರದ ಮನೋಭಾವನೆ ರೂಢಿಸಿಕೊಳ್ಳುವವರೇ ಹೆಚ್ಚು. ಆದರೆ ನಿಜವಾದ ವೈಜ್ಞಾನಿಕ ಮನಸ್ಸು ಮೌಲ್ಯಗಳನ್ನು ಗೊಡ್ಡುನಂಬಿಕೆಗಳ ಮೇಲೆ ಕಟ್ಟುವ ಬದಲು ವೈಚಾರಿಕ ನೆಲೆಗಳ ಸಮರ್ಥನೆಯನ್ನು ಅರಸುತ್ತದೆ. ಮೌಲ್ಯವಿಲ್ಲದ ಬದುಕು ವೈಜ್ಞಾನಿಕವೂ ಅಲ್ಲ ಎಂದು ನಿಜವಾದ ವಿಜ್ಞಾನಿಗಳಿಗೆ ತಿಳಿದಿರುತ್ತದೆ. ಇಂತಹ ಮೌಲ್ಯವಂತ ವೈಜ್ಞಾನಿಕ ಮನೋಧರ್ಮದ ಜನ ಪೂರ್ವಪಶ್ಚಿಮಗಳೆರಡರಲ್ಲೂ ಇದ್ದಾರೆ. ಆದರೆ ಇದೇ ಮಟ್ಟದ ವಿಚಾರಶೀಲತೆಯನ್ನು ಶ್ರೀಸಾಮಾನ್ಯರು ಇಂದಿನ ಶೈಕ್ಷಣಿಕ–ರಾಜಕೀಯ–ಆಧ್ಯಾತ್ಮಿಕ ಪರಿಸರದಲ್ಲಿ ಬೆಳೆಸಿಕೊಳ್ಳಲು ಸಾಧ್ಯವಿಲ್ಲ. ನಮ್ಮ ಇಂದಿನ ಪರಿಸರ ಇದಕ್ಕೆ ಪೂರಕವಾಗಿಲ್ಲ. ಹಾಗಾಗಿ ನಮ್ಮ ನಡುವಿನ ಜನಸಾಮಾನ್ಯರು ಹಿಂದಿನ ನಂಬಿಕೆ ಆಧಾರಿತ ಆಚರಣೆಗಳನ್ನು ಕಳೆದುಕೊಳ್ಳುವುದರ ಜೊತೆಗೆ ವಿಜ್ಞಾನವನ್ನು ಪಡೆಯಲಾರದೆ ಕೇವಲ ಸ್ವೇಚ್ಛಾಚಾರವನ್ನು ಉಳಿಸಿಕೊಳ್ಳುವುದೆ ಹೆಚ್ಚು. ಹಾಗಾಗಿ ಸಮಾಜದಲ್ಲಿ ಮೌಲ್ಯಗಳಿಗೆ ಆಧಾರವಾಗಿ ನಿಲ್ಲಬಲ್ಲ ವಿಚಾರಶೀಲ ವ್ಯಕ್ತಿಗಳು ಅನುಸರಣೀಯ ಮಾದರಿಯಾಗಿ ನಮ್ಮ ಮಕ್ಕಳಿಗೆ, ಯುವಪೀಳಿಗೆಗೆ ಕಂಡುಬರುತ್ತಿಲ್ಲ. ನಮ್ಮ ಮಕ್ಕಳು ಮೌಲ್ಯರಹಿತ ಮಾದರಿಗಳಿಂದಲೇ ತಮ್ಮ ಜೀವನದ ಪಾಠವನ್ನು ಅಪ್ರಜ್ಞಾಪೂರ್ವಕವಾಗಿ ಕಲಿಯುತ್ತಿದ್ದಾರೆ. ಬಹುಸಂಖ್ಯಾತರ ಮೌಲ್ಯರಹಿತ ನಡವಳಿಕೆಯಲ್ಲಿ ಬೇರುಬಿಟ್ಟಿರುವ ಕೀಳು ಅಭಿರುಚಿಯನ್ನೇ ಜಾಗತಿಕ ಮಾರುಕಟ್ಟೆ ತನ್ನ ಬಂಡವಾಳ ಮಾಡಿಕೊಂಡಿದೆ. ಇಂತಹ ಪರಿಸರದಲ್ಲಿ ಶಿಕ್ಷಣದ ಆದರ್ಶಗಳು ಎಂದೂ

ಕೈಗೆಟುಕದ ಎತ್ತರದಲ್ಲಿ ಬ್ರಹ್ಮಸೂತ್ರದ ಕಗ್ಗಂಟಿನಂತೆ ನಿಂತುಬಿಟ್ಟರೆ ಯಾರು ತಾನೇ ಇವುಗಳನ್ನು ಗಂಭೀರವಾಗಿ ಪರಿಗಣಿಸುತ್ತಾರೆ? ಅತಿ ಹೆಚ್ಚು ಎಂದರೆ ನಮ್ಮ ಪ್ರಶಿಕ್ಷಣಾರ್ಥಿಗಳು ಪರೀಕ್ಷೆ ಬರೆಯುವ ಸಲುವಾಗಿ ಈ ತಾತ್ತ್ವಿಕ ಅಂಶಗಳನ್ನು ಬಾಯಿಪಾಠ ಮಾಡಿ ಪರೀಕ್ಷೆಯಲ್ಲಿ ಬರೆದು ಮರೆತುಬಿಡಬಹುದಷ್ಟೆ.

**ಭಾರತೀಯರ ಪಾರಂಪರಿಕ ವಿಜ್ಞಾನ**

ತೀವ್ರ ಆಕ್ರಮಣಕಾರಿ ಸ್ವಭಾವವಿಲ್ಲದ ಭಾರತೀಯರು ಶತಮಾನಗಳ ಕಾಲ ಒಂದಲ್ಲ ಒಂದು ಬಗೆಯ ದಬ್ಬಾಳಿಕೆಯಲ್ಲಿ ನಲುಗಿ ಹೋಗಿರುವುದು ಚಾರಿತ್ರಿಕ ಸತ್ಯ. ಭಾರತ ಸಾವಿರಾರು ವರ್ಷಗಳ ಪರ್ಯಂತ ತನ್ನದೇ ಜ್ಞಾನಭಂಡಾರವನ್ನು, ಜ್ಞಾನಪದ್ಧತಿಗಳನ್ನು ಕಂಡುಕೊಂಡು ಅನುಸರಿಸುತ್ತ ಬಂದಿತ್ತು. ಆದರೆ ಪರಕೀಯರು ದಮನಕಾರಿ ತಂತ್ರಗಳನ್ನು ಮಾತ್ರ ಬಳಸುತ್ತಿದ್ದುದರಿಂದ ಸ್ಥಳೀಯ ಜ್ಞಾನಭಂಡಾರದ ಲಾಭವನ್ನು ಪಡೆದರೂ ಅದಕ್ಕೆ ಪ್ರತಿಯಾಗಿ ಯಾವ ಕೃತಜ್ಞತಾ ಭಾವನೆಯನ್ನೂ ಸೂಚಿಸುತ್ತಿರಲಿಲ್ಲ. ವ್ಯಾಪಾರಿಯೊಬ್ಬ ತಾನು ಪಡೆಯುತ್ತಿರುವ ವಸ್ತುವಿನ ಮಹತ್ತ್ವವನ್ನು ತಿಳಿದೂ ಅದನ್ನು ಮರೆಮಾಚುವಂತೆ ಈ ಪರಕೀಯರು ಇಲ್ಲಿಯ ಜ್ಞಾನಪದ್ಧತಿಯ ಲಾಭವನ್ನು ಪಡೆದರೂ ಅದರ ಮಹತ್ತ್ವವನ್ನು ಮುಕ್ತವಾಗಿ ಅಂಗೀಕರಿಸುತ್ತಿರಲಿಲ್ಲ. ಹೀಗಾಗಿ ಭಾರತೀಯರು ತಮ್ಮಲ್ಲೇ ಇದ್ದ ಅಮೂಲ್ಯ ಜ್ಞಾನಭಂಡಾರದ ಮಹತ್ತ್ವವನ್ನು ಕಡೆಗಣಿಸಿದರು. ಜೊತೆಗೆ ತಮ್ಮ ನಡುವೆ ಅಮೂಲ್ಯವಾದದ್ದು ಯಾವುದೂ ಇಲ್ಲವೇನೋ ಎಂದೂ ಭಾವಿಸತೊಡಗಿದರು. ಹಾಗಾಗಿ ತಮ್ಮತನವನ್ನು ತೊರೆದು ಪರಕೀಯರನ್ನು ಅನುಕರಿಸುವ ಕಲೆಯನ್ನು ಕರಗತಮಾಡಿಕೊಂಡರು. ಹಾಗೆ ನೋಡಿದರೆ ಇಡೀ ಜಗತ್ತಿಗೆ ಗಣಿತದಲ್ಲಿ ಸೊನ್ನೆಯ ಕಲ್ಪನೆಯನ್ನು ಕೊಟ್ಟವರು ಭಾರತೀಯರು. ಇದೊಂದು ಅಸಾಧಾರಣ ಕೊಡುಗೆ. ಇದಲ್ಲದೆ ಖಗೋಳಶಾಸ್ತ್ರದಲ್ಲೂ ಮಹತ್ತ್ವದ ಜ್ಞಾನವನ್ನು ನಮ್ಮ ಹಿಂದಿನವರು ಪಡೆದಿದ್ದರು. ಬನಾರಸ್‌ನಲ್ಲಿರುವ ಹದಿನೇಳನೇ ಶತಮಾನದಲ್ಲಿ ಕಟ್ಟಲಾಗಿದೆ ಎನ್ನುವ ಆಕಾಶ ವೀಕ್ಷಣಾಲಯ (Observatory) ಆಧುನಿಕ ವಿಜ್ಞಾನಕ್ಕೆ ಒಂದು ಸವಾಲು ಎನ್ನುವಷ್ಟರ ಮಟ್ಟಿಗೆ ನಿಖರವಾಗಿದೆ. ಅಲ್ಲಿ ಬಳಸಿರುವ ಉಪಕರಣಗಳು ಮತ್ತು ಬಳಸುವ ಪದ್ಧತಿ ನಮ್ಮದೇ ನೆಲದ ಜ್ಞಾನಪದ್ಧತಿಯಿಂದ ಹುಟ್ಟಿದ್ದಾಗಿರಬೇಕು. ಅನೇಕ ಪರಿಣಿತರು ಈ ವೀಕ್ಷಣಾಲಯ ಬಹಳ ಹಳೆಯದಿರಬೇಕೆಂದು ಭಾವಿಸುತ್ತಾರೆ. ಇದಲ್ಲದೆ ದಕ್ಷಿಣ ಭಾರತದ ಬ್ರಾಹ್ಮಣರ ಕೆಲವು ಗುಂಪುಗಳಿಗೆ ಅಗಾಧವಾದ ಖಗೋಳಶಾಸ್ತ್ರದ ಜ್ಞಾನ ಇದ್ದುದು ದಾಖಲಾಗಿದೆ. ನಿಖರವಾಗಿ ಗ್ರಹ ನಕ್ಷತ್ರಗಳ ಸ್ಥಾನವನ್ನು ಗುರುತಿಸುವ, ಲೆಕ್ಕ ಹಾಕುವ ಇವರ ಪರಿಣತಿಗೆ ಆಧಾರವಾದರೂ ಏನು ಎಂದು ಚಿಂತಿಸಿದ ಬ್ರಿಟಿಷ್ ತಜ್ಞ (ಪ್ರೊ॥ ಪ್ಲೇಫೇರ್) ಇಂಟೆಗ್ರಲ್ ಕ್ಯಾಲ್ಕ್ಯುಲಸ್ ಮತ್ತು ಗುರುತ್ವಾಕರ್ಷಣೆ ನಿಯಮಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಹೀಗೆ ಆಕಾಶಕಾಯಗಳ ಖಚಿತ ಸ್ಥಾನಗಳನ್ನು

ಗುರುತಿಸಲು ಸಾಧ್ಯವಿಲ್ಲ ಎಂದು ಭಾವಿಸುತ್ತಾನೆ. ಹೀಗೆ ಲೆಕ್ಕಾಚಾರ ಹಾಕಲು ಈ ಬ್ರಾಹ್ಮಣರಿಗೆ ಟ್ರಿಗ್ನಾಮೆಟ್ರಿಗೆ ಸಮನಾದ ಕ್ಯಾಲ್ಕ್ಯುಲಸ್ ಗಣಿತ ತಿಳಿದಿರಬೇಕೆಂದು ಊಹಿಸುತ್ತಾನೆ. ಪಾಶ್ಚಾತ್ಯರ ಗಣಿತ ಪದ್ಧತಿಗೆ ಈ ಜ್ಞಾನ ಸೇರಿಕೊಳ್ಳುವ ಬಹಳ ಮೊದಲೇ ಭಾರತೀಯರು ಇದನ್ನು ಹೇಗೆ ಕಂಡುಹಿಡಿದರು ಎಂಬುದು ಆಶ್ಚರ್ಯದ ಸಂಗತಿ. ಇದಲ್ಲದೆ ಗುರುಗ್ರಹದ ನಾಲ್ಕು ಪ್ರಧಾನ ಚಂದ್ರಗಳಿಗೆ ಸಂಕೇತವಾಗಿ ನಾಲ್ವರು ಹುಡುಗಿಯರು ನೃತ್ಯ ಮಾಡುವಂತೆಯೂ, ಶನಿಯ ಏಳು ಚಂದ್ರಗಳಿಗೆ ಹೊಂದುವಂತೆ ಶನಿಯ ಸುತ್ತ ಏಳು ಕೈಗಳನ್ನು ಚಿತ್ರಿಸಿರುವುದನ್ನೂ ಕಂಡು ಬ್ರಿಟಿಷ್ ಖಗೋಳತಜ್ಞರು ದಂಗು ಬಡಿದು ಹೋದರು. ದಕ್ಷಿಣ ಭಾರತದ ಬ್ರಾಹ್ಮಣರ ಬಳಿ ಪ್ರಬಲವಾದ ದೂರದರ್ಶಕವೊಂದು ಇದ್ದಿರಬೇಕೆಂಬ ಅನುಮಾನ ಇವರನ್ನು ಕಾಡಿದ್ದುಂಟು. ಶನಿಯ ಆರನೇ ಚಂದ್ರವನ್ನು ಹರ್ಷಲ್ ಕಂಡು ಹಿಡಿಯುವುದಕ್ಕಿಂತ ಬಹಳ ಮೊದಲೇ ಭಾರತೀಯರು ಶನಿಯ ಏಳು ಚಂದ್ರಗಳನ್ನು ಸಾಂಕೇತಿಕವಾಗಿ ಕೈಗಳಂತೆ ಚಿತ್ರಿಸಿದ್ದು ಆಶ್ಚರ್ಯವೇ ಸರಿ. ಒಟ್ಟಿನಲ್ಲಿ ಭಾರತೀಯರು ತಮ್ಮದೇ ಜ್ಞಾನಪದ್ಧತಿಯನ್ನು ಹೊಂದಿದ್ದರು ಎಂಬುದು ನಿಸ್ಸಂಶಯ. ಗಣಿತದಲ್ಲೂ ಸಹ ತಮ್ಮದೇ ವಿಧಾನಗಳನ್ನು ಅನುಸರಿಸಿ ಅತ್ಯಾಧುನಿಕವಾದ ಇಂದಿಗೂ ಸಮಂಜಸವಾದ ಗಣಿತ ಜ್ಞಾನವನ್ನು ಸೃಷ್ಟಿಸಿದ್ದರು. ಆದರೆ ಭಾರತೀಯ ಪರಂಪರೆಯಲ್ಲಿ ಜ್ಞಾನದ ಕೊನೆಯ ಉತ್ಪನ್ನವನ್ನು ಮಾತ್ರ ಪ್ರಕಟಿಸಿ ಯಾವ ಪದ್ಧತಿಯ ಮೂಲಕ ಈ ಅಂತಿಮ ಫಲವನ್ನು ಪಡೆಯಲಾಯಿತು ಎಂಬುದನ್ನು ತಿಳಿಸಿಕೊಡುವ ಸಂಪ್ರದಾಯವೇ ಇರಲಿಲ್ಲ. ಹಾಗಾಗಿ ನಮ್ಮ ಜ್ಞಾನಪದ್ಧತಿ ಸಾರ್ವತ್ರಿಕವಾಗಿ ಎಲ್ಲರಿಗೂ ಲಭ್ಯವಾಗಲಿಲ್ಲ. ಅದು ಒಂದು ಪರಂಪರೆಯಲ್ಲಿ ಕೆಲವೇ ಕುಟುಂಬಗಳು, ಕೆಲವೇ ಸಂಪ್ರದಾಯಗಳ ನಡುವೆ ಹರಿದುಬಂದಿತೇ ಹೊರತು ವ್ಯಾಪಕವಾಗಿ ವಿಕಾಸವಾಗಲಿಲ್ಲ. ಅಲ್ಲದೆ ಇದೇ ಜ್ಞಾನದ ಇತರ ಅಮೂರ್ತ ಆಯಾಮಗಳನ್ನು ಅನ್ವೇಷಣೆ ಮಾಡಲಾಗಲಿಲ್ಲ. ಬೀಜಗಣಿತದಲ್ಲೂ ಸಹಾ ಭಾರತೀಯರು ಯೂರೋಪಿಯನ್ನರನ್ನು ಚಕಿತಗೊಳಿಸಿದ್ದರು.

ವೈದ್ಯಕೀಯ ಜ್ಞಾನದಲ್ಲೂ ಕೂಡ ಸ್ಥಳೀಯ ಜ್ಞಾನ ಹಾಗೂ ವೈದ್ಯಕೀಯ ಪರಂಪರೆ ಅಗಾಧವಾಗಿತ್ತು. ಉದಾಹರಣೆಗೆ ಸಿಡುಬು ರೋಗ ಬಂದಾಗ ತಮ್ಮದೇ ಒಂದು ಕಚ್ಚಾ ಪದ್ಧತಿಯ ಇನಾಕ್ಯುಲೇಷನ್ ಅನ್ನು ಉತ್ತರ ಭಾರತದ ಜನ ಅನುಸರಿಸುತ್ತಿದ್ದರು. ಇದು ಪರಿಣಾಮಕಾರಿಯಾಗಿಯೂ ಇತ್ತು. ಎಡ್ವರ್ಡ್ ಜನ್ನರ್ ಅನಂತರ ಸುಧಾರಿತ ಪದ್ಧತಿಯ ಇನಾಕ್ಯುಲೇಷನ್‌ಅನ್ನು ಜಾರಿಗೆ ತಂದ. ಅವನಿಗೂ ಕೂಡ ಟರ್ಕಿ ದೇಶದಲ್ಲಿ ನಡೆಯುತ್ತಿದ್ದ ಕಚ್ಚಾ ಪದ್ಧತಿ ಸೂಚನೆ ನೀಡಿತು. ಮುಖ್ಯವಾಗಿ ನಾವು ಗಮನಿಸಬೇಕಾದದ್ದು ಏನುಎಂದರೆ ವಸಾಹತುಶಾಹಿ ಆಳ್ವಿಕೆಗೆ ಮೊದಲು ಭಾರತೀಯರು ತಮ್ಮದೇ ಆದ ವಿಜ್ಞಾನಪದ್ಧತಿಗಳನ್ನು ಕಂಡು ಹಿಡಿದಿದ್ದರು ಎನ್ನುವುದು. ತಂತ್ರಜ್ಞಾನದ ವಿಷಯವಾಗಿ ಹೇಳಬೇಕೆಂದರೆ ಇಲ್ಲೂ ಸಹ ಸ್ಥಳೀಯ ತಂತ್ರಜ್ಞಾನ ಆ ಕಾಲದ ಪ್ರಪಂಚದ ಇತರ

ಭಾಗಗಳ ತಂತ್ರಜ್ಞಾನಕ್ಕಿಂತ ಚೆನ್ನಾಗಿಯೇ ಇತ್ತು. ಉದಾಹರಣೆಗೆ ಪ್ರಪಂಚದಲ್ಲೇ ಅತ್ಯುತ್ತಮವಾದ ಉಕ್ಕನ್ನು ಭಾರತೀಯರು ತಯಾರಿಸುತ್ತಿದ್ದರು. ಮಂಜುಗಡ್ಡೆಯನ್ನು ತಯಾರಿಸುವ ಕಲೆಯೂ ಭಾರತೀಯರಿಗೆ ಬಹಳ ಮೊದಲೇ ತಿಳಿದಿತ್ತು. ಆದರೆ ಅಲ್ಪಸಂಖ್ಯೆಯ ಕಸುಬುದಾರರಿಗೆ ಮಾತ್ರ ಗೊತ್ತಿದ್ದ ಈ ವಿಜ್ಞಾನ, ಗಣಿತ ಮತ್ತು ತಂತ್ರಜ್ಞಾನಗಳು ವಸಾಹತುಶಾಹಿ ಆಳ್ವಿಕೆ ತಂದ ಪಲ್ಲಟಗಳಿಂದಾಗಿ ಕಳೆದುಹೋದುವು. ಜ್ಞಾನವನ್ನು ಹಂಚಿಕೊಳ್ಳದ ಮನೋಭಾವ ಈ ದೇಶದ ಎಲ್ಲ ಜನಾಂಗಗಳಲ್ಲೂ ಇತ್ತು. ಗಿರಿಜನರು ಇಂದಿಗೂ ಸಹ ತಮ್ಮ ಪಾರಂಪರಿಕ ಔಷಧೀಯ ಸಸ್ಯಗಳ ಬಗೆಗಿನ ಜ್ಞಾನವನ್ನು ಇತರರೊಡನೆ ಹಂಚಿಕೊಳ್ಳುವುದಿಲ್ಲ. ಅದಕ್ಕೆ ತಮ್ಮದೇ ಕಾರಣಗಳನ್ನು ಕೊಡುತ್ತಾರೆ. ಉತ್ಕೃಷ್ಟ ಗುಣಮಟ್ಟದ ಉಕ್ಕನ್ನು ತಯಾರಿಸುವ ಕಲೆಯನ್ನು ಕೆಲವು ಸಮುದಾಯಗಳು ಕರಗತ ಮಾಡಿಕೊಂಡಿದ್ದವು. ಈ ಕಲೆಯೂ ಹೆಚ್ಚು ಪ್ರಚಾರವಾಗಲಿಲ್ಲ. ಹಾಗಾಗಿ ನಮ್ಮದೇ ನೆಲದಲ್ಲಿ ಹುಟ್ಟಿದ ಉತ್ತಮ ಜ್ಞಾನವನ್ನು ಕಳೆದುಕೊಂಡು ಯೂರೋಪ್ ಮೂಲದ್ದೆಲ್ಲಾ ಶ್ರೇಷ್ಠ ಎಂಬ ತಿಳುವಳಿಕೆಗೆ ಇಡೀ ರಾಷ್ಟ್ರವೇ ಬಂದು ನಿಂತಿತು. ಇಂದು ಜಾಗತೀಕರಣದ ಪ್ರಭಾವ ಇದೇ ನಂಬಿಕೆಯನ್ನು ಗಟ್ಟಿಗೊಳಿಸುತ್ತಿದೆ.

ಬ್ರಿಟಿಷರ ಆಳ್ವಿಕೆಯಲ್ಲಿ ಭಾರತೀಯ ಶಿಕ್ಷಣ ಪದ್ಧತಿಯೂ ಕಳೆಗುಂದಿತು. ಗಾಂಧಿಜಿಯವರ ಮಾತುಗಳಲ್ಲೇ ಈ ವಿಷಯವನ್ನು ಹೇಳುವುದಾದರೆ "ಕಳೆದ ಐವತ್ತು ಅಥವಾ ನೂರು ವರ್ಷಗಳ ಬ್ರಿಟಿಷ್ ಆಳ್ವಿಕೆಯಲ್ಲಿ ಭಾರತೀಯರ ಅನಕ್ಷರತೆ ಹೆಚ್ಚಾಗಿದೆ. ಇದನ್ನು ನಾನು ಯಾವ ಸಂಕೋಚವೂ ಇಲ್ಲದೆ ಹೇಳುತ್ತೇನೆ. ನಮ್ಮ ನೆಲದಲ್ಲಿ ಭದ್ರವಾಗಿ ಬೇರೂರಿದ್ದ ಶಿಕ್ಷಣ ಪದ್ದತಿಯನ್ನು ಅರ್ಥ ಮಾಡಿಕೊಳ್ಳುವ ಮೊದಲೆ ಅದರ ಬೇರನ್ನು ಅಗೆದುಹಾಕಲಾಗಿದೆ. ಹೀಗೆ ಬೇರುಗಳಿಂದ ತೆಗೆದ ಮಣ್ಣನ್ನು ಪುನಃ ಮುಚ್ಚಿದ್ದರೆ ಒಳ್ಳೆಯದಿತ್ತು. ಆದರೆ ಅದನ್ನು ಹಾಗೆಯೇ ಬಿಡಲಾಗಿದೆ. ಶಿಕ್ಷಣ ಎಂಬ ಸುಂದರ ವೃಕ್ಷ ಒಣಗಿ ನಿಂತಿದೆ". ಬ್ರಿಟಿಷ್ ಆಡಳಿತ ವ್ಯವಸ್ಥೆಯಿಂದ ಭಾರತ ಮತ್ತು ಬರ್ಮಾ ಎರಡರಲ್ಲೂ ಶಿಕ್ಷಣದ ವ್ಯವಸ್ಥೆಗೆ ಹಾನಿಯಾಗಿದೆ ಎಂದು ಗಾಂಧೀಜಿ ಅಭಿಪ್ರಾಯಪಡುತ್ತಾರೆ.

ಈ ಸಂದರ್ಭದಲ್ಲಿ ಒಂದು ವಿಷಯವನ್ನು ಸ್ಪಷ್ಟಪಡಿಲು ಇಚ್ಛಿಸುತ್ತೇನೆ. ಕೆಲವು ಕಟ್ಟಾ ಭಾರತೀಯರು ಭಾರತದಲ್ಲಿ ಎಲ್ಲಾ ವಿಷಯಗಳಲ್ಲೂ ಪರಿಣತಿಯಿತ್ತೆಂದೂ ಮತ್ತು ಅದು ವೇದಗಳಲ್ಲೇ ಹೇಳಿದೆಯೆಂದೂ ಪ್ರತಿಪಾದಿಸುತ್ತಾರೆ. ಅವರು ಪುಷ್ಪಕವಿಮಾನಗಳು, ಎಂದರೆ ರೈಟ್ ಸಹೋದರರು ಕಂಡುಹಿಡಿದಂತಹ ವಿಮಾನಗಳು ನಮ್ಮಲ್ಲೇ ಇದ್ದುವೆಂದು ವಾದಿಸುತ್ತಾರೆ. ಅಥವಾ ಚರಕ ಶುಶ್ರುತರ ಅಯುರ್ವೇದದಲ್ಲಿ ಎಲ್ಲವೂ ಸಾಧ್ಯವಾಗಿತ್ತೆಂದೂ ಆದರೆ ಈಗ ಅದು ಮರೆತುಹೋಗಿದೆಯೆಂದೂ ಹೇಳತ್ತಾರೆ. ಇವು ಅವೈಜ್ಞಾನಿಕ ಊಹೆಗಳು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡೇ ವಾಸ್ತವಾಂಶಗಳನ್ನು ಮನಗಾಣಬೇಕು.

ತನ್ನದೇ ಆದ ಶಿಕ್ಷಣ ಪದ್ಧತಿಯನ್ನು ಕಳೆದುಕೊಂಡ ಭಾರತದ ಪರಿಸ್ಥಿತಿ ಸ್ವಾತಂತ್ರ್ಯ ಬಂದು ಅರ್ಧ ಶತಮಾನ ಮೀರಿದರೂ ಅಭಿವೃದ್ಧಿಯನ್ನು ಸಾಧಿಸಲಿಲ್ಲ. ಶಿಕ್ಷಣದಲ್ಲಿ ಮೂಲಭೂತ ಬದಲಾವಣೆಯನ್ನು ತರಲಾಗಲಿಲ್ಲ. ಆಯೋಗಗಳ ಮೇಲೆ ಆಯೋಗಗಳನ್ನು ರಚಿಸಿ ವರದಿಗಳನ್ನು ತರಿಸಿ ರೋಗ ಎಷ್ಟು ಉಲ್ಬಣವಾಗಿದೆ ಎಂದು ಗುರುತಿಸಿದ್ದಷ್ಟೇ ಲಾಭವಾಗಿದೆ. ಇದಕ್ಕೆ ಪರಿಹಾರ ಸಾಧ್ಯ ಎಂದು ಆಲೋಚಿಸುವವರೇ ಕಂಡುಬರುತ್ತಿಲ್ಲ. ಸಮಸ್ಯೆ ಬೃಹದಾಕಾರವಾಗಿ ಬೆಳೆದಷ್ಟೂ ಪರಿಹಾರ ತನ್ನ **ಸ್ವಾಭಾವಿಕ ಪಥವನ್ನು ಅನುಸರಿಸಲಿ** ಎಂದು ಹೇಳಿ ಕೈಚೆಲ್ಲಿ ಕುಳಿತುಬಿಡುವ ಸ್ವಭಾವ ಸಾಮಾನ್ಯವಾಗಿ ಎಲ್ಲರಿಗೂ ಬಂದುಬಿಡುತ್ತದೆ. ನಮ್ಮ ಪರಿಸ್ಥಿತಿಯೂ ಹಾಗೆ. ಇಂದಿನ ಶಿಕ್ಷಣದಲ್ಲಿ ಆಗಬಹುದಾದ ಕ್ರಾಂತಿ ಕ್ಷಿಪ್ರ ಬದಲಾವಣೆಗಳ ಸರಣಿ ಅಲ್ಲ. ಬಹಳಕಾಲ ಎಲ್ಲರೂ ಒಟ್ಟಾಗಿ ಶ್ರಮಿಸಬೇಕಾದ ವಿಷಯ. ಮೊದಲು ಜನಸಂಖ್ಯಾ ನಿಯಂತ್ರಣ, ಪರಿಸರ ಸಂರಕ್ಷಣೆಗಳು ನಮ್ಮ ಅಭಿವೃದ್ಧಿಯ ಆದ್ಯತೆಗಳಾಗಬೇಕು. ಶಿಕ್ಷಣ ಇದಕ್ಕೆ ಪೂರಕವಾಗಬೇಕು. ಆರೋಗ್ಯಕರ ಜೀವನದೃಷ್ಟಿಯನ್ನು ರೂಪಿಸುವ ಮೂಲಕ ಶಿಕ್ಷಣ ನಮ್ಮ ಮೂಲಭೂತ ಸಮಸ್ಯೆಗಳಿಗೆ ಪರಿಹಾರ ಕೊಡಬಲ್ಲದು. ಇಂದು ಇಡೀ ದೇಶ ಕೆಟ್ಟ ಟ್ರಾಫಿಕ್ ಜಾಮ್‌ನಲ್ಲಿ ಸಿಕ್ಕಿಕೊಂಡಂತೆ ದಾರಿಗಾಣದೆ ಚೀರಾಡುತ್ತಿದೆ. ಯಾವುದೋ ಒಂದು ಕಗ್ಗಂಟನ್ನು ಬಿಡಿಸಿದರೆ ಉಳಿದ್ದದೆಲ್ಲಾ ಸಲೀಸಾಗಿ ಸಾಗುವಂತೆ ಶಿಕ್ಷಣದ ಕೆಲವು ಕಗ್ಗಂಟುಗಳನ್ನು ನಾವು ಸರಿಯಾಗಿ ಅರ್ಥ ಮಾಡಿಕೊಳ್ಳಲೇಬೇಕು.

# ೬. ಮಾಹಿತಿ ಮತ್ತು ವಿವೇಕ

## ಬೇಡದ ಮಾಹಿತಿ, ಕೈಗೆಟುಕದ ವಿವೇಕ

Where is the life we have lost in living?

Where is the wisdom we have lost in knowledge?

Where is the knowledge we have lost in Information?

ಎಲಿಯಟ್ ಕವಿಯ ಈ ಸಾಲುಗಳನ್ನು ನೋಡಿದಾಗ ಎರಡು ಅಂಶಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಸಹಜವಾಗಿ ಬದುಕಬೇಕಾಗಿರುವ ಈ ಬದುಕನ್ನು ನಮ್ಮ ಕಲ್ಪನೆಯ ಚೌಕಟ್ಟಿಗೆ ಒಳಪಡಿಸಿ ಅದಕ್ಕೆ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಲೇ ನಾವು ನಿಜವಾದ ಬದುಕನ್ನು ಕಳೆದುಕೊಳ್ಳುತ್ತೇವೆ. ಸಹಜವಾದ ಬದುಕಿಗೆ ಬೇಕಾಗಿರುವುದು ವಿವೇಕವೇ ಹೊರತು ಮಾಹಿತಿಯಲ್ಲ. ಆದರೆ ನಮ್ಮ ಇಡೀ ಸಾಮಾಜಿಕ ಪರಿಸರ ಮಾಹಿತಿಯನ್ನೇ ಮುಂದುಮಾಡುತ್ತದೆ. ಏಕೆಂದರೆ ಅಸಾಧಾರಣ ಮಾಹಿತಿ ತನ್ನ ತುದಿನಾಲಗೆಯಲ್ಲೆ ಇದ್ದರೆ ಸುಲಭವಾಗಿ ಎಲ್ಲರನ್ನೂ ಮೀರಿನಿಲ್ಲಬಹುದು; ತನ್ನ ದೃಷ್ಟಿಕೋನವನ್ನು ರುಜುವಾತುಪಡಿಸಬಹುದು. ಇತರರು ದಂಗುಬಡಿದು ಸೋತು ತಲೆತಗ್ಗಿಸಿ ನಿಲ್ಲುವಂತೆ ಮಾಡಬಹುದು. ದಿನನಿತ್ಯದ ಜೀವನದಲ್ಲಿ ಈ ಬಗೆಯ ಮಾಹಿತಿ ಬೇಕಾಗುವುದು ಯಾವುದೋ ಅಪರೂಪದ ಸಂದರ್ಭದಲ್ಲಿ. ಇಂತಹ ಒಂದು ಕ್ಷುಲ್ಲಕ ಮಾಹಿತಿಗಾಗಿ ಇಡೀ ಬದುಕಿನ ಅಮೂಲ್ಯ ಸಮಯವನ್ನು ವಿನಿಯೋಗಿಸುತ್ತೇವೆ. ಮಾಹಿತಿ ಎನ್ನುವುದು ಮಾತ್ರ ನಾವು ಬದುಕಿಗಾಗಿ ನಡೆಸುವ ಸಿದ್ಧತೆ ಇಡೀ ಬದುಕನ್ನು ನಮ್ಮ ಕಲ್ಪನೆಯ ಬದುಕಿಗೆ ಸಿದ್ಧಪಡಿಸಿಕೊಳ್ಳುತ್ತಲೇ ಕಳೆದುಬಿಟ್ಟರೆ ಬದುಕುವುದಾದರೂ ಯಾವಾಗ? ಬದುಕಿನ ಸೌಂದರ್ಯವನ್ನು ಸಂತೋಷವನ್ನು ಸವಿಯುವುದು ಯಾವಾಗ? ಸ್ವಾಮಿ ವಿವೇಕಾನಂದರು ಹೇಳುವಂತೆ, ತಲೆಯಲ್ಲಿ ಆಜೀವಪರ್ಯಂತ ಪಚನವಾಗದೆ ಗದ್ದಲ ಎಬ್ಬಿಸುತ್ತದೆ. ಇಂತಹವರು ತಮ್ಮ ಮೃಗೀಯ ಸ್ವಭಾವಗಳಿಗೆ ಅನುಕೂಲವಾಗುವಂತೆ ಮಾಹಿತಿಯನ್ನು ಬಳಸಿಕೊಳ್ಳುತ್ತಾರೆ. 'ಕೋತಿ ತಾನು ಕೆಡೋದಲ್ಲದೆ ವನಾನೆಲ್ಲ ಕೆಡುಸ್ತು' ಎಂಬ ಗಾದೆಯಂತೆ ಇವರು ತಮ್ಮ ಸುತ್ತ ಸಹಜವಾಗಿ ಬದುಕುವವರನ್ನು ಕಕ್ಕಾಬಿಕ್ಕಿ ಮಾಡಿ ದಾರಿ ತಪ್ಪಿಸುತ್ತಾರೆ.

ತಂತ್ರಜ್ಞಾನವನ್ನು ಬಳಸಿ ಮಾಹಿತಿಯನ್ನು ಸಂಗ್ರಹಿಸಲು, ವರ್ಗೀಕರಿಸಲು, ಬಳಸಲು ಚುರುಕಾದ ಬುದ್ಧಿ ಇದ್ದರೆ ಸಾಕು. ಅದಕ್ಕೆ ವಿವೇಕ ಬೇಕಾಗಿಲ್ಲ. ನಿಜ ಹೇಳಬೇಕೆಂದರೆ ಚುರುಕು ಬುದ್ಧಿ ಇಲ್ಲದ ಮಂದಮತಿಯೊಬ್ಬನಿಗೆ ವಿವೇಕವೂ ಸಾಧ್ಯವಾಗುವುದಿಲ್ಲ. ವಿವೇಕ ಸಾಧ್ಯವಾಗುವುದು ಚುರುಕು ಬುದ್ಧಿಯ ಸಾತ್ತ್ವಿಕ ವ್ಯಕ್ತಿಗೆ. ಆದರೆ ಅವನು ಚುರುಕುಬುದ್ಧಿಯ ಚತುರತೆಯಿಂದಷ್ಟೇ ತೃಪ್ತನಾಗುವುದಿಲ್ಲ. ಅವನಿಗೆ ಸಿಗುವ 'ಅನುಸರಣೀಯ ಜೀವನಮಾದರಿ'ಗಳು ಮನುಷ್ಯನ ಮಾತುಗಾರಿಕೆಗಿಂತ ನಡವಳಿಕೆಯಲ್ಲಿ ಕಂಡುಬರುವ ವಿವೇಕದ ಮಹತ್ತ್ವವನ್ನು ಮನವರಿಕೆ ಮಾಡಿಕೊಡುತ್ತವೆ. 'ಅನುಸರಣೀಯ ಜೀವಂತ ಮಾದರಿ' ಎಂಬುದನ್ನು ಇಲ್ಲಿ ಒತ್ತಿ ಹೇಳಬೇಕು. ಏಕೆಂದರೆ ನಡವಳಿಕೆಯ ಜೀವಂತ ಮಾದರಿ ಮಾತ್ರ ಮತ್ತೊಬ್ಬರಲ್ಲಿ ಪ್ರೇರಣೆಯನ್ನು ಉಂಟುಮಾಡಲು ಸಾಧ್ಯ. ವಿವೇಕಯುತವಾದ ನಡವಳಿಕೆಯನ್ನು ಮನುಷ್ಯ ಕೇವಲ ಪುಸ್ತಕ ಓದಿ ಪಡೆಯುವುದು ಸಾಧ್ಯವಿಲ್ಲ. ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಹೇಳುತ್ತಾರೆ: "ನಿಜವಾದ ಅಧ್ಯಾಪಕ ಯಾರೆಂದರೆ ಅವನು ಏಕಾಏಕಿ ಮಗುವಿನ ಮಟ್ಟಕ್ಕೆ ಇಳಿದುಬಿಡುತ್ತಾನೆ; ತನ್ನ ಆತ್ಮವನ್ನು ಮಗುವಿನ ಆತ್ಮಕ್ಕೆ ವರ್ಗಾಯಿಸುತ್ತಾನೆ; ಮಗುವಿನ ಕಣ್ಣುಗಳ ಮೂಲಕ ನೋಡುತ್ತಾನೆ, ಮಗುವಿನ ಕಿವಿಗಳ ಮೂಲಕ ಕೇಳಿಸಿಕೊಳ್ಳುತ್ತಾನೆ, ಮಗುವಿನ ಮನಸ್ಸಿನ ಮೂಲಕ ಅರ್ಥ ಮಾಡಿಕೊಳ್ಳುತ್ತಾನೆ. ಇಂತಹ ಅಧ್ಯಾಪಕ ಮಾತ್ರ ಬೋಧಿಸಬಲ್ಲ."

ಈ ಬಗೆಯ ಸಂವಹನ ಯಾವ ಅಧ್ಯಾಪಕನಿಗೆ ಸಾಧ್ಯವಾಗುತ್ತದೆ? ಯಾವ ಅಧ್ಯಾಪಕನಿಗೆ ಮಗುವಿನ ಬಗ್ಗೆ ಪ್ರೀತಿ ಇದೆಯೋ, ಯಾವ ಅಧ್ಯಾಪಕನಿಗೆ ಈ ಬದುಕು ಕೇವಲ ಮಾಹಿತಿ ಸಂಗ್ರಹಿಸುವುದಲ್ಲ ಎಂಬ ಜ್ಞಾನ ಇದೆಯೋ, ಯಾವ ಅಧ್ಯಾಪಕನಿಗೆ ವಿವೇಕ ಉಂಟಾಗಿದೆಯೋ ಅಂತಹ ಅಧ್ಯಾಪಕನಿಗೆ ಮಗುವನ್ನು ಪ್ರೀತಿಸುವ ಶಕ್ತಿಯೂ ಇರುತ್ತದೆ. ವ್ಯಕ್ತಿಯೊಬ್ಬ ಸ್ವತಂತ್ರ ವ್ಯಕ್ತಿತ್ವವನ್ನು ಗಳಿಸಿದರೆ ಮಾತ್ರ ಪ್ರೀತಿಸುವ ಶಕ್ತಿ ಹುಟ್ಟುತ್ತದೆ. ಸ್ವತಂತ್ರ ವ್ಯಕ್ತಿತ್ವ ಎಂದರೆ ಕೇವಲ ಅಭಿಪ್ರಾಯಗಳನ್ನು ಪ್ರಖರವಾಗಿ ಮಂಡಿಸಬಲ್ಲ ವ್ಯಕ್ತಿಯಲ್ಲ. ತನ್ನೊಳಗಿನ ನೇತ್ಯಾತ್ಮಕ ಶಕ್ತಿಗಳ ಗುಲಾಮಗಿರಿಯಿಂದ ಪಾರಾಗಿರುವವನು ಎಂದು ಅರ್ಥ. ಇಂತಹ ಮನುಷ್ಯನಿಗೆ ಮಗುವಿನೊಡನೆ ಗಾಢವಾದ ಸಂಬಂಧವನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ಇದು ಬಹಳ ಕಷ್ಟಸಾಧ್ಯ ಎನ್ನುವ ಕಾರಣದಿಂದಲೇ ಆಸ್ಕರ್‌ವೈಲ್ಡ್ ಮಹಾಶಯ ಹೇಳುತ್ತಾನೆ **'ಕಲಿಯಲು ಯೋಗ್ಯವಾದ ಯಾವುದನ್ನೂ ಬೋಧಿಸಲು ಸಾಧ್ಯವಿಲ್ಲ'**. ನಿಜವಾದ ಶಿಕ್ಷಕನಲ್ಲಿ ಈ 'ಅಂತರ್ ಗ್ರಹಿಕೆ' ಇರುತ್ತದೆ. ಅವನಿಗೆ ಮಗುವಿನ ಮನದಾಳಕ್ಕಿಳಿದು ಅದರೊಡನೆ ಒಂದಾಗುವ ಕಲೆ ಗೊತ್ತಿದೆ. ಜೈನಧರ್ಮದಲ್ಲಿ ಇದನ್ನು 'ಮನಃ ಪರ್ಯಯ ಜ್ಞಾನ' ಎಂದು ವರ್ಣಿಸಲಾಗಿದೆ. ಅಂದರೆ ಇನ್ನೊಬ್ಬರ ಅಂತರಾಳಕ್ಕೆ ಇಳಿದು ವಿದ್ಯಮಾನವನ್ನು ಗ್ರಹಿಸಬಲ್ಲ ಶಕ್ತಿ.

## ಮನುಷ್ಯರಿಗಾಗಿ ಯಂತ್ರಗಳಲ್ಲ, ಯಂತ್ರಗಳಿಗಾಗಿ ಮನುಷ್ಯರು!

ಕಂಪ್ಯೂಟರ್ ಯುಗದಲ್ಲಿ ಮಾಹಿತಿಯನ್ನು ನೆನಪಿನಲ್ಲೇ ಇಟ್ಟುಕೊಳ್ಳಬೇಕೆಂಬ ಅನಿವಾರ್ಯತೆಯೇನೂ ಇಲ್ಲ. ಕಂಪ್ಯೂಟರ್ ಬಳಸುವ ಕೌಶಲವೊಂದಿದ್ದರೆ ಎಲ್ಲ ಮಾಹಿತಿಯನ್ನು ಕ್ಷಣಾರ್ಧದಲ್ಲೇ ತರಿಸಿಕೊಳ್ಳಬಹುದು. ಎಂದರೆ ಮಾಹಿತಿಯ ಮೂಲಗಳನ್ನು ಅರಿತಿದ್ದರೆ ಸಾಕು. ಮಾಹಿತಿ–ಕೌಶಲಗಳು ಕೈವಶವಾದರೆ ಮನುಷ್ಯ ಪ್ರತಿಯೊಂದಕ್ಕೂ ಯಂತ್ರಗಳನ್ನು ಅವಲಂಬಿಸುತ್ತ ದುರ್ಬಲನಾಗುತ್ತಾನೆ. ಜೊತೆಗೆ ಹೆಚ್ಚು ಉತ್ಪಾದನೆಯ ಗೀಳು ಹಿಡಿಯುತ್ತದೆ. ಕೈಗಾರಿಕಾ ಯುಗದ ಮೊದಲ ದಿನಗಳಲ್ಲೇ ಈ ಆತಂಕ ಕಾಣಿಸಿಕೊಂಡಿತು. ಚಾರ್ಲಿ ಚಾಪ್ಲಿನ್ ತನ್ನ ಮಾಡರ್ನ್ ಟೈಮ್ಸ್ ಎಂಬ ಚಲನಚಿತ್ರದಲ್ಲಿ ಬೇಗ ಬೇಗ ಊಟ ಮಾಡಿಸುವ ಯಂತ್ರವೊಂದನ್ನು ತಂದು ಫ್ಯಾಕ್ಟರಿ ಕೆಲಸಗಾರರು ಸಮಯ ಉಳಿತಾಯ ಮಾಡಬಹುದೆಂಬ ಹಾಸ್ಯ ಪ್ರಸಂಗವನ್ನು ತೋರಿಸುತ್ತಾನೆ. ಹೀಗೆ ಉಳಿತಾಯ ಮಾಡಿದ ಸಮಯದಲ್ಲಿ ಮತ್ತಷ್ಟು ಉತ್ಪಾದನೆ ಮಾಡಬಹುದೆಂದು ಒಂದು ವಿಲಕ್ಷಣ ವಾದವನ್ನು ಮುಂದಿಡುವ ಯಂತ್ರಪರಿಣತ ಕೊನೆಗೆ ವಿಫಲನಾಗಿ ಹೊರಟುಹೋಗುತ್ತಾನೆ. ಹೆಚ್ಚು ಉತ್ಪಾದನೆಗಾಗಿ ಯಂತ್ರಗಳೇ ಪ್ರಧಾನವಾಗಿ ಮನುಷ್ಯನೇ ಕಳೆದುಹೋಗುತ್ತಿದ್ದಾನೆ. ಮನುಷ್ಯನಿಗಾಗಿ ಯಂತ್ರಗಳು ಎಂದು ಪ್ರಾರಂಭವಾಗಿ ಕೊನೆಗೆ ಯಂತ್ರಗಳಿಗಾಗಿ ಮನುಷ್ಯರು ಎನ್ನುವ ಹಂತ ತಲುಪುತ್ತಿದ್ದೇವೆ. 'ಟರ್ಮಿನೇಟರ್'ನಂತಹ ಇತ್ತೀಚಿನ ಸಿನಿಮಾದಲ್ಲಿ ಯಂತ್ರಗಳು ಎಂದರೆ ರೋಬೋಗಳು ಭಸ್ಮಾಸುರನಿಗೆ ಕೊಟ್ಟ ವರದಂತೆ ತಮ್ಮ ಜನಕ 'ಮನುಷ್ಯ'ನನ್ನು ನಿರ್ವಂಶ ಮಾಡಲು ಪ್ರಯತ್ನಿಸುವ ಒಂದು ವಿಲಕ್ಷಣ ಸ್ಥಿತಿಯನ್ನು ಚಿತ್ರಿಸಲಾಗಿದೆ. ಯಂತ್ರಗಳಿಗಿಂತ ಯಂತ್ರಗಳನ್ನು ತಯಾರು ಮಾಡುವ ಮನುಷ್ಯ ಮುಖ್ಯ ಎಂಬ ಸಂದೇಶವನ್ನು ಮಕ್ಕಳಿಗೆ ತಲುಪಿಸುವಲ್ಲಿ ನಮ್ಮ ಶಿಕ್ಷಣ ವಿಫಲವಾಗಿದೆ. ಇದು ಶಿಕ್ಷಣದ ದೊಡ್ಡ ದುರಂತ.

ಈ ಸಂದರ್ಭದಲ್ಲಿ ಶಿಕ್ಷಣ ಹಕ್ಕು ಕಾಯ್ದೆಯ ಪರಿಣಾಮವನ್ನು ಅರಿಯುವುದು ಮುಖ್ಯ. ಶಿಕ್ಷಣ ಹಕ್ಕು ಕಾಯ್ದೆ ಜಾಗತೀಕರಣ ಪ್ರಣೀತ ಶಿಕ್ಷಣವನ್ನಷ್ಟೇ ಸಾರ್ವತ್ರೀಕರಣಗೊಳಿಸುತ್ತಿದೆ. ಈ ಕಾಯ್ದೆ ಪರ್ಯಾಯ ಶಾಲೆಗಳಿಗೆ ಅವಕಾಶ ಕೊಡುವುದಿಲ್ಲ. ಶಿಕ್ಷಣದ ಎಲ್ಲ ಪ್ರಯೋಗಗಳನ್ನೂ ನಿಷೇಧಿಸುವ ಈ ಕಾಯ್ದೆ ಶಿಕ್ಷಣದ ಯಾವ ಹೊಸ ಸಾಧ್ಯತೆಗಳನ್ನೂ ಹುಡುಕದಂತೆ ನಿರ್ಬಂಧಿಸಿರುವುದು ಎಷ್ಟು ಸರಿ? ಈ ಕಾಯ್ದೆಯಿಂದಾಗಿ ಸಮಾನ ಶಾಲಾವ್ಯವಸ್ಥೆಯನ್ನೂ ಸಾಧಿಸಲಾಗಿಲ್ಲ. ಮುಚ್ಚುತ್ತಿರುವ ಸರ್ಕಾರಿ ಶಾಲೆಗಳ ನಡುವೆ ವ್ಯಾಪಾರಿ ಉದ್ದೇಶದ ಖಾಸಗಿ ಸಂಸ್ಥೆಗಳು ಶಾಲಾಶಿಕ್ಷಣವನ್ನು ಹಿಂದೆಂದಿಗಿಂತಲೂ ಹೆಚ್ಚಿನ ಲಾಭದಾಯಕ ಉದ್ಯಮವನ್ನಾಗಿ ಬೆಳೆಸುತ್ತಿವೆ.

## ಯಂತ್ರ-ತಂತ್ರಜ್ಞಾನ ತಂದೊಡ್ಡುವ ಆತಂಕ

ಅತಿಯಾದ ತಂತ್ರಜ್ಞಾನ ಮನುಷ್ಯ ಸಂಬಂಧಗಳನ್ನು ಹದಗೆಡಿಸುತ್ತದೆ. ಮನುಷ್ಯನ ಮೋಸದ ಬುದ್ಧಿಗೆ ಪೂರಕವಾಗಿ ತಂತ್ರಜ್ಞಾನ ಕೆಲಸ ಮಾಡಬಹುದಾದ ಸಾಧ್ಯತೆಯಿದೆ. ಹಾಗಾಗಿ ಮೋಸಗಾರನೊಬ್ಬ ತನ್ನ ತಂತ್ರಜ್ಞಾನ ಪರಿಣತಿಯನ್ನು ಬೆಳೆಸಿಕೊಂಡು ಇತರರಿಗೆ ಮೋಸ ಮಾಡಿ ತಾನು ಸದಾ ಕಾಲವೂ ಲಾಭದಾಯಕ ಸ್ಥಾನದಲ್ಲಿ ಉಳಿದುಕೊಳ್ಳಬಹುದು. ಕುಟಿಲೋಪಾಯಗಳಿಂದ ತಂತ್ರಜ್ಞಾನವನ್ನು ಬಳಸಿ ಸರಳ ಮನುಷ್ಯರನ್ನು ಮೋಸಪಡಿಸಬಹುದು; ಹಾಗಾಗಿ ಈ ಮೊಸಕ್ಕೆ ಒಳಗಾಗದಂತೆ ತಮ್ಮನ್ನು ತಾವು ಕಾಪಾಡಿಕೊಳ್ಳುವುದೇ ಜನಸಾಮಾನ್ಯರಿಗೆ ಒಂದು ದೊಡ್ಡ ಸಾಹಸವಾಗಿಬಿಡುತ್ತದೆ. ನಾಗರಿಕತೆ ಮುಂದುವರಿದಂತೆಲ್ಲಾ ಮನುಷ್ಯರು ತಂತ್ರಜ್ಞಾನದ ಮೋಸದಿಂದ ಪಾರಾಗಲು, ದಾಖಲೆಗಳನ್ನು ರಕ್ಷಿಸಲು ಬಹಳ ಹೆಣಗಾಡಬೇಕಾಗುತ್ತದೆ. ಬಹುಶಃ ಈ ನಾವು ಯಾವ ಆನಂದದಿಂದ ಬದುಕು ಕಳೆಯುವ ಸಮಯಕ್ಕಿಂತ ಹೆಚ್ಚಾಗಿಯೇ ಇರಬಹುದೇನೋ? ಇಂದಿನ ಮೋಸದ ಆಟಗಳು ಹಿಂದಿನ ಅಕ್ಬರ್-ಬೀರಬಲ್ ಕಥೆಗಳಲ್ಲಿ ಕಂಡು ಬರುವ ಮೋಸದಾಟಗಳಷ್ಟು ಸರಳವಲ್ಲ. ಬೀರ್‌ಬಲ್ ತನ್ನ ಬುದ್ಧಿಶಕ್ತಿಯಿಂದ ಮೋಸಗಾರರ ಮೋಸವನ್ನು ಹೊರಗೆಡಹುತ್ತಿದ್ದ. ಆದರೆ ಇಂದಿನ ಪರಿಸ್ಥಿತಿಯೇ ಬೇರೆ. ಸತ್ಯವನ್ನು ಬಹಿರಂಗಪಡಿಸುವುದಕ್ಕಿಂತ ಸುಳ್ಳನ್ನು ಮುಚ್ಚಿಡುವುದರಲ್ಲಿ ತಂತ್ರಜ್ಞಾನ ಹೆಚ್ಚು ಶಕ್ತಿಶಾಲಿಯಾಗಿದೆ. ಏಕೆಂದರೆ ಈ ತಂತ್ರಜ್ಞಾನ ಬೆಳೆದುಬಂದಿರುವುದೇ ಅರ್ಧ ಸತ್ಯವನ್ನು ಹೇಳುವ ಮನಸ್ಸುಗಳ ನಡುವೆ. ಹಾಗಾಗಿ ಈ ತಂತ್ರಜ್ಞಾನದ ಉಪಯೋಗ ಸತ್ಯವನ್ನು ಬಚ್ಚಿಡುವವರಿಗೆ ಹೆಚ್ಚಾಗಿ ಆಗುತ್ತದೆಯೇ ಹೊರತು "ಸತ್ಯಕಾಗಿ ನಿಲುವ ಛಲವ ದೀಪ್ತಗೊಳಿಸು ಎನ್ನೊಳು" ಎಂದು ಅದು ಹೇಳುವುದೇ ಇಲ್ಲ.

ತಂತ್ರಜ್ಞಾನದ ನೆರಳಿನಲ್ಲಿ ಮೋಸ ಮಾಡುವುದನ್ನೇ ವೃತ್ತಿ ಮಾಡಿಕೊಂಡಿರುವ ವೃತ್ತಿಪರ ಮೋಸಗಾರರ ನಡುವೆ ನಾವು ಇರುವಾಗ ಮನುಷ್ಯ ಸಂಬಂಧಗಳು ಕೆಡದೆ ಏನು? ಪ್ರತಿ ನಿಮಿಷವೂ ಸರಳರಾದ ಜನ ತಾವು ಹೇಗೆ, ಯಾವಾಗ ಮೋಸ ಹೋಗಬಹುದೋ ಎಂಬ ಆತಂಕದಲ್ಲಿ ತೊಳಲಬೇಕಾದ ಪರಿಸ್ಥಿತಿ ಉಂಟಾಗಿದೆ. ಈ ಆತಂಕದಿಂದಾಗಿ ಎಲ್ಲರೂ ಉಳಿದ ಎಲ್ಲರನ್ನೂ ಅನುಮಾನ ದೃಷ್ಟಿಯಿಂದ ನೋಡುವಂತಾಗುತ್ತದೆ. 'ಯಾವ ಹುತ್ತದೊಳಗೆ ಯಾವ ಹಾವೋ' ಎಂದು ಭ್ರಮಿಸುತ್ತ ಎಲ್ಲರೂ ತಮಗೆ ಬೇಕಾದ ಸತ್ಯವನ್ನು ರುಜುವಾತುಪಡಿಸಲು ಅಗತ್ಯ ದಾಖಲೆಗಳನ್ನು ಸಂಗ್ರಹಿಸಿಟ್ಟುಕೊಂಡು ಕಾಪಾಡಿಕೊಳ್ಳಬೇಕಾಗುತ್ತದೆ. ಈ ತಂತ್ರಜ್ಞಾನ ಅವಲಂಬಿತ ಬದುಕು ಎಷ್ಟು ಜಟಿಲವಾಗುತ್ತ ಹೋಗುತ್ತದೆ ಎಂದರೆ ಮನುಷ್ಯ ಬದುಕುವುದಕ್ಕಿಂತ ಬದುಕಲು ಬೇಕಾದ ತಂತ್ರಜ್ಞಾನದ ಸಿದ್ಧತೆಗಳಲ್ಲೆ ಬದುಕನ್ನು ಕಳೆಯಬೇಕಾಗುತ್ತದೆ.

ಇಂತಹ ಒಂದು ಪರಿಸ್ಥಿತಿಯಲ್ಲಿ ಪ್ರೀತಿಯ ಸಂಬಂಧಗಳಿಗಿಂತ ವಸ್ತುಸಂಬಂಧಿ ದಾಖಲೆಗಳು ಬಹುಮುಖ್ಯವಾಗುತ್ತವೆ. ಪರಸ್ಪರ ನಂಬಿಕೆ, ವಿಶ್ವಾಸಗಳು ಕಾಣೆಯಾಗುತ್ತವೆ.

ತಾಯಿ–ಮಕ್ಕಳ ಸಂಬಂಧಗಳು ತಂದೆ–ಮಕ್ಕಳ ಸಂಬಂಧಗಳು ಅಷ್ಟೇ ಏಕೆ ಆತ್ಮೀಯ ಸ್ನೇಹಿತರ ಸಂಬಂಧಗಳೂ ಕೂಡ ವಿಷಸರ್ಪದ ಸಂಬಂಧವೋ ಎಂಬಂತೆ ಆತಂಕವನ್ನುಂಟುಮಾಡುತ್ತವೆ. ಅದರಲ್ಲೂ ವ್ಯಕ್ತಿಗಳು ಆರ್ಥಿಕವಾಗಿಯೋ ಅಧಿಕಾರದ ವಿಷಯದಲ್ಲೋ ಸಧೃಡರಾಗಿದ್ದಾರೆ ಎನ್ನುವುದಾದರೆ ಅವರ ಜೊತೆಗಿನ ಸಂಬಂಧಗಳು ತರಬಹುದಾದ ತೊಂದರೆಗಳಿಂದ ತಮ್ಮನ್ನು ತಾವು ಕಾಪಾಡಿಕೊಳ್ಳಲು ಶ್ರೀಸಾಮಾನ್ಯರು ಹೆಣಗಾಡಬೇಕಾಗುತ್ತದೆ. ತಂತ್ರಜ್ಞಾನದ ಸಾಧ್ಯತೆಗಳು ಈ ಆತಂಕಗಳನ್ನು ಹೆಚ್ಚಿಸುತ್ತಲೇ ಹೋಗುತ್ತವೆ.

ಹಣ ಅಧಿಕಾರಗಳಿಲ್ಲದ ಜನರೂ ಈ ಬಗೆಯ ಭಾವನಾಸರಣಿಗಳನ್ನು ತಮ್ಮ ತಮ್ಮ ಪರಿಮಿತಿಯಲ್ಲಿ ಅನುಕರಿಸಲು ಪ್ರಯತ್ನಿಸುತ್ತಾರೆ. ಕಳೆದುಕೊಳ್ಳುವಂತಹದು ಏನೂ ಇಲ್ಲದಿದ್ದರೂ 'ಸಮರ್ಥರು' ಅಂತಹ ಒಂದು ಆಟವನ್ನು ಆಡುವಾಗ ತಾವೇಕೆ ಅದರ ನಕಲಿ ಅನುಕರಣೆಯನ್ನಾದರೂ ಮಾಡಬಾರದು? ಹೀಗೆ ಬಲಾಢ್ಯವಾದದ್ದು ಯಾವಾಗಲೂ ಅನುಸರಣೀಯ ಎಂದು 'ನವಿಲುಪುಕ್ಕ ತೆರೆದುಕೊಂಡರೆ ಕೆಂಬೂತವು ತೆರೆದುಕೊಂಡಿತು' ಎಂಬಂತೆ ಬಡವರು ಈ ಜಾಡ್ಯವನ್ನು ಅನುಕರಿಸುತ್ತಾರೆ. ಹೀಗೆ ತಂತ್ರಜ್ಞಾನದ ಸಾಧ್ಯತೆಗಳು ಮನುಷ್ಯಸಂಬಂಧಗಳನ್ನು ನಿಷ್ಕಾರಣವಾಗಿ ಹದಗೆಡಿಸುತ್ತವೆ.

ಮನುಷ್ಯ ವಿವೇಕವನ್ನು ಗಳಿಸಿಕೊಂಡಾಗ ಮಾತ್ರ ಸರಳ ಬದುಕು ಸಾಧ್ಯವಾಗುತ್ತದೆ. ಅತಿಯಾದ ಮಾಹಿತಿತಂತ್ರಗಳಲ್ಲೇ ಲೋಲುಪರಾದ ಜನ ಉಪಕರಣಗಳ ಮೇಲೆ ಉಪಕರಣಗಳನ್ನು ಕೊಂಡು ಮಕ್ಕಳು ತಮ್ಮ ಆಟಿಕೆಗಳ ಜೊತೆಯಲ್ಲಿ ಆಟ ಆಡುವಂತೆ ಆಡುತ್ತಿದ್ದಾರೆ. ಒಂದು ವ್ಯತ್ಯಾಸವೆಂದರೆ ಈ ಬುದ್ಧಿವಂತರು ತಾವು ಬಳಸುತ್ತಿರುವ ಉಪಕರಣಗಳು ಹೇಗೆ ತಮ್ಮ ಸಮಯ ಉಳಿತಾಯ ಮಾಡುತ್ತಿವೆ, ಹೆಚ್ಚಿನ ನಿಖರತೆಯನ್ನು ತಂದುಕೊಡುತ್ತಿವೆ, ಹಣ ಉಳಿತಾಯ ಮಾಡುತ್ತಿವೆ ಹೀಗೆ ಅನೇಕ ವಾದಗಳನ್ನು ಮಂಡಿಸುತ್ತಾರೆ. ಅಪಕ್ವ ಮನಸ್ಸಿನ ಆಟವಾಡುವ ಆಸೆಗೆ ಉಪಕರಣಗಳನ್ನು ಒದಗಿಸಿ ಅದನ್ನು ಸಮರ್ಥಿಸುವ ಸರ್ಕಸ್‌ಗಳಲ್ಲಿ ತೊಡಗುತ್ತಾರೆ. ಇದೇ ಮನಸ್ಸು ಪಕ್ವವಾದಾಗ ಈ ಜನ ತಮ್ಮ ಈ ಬಗೆಯ ಸಮರ್ಥನೆಗಳನ್ನು ಕುರಿತು ತಾವೇ ನಗಬೇಕಾಗುತ್ತದೆ. ಯಾವ ಯಂತ್ರ, ಯಾವ ಉಪಕರಣ ತನಗೆ ಅಗತ್ಯ ಎಂಬುದನ್ನು ಒಬ್ಬ ಮನುಷ್ಯ ತನ್ನ ವಿವೇಕದ ಸಹಾಯದಿಂದ ತನಗೆ ತಾನೇ ನಿರ್ಧರಿಸಬೇಕು. ಒಂದು ವೇಳೆ ಈ ವಿವೇಕ ಹುಟ್ಟದೆ ಇದ್ದರೆ ಆಟವಾಡುತ್ತ ಕಾಲ ಕಳೆಯುವ ಆಸೆ ಹೋಗುವುದೇ ಇಲ್ಲ. ಕೆಲವು ಕೌಶಲಗಳು ಅದ್ಭುತವಾಗಿ ಕಂಡರೂ ಮೂಲಭೂತವಾಗಿ ಅವು ಬದುಕಿಗೆ ಯಾವುದೇ ರೀತಿಯಲ್ಲೂ ಸಂಬಂಧಿಸುವುದಿಲ್ಲ. ಇಂತಹ ಕೌಶಲಗಳ ಕುರಿತು ನಮ್ಮ ಪುರಾಣಗಳಲ್ಲೂ ಉಲ್ಲೇಖಗಳಿವೆ. ಉದಾಹರಣೆಗೆ ನಳಮಹಾರಾಜನ ಕತೆಯಲ್ಲಿ ಬರುವ ಋತುಪರ್ಣರಾಜ ಒಂದು ಮರದಲ್ಲಿ ಎಷ್ಟು ಎಲೆಗಳಿವೆ ಎಂಬುದನ್ನು ಮರ ನೋಡಿ ಕ್ಷಣಾರ್ಧದಲ್ಲಿ ಹೇಳಿಬಿಡುತ್ತಿದ್ದ. ಆದರೆ ಯಾವ ಮರದಲ್ಲಿ ಎಷ್ಟು ಎಲೆ ಇದೆ ಎಂಬುದನ್ನು ತಿಳಿದು

ಬದುಕಿಗೆ ಆಗಬೇಕಾದ್ದೇನು? ಹಾಗೆ ನೋಡಿದರೆ ವಾಯುವೇಗದಿಂದ ರಥ ನಡೆಸುವ ನಳಮಹಾರಾಜನ ಕೌಶಲ ಬದುಕಿಗೆ ಸಂಬಂಧಿಸಿದ್ದು. ಕೊನೆಯ ಪಕ್ಷ ನಮ್ಮ ಪ್ರಯಾಣವನ್ನು ಇದು ಸುಗಮಗೊಳಿಸುತ್ತದೆ. ಆದರೆ ಋತುಪರ್ಣರಾಜನ ಎಲೆ ಎಣಿಸುವ ವಿದ್ಯೆ ಅದ್ಭುತವಾದರೂ ಅದರಿಂದ ಉಪಯೋಗವೇನು? ಎಷ್ಟೋ ವೇಳೆ ಹೀಗೆ ಕೌಶಲಗಳನ್ನು ಪಡೆದ ನಂತರ ಅದರ ಉಪಯುಕ್ತತೆಯ ಬಗ್ಗೆ ಕಷ್ಟಪಟ್ಟು ಸಮರ್ಥನೆ ನೀಡುವ ಪ್ರಯತ್ನ ನಡೆಯುತ್ತದೆ.

**ವಿನಾಶಕಾರಿ ಮನಸ್ಸು ಮತ್ತು ಶಿಕ್ಷಣ**

ಕೇವಲ ಪುಸ್ತಕಜ್ಞಾನ ಹೆಚ್ಚಾದಂತೆ ಮನುಷ್ಯನ ವಿನಾಶಕಾರಿ ಶಕ್ತಿಯೂ ಹೆಚ್ಚುತ್ತಿದೆ. ಮಾರ್ಟಿನ್ ಲೂಥರ್ ಕಿಂಗ್ ಅವರ ಮಗ ಹೇಳುತ್ತಿದ್ದ ಮಾತು, 'Guided missiles in the hands of misguided people' ನಮ್ಮ ಪುಸ್ತಕಶಿಕ್ಷಣದ ಪರಿಣಾಮ! ನಾವು ಗಳಿಸುವ ಜ್ಞಾನ ನಮ್ಮನ್ನು ವಿನಾಶಕಾರಿಯಾಗಿ ಮಾಡುತ್ತಿರುವುದೇಕೆ? ಈ ಪುಸ್ತಕಜ್ಞಾನ ಮನುಷ್ಯನನ್ನು 'ಬಹುಜನ ಹಿತಾಯ ಬಹುಜನ ಸುಖಾಯ' ವಾಗಿ ಮಾಡುವುದಿಲ್ಲವೇಕೆ? ಈ ಸಂದರ್ಭದಲ್ಲಿ **ಈಶೋಪನಿಷತ್ತಿನ** ಮಾತು ನೆನಪಿಗೆ ಬರುತ್ತದೆ. ಅದರ ಒಂದು ಶ್ಲೋಕದ ಅರ್ಥ ಹೀಗಿದೆ. "ಯಾರು ಅವಿದ್ಯೆಯನ್ನು ಉಪಾಸನೆ ಮಾಡುವರೊ ಅವರು ಕುರುಡುಗತ್ತಲೆಯನ್ನು ಪ್ರವೇಶಿಸುವರು. ಯಾರು ವಿದ್ಯೆಯಲ್ಲೆ ನಿರತರಾಗಿರುವರೊ ಅವರು ಅದಕ್ಕಿಂತ ಹೆಚ್ಚಿನ ಕತ್ತಲೆಯನ್ನು ಪ್ರವೇಶಿಸುವರು". ಈ ಮಾತಿಗೆ ಇಂದಿನ ಸಂದರ್ಭದಲ್ಲಿ ಕೊಡಬಹುದಾದ ಒಂದು ವ್ಯಾವಹಾರಿಕ ವ್ಯಾಖ್ಯಾನವೆಂದರೆ ಯಾರು ಔಪಚಾರಿಕ ಶಿಕ್ಷಣವನ್ನು ಇನ್ನೂ ಪ್ರವೇಶಿಸಿಯೇ ಇಲ್ಲವೊ ಅವರು ಅಂಧಕಾರದಲ್ಲೇ ಇರುತ್ತಾರೆ. ಆದರೆ ಯಾರು ಔಪಚಾರಿಕ ಶಿಕ್ಷಣವನ್ನು ಪಡೆದಿರುತ್ತಾರೋ ಅವರು ಇದಕ್ಕಿಂತ ಹೆಚ್ಚಿನ ಕತ್ತಲೆಯಲ್ಲಿ ಮುಳುಗಿರುತ್ತಾರೆ! ಈ ಈರ್ವರಲ್ಲಿ ಎರಡನೆಯವರು ಹೆಚ್ಚು ಅಪಾಯಕಾರಿ. ಏಕೆಂದರೆ ಈ ಎರಡನೆಯ ಬಗೆಯ ಜನರು ವಿದ್ಯೆಯನ್ನು ಕಲಿತು ಸರಿ ತಪ್ಪುಗಳ ನಿಷ್ಕರ್ಷೆಯನ್ನು ಬಲ್ಲವರಾದರೂ ತಮ್ಮ ಕೃತಿಯಲ್ಲಿ ತಮಗೆ ಲಾಭದಾಯಕವಾದದ್ದನ್ನೇ ಮಾಡುತ್ತಾರೆ ಅಥವಾ ಸರಿಯಾದದ್ದು ತಮ್ಮ ಪ್ರವೃತ್ತಿಗೆ ಆಪ್ಯಾಯಮಾನವಾಗಿಲ್ಲ ಎಂಬ ಕಾರಣಕ್ಕೆ ಅದನ್ನು ಬಿಟ್ಟು ತಮಗೆ ಬೇಕಾದದ್ದನ್ನು ಎತ್ತಿಹಿಡಿಯುತ್ತಾರೆ. ಇದು ಪ್ರಾಮಾಣಿಕತೆಯ, ಆತ್ಮಸಾಕ್ಷಿಯ ಪ್ರಶ್ನೆ. ಔಪಚಾರಿಕ ಶಿಕ್ಷಣ ಈ ಆತ್ಮಸಾಕ್ಷಿಯನ್ನು ಎಚ್ಚರಿಸದಾಗಿದೆ. ಈ ದ್ವಂದ್ವವನ್ನು ಉಪನಿಷತ್ತುಗಳ ಕಾಲದಿಂದಲೂ ಗುರುತಿಸಲಾಗುತ್ತಿದೆ. ಮನಸ್ಸಿಗೆ ಸತ್ಯ ಗೋಚರಿಸಿದರೂ ಅದನ್ನು ಪಕ್ಕಕ್ಕೆ ತಳ್ಳಿ ತನ್ನ ಪಶುಪ್ರವೃತ್ತಿಗೆ ಪೂರಕವಾದದ್ದನ್ನು ಕಾರ್ಯಗತಗೊಳಿಸುವ ಮನಸ್ಸಿನ ಈ ಇಬ್ಬಂದಿತನ ಮನುಷ್ಯನ ಸತ್ಯನಿಷ್ಠೆ ಕಂಟಕವಾಗಿದೆ. ಆದ್ದರಿಂದ ಉಪನಿಷತ್ತುಗಳ ಕಾಲದಿಂದಲೂ ಈ ಬಗೆಯ ಮಾತುಗಳು ಮೂಡಿಬಂದಿವೆ. ಕೊನೆಗೆ ಇದರ

ಅರ್ಥವೇನೆಂದರೆ ಶಿಕ್ಷಣ–ಮಾಹಿತಿ ತಂತ್ರಜ್ಞಾನವನ್ನು ಪಡೆದವನು ಹೆಚ್ಚು ದುರುಳನಾಗುತ್ತಾನೆ. ಅದನ್ನು ಬಳಸಬೇಕಾದ ಕಡೆ ಬಳಸುವ ಬದಲು ತನಗೆ ಲಾಭವಾಗುವ ರೀತಿ ಬಳಸುತ್ತಾನೆ ಅಥವಾ ತನ್ನ ವಿಕೃತ ವಿಚ್ಛಿದ್ರಕಾರಿ ಮನಸ್ಸಿನ ಸಂತೃಪ್ತಿಗೆ ಈ ಜ್ಞಾನವನ್ನು ಬಳಸುತ್ತಾನೆ. ಸಮೂಹದ ಕಗ್ಗೊಲೆಗೆ ತಯಾರಾಗುವ ಕ್ಷಿಪಣಿಗಳು ಹುಟ್ಟುವುದು ಈ ಬಗೆಯ ಜ್ಞಾನದಿಂದಲೇ. ಇದು ದೇಶಪ್ರೇಮದ ರೂಪವನ್ನೂ ತೊಡುತ್ತದೆ. ಗಾಂಧಿಯಂತಹ ವ್ಯಕ್ತಿ ಹುಟ್ಟಿದ ನಮ್ಮ ದೇಶದಲ್ಲಿ ಭಾರತರತ್ನ ಪ್ರಶಸ್ತಿಗಳು ಧಾರಾಳವಾಗಿ ಸಿಕ್ಕಿರುವುದು ಈ ಬಗೆಯ ಜ್ಞಾನಕ್ಕೆ ಎಂಬುದನ್ನು ನಾವು ಗಮನಿಸಬೇಕು. ಇಡೀ ಜಗತ್ತಿಗೆ ಅಹಿಂಸೆಯ ಮಾರ್ಗದರ್ಶನ ಮಾಡುತ್ತಿರುವ ನಾವು ಹಿಂಸಾತ್ಮಕ ಸಂಶೋಧನೆಗಳನ್ನು ಮನಸಾರೆ ಮೆಚ್ಚುತ್ತಿರುವುದು ಏನನ್ನು ಸೂಚಿಸುತ್ತದೆ? ಐನ್‌ಸ್ಟೈನ್ ಅವರು ತಮ್ಮ ಸಂಶೋಧನೆಯ ಪರಿಣಾಮವಾಗಿ ಹಿರೋಶಿಮಾ ನಾಗಸಾಕಿಯ ಮೇಲೆ ಬಾಂಬ್ ಬಿದ್ದಾಗ ಬಹಳವಾಗಿ ಪರಿತಪಿಸಿದರು. ಬಹುಶಃ ಅವರಿಗೆ ತಮ್ಮ ಸಂಶೋಧನೆ ಇಂತಹ ಪರಿಣಾಮವನ್ನುಂಟುಮಾಡುತ್ತದೆ ಎಂದು ತಿಳಿದಿದ್ದರೆ ಆ ಜ್ಞಾನವನ್ನು ಅವರು ಪ್ರಕಟಿಸುತ್ತಲೇ ಇರಲಿಲ್ಲವೋ ಏನೊ. ಕ್ಲೋನಿಂಗ್ ಟೆಕ್ನಾಲಜಿಯ ಬಗ್ಗೆ ಅಥವಾ ಬಯೋಟೆಕ್ನಾಲಜಿಯ ಬಗ್ಗೆ ಈಗ ಸುದ್ದಿಯಲ್ಲಿರುವ ತಕರಾರುಗಳು ಈ ಜ್ಞಾನದ ದುಷ್ಪರಿಣಾಮಗಳ ಬಗ್ಗೆ ಜನ ಭಯಭೀತರಾಗಿರುವುದನ್ನು ಸೂಚಿಸುತ್ತದೆ. ಆದರೆ ಈ ಜ್ಞಾನವನ್ನು ಹುಡುಕಿ ಆಳದಿಂದ ಹೆಕ್ಕಿ ತೆಗೆಯುತ್ತಿರುವ ಸಂಶೋಧಕರು ಇದರ ಪರಿಣಾಮಗಳ ಕುರಿತು ಆಲೋಚಿಸುತ್ತಲೇ ಇಲ್ಲ. ಅವರ ಕಣ್ಣೆಲ್ಲ ಸಂಶೋಧನೆಗಳನ್ನು ಪ್ರಕಟಿಸಿ ಪಡೆಯಬಹುದಾದ ಪ್ರಸಿದ್ಧಿ–ಪ್ರಶಸ್ತಿಗಳ ಕಡೆಗೇ ಇರುತ್ತದೆ.

ಈ ಸಂದರ್ಭದಲ್ಲಿ ಸ್ವಾಮಿಗಳೊಬ್ಬರು ಹೇಳಿದ ಒಂದು ಬಹಳ ಹಳೆಯ ಘಟನೆಯ ನೆನಪಾಗುತ್ತದೆ. ವಿದ್ಯಾವಂತನೊಬ್ಬ ಸಣ್ಣ ನೀರಿನ ಕೊಳದ ಮೇಲೆ ಚಾಚಿಕೊಂಡಿದ್ದ ಜಾಲಿಮರದ ಕೊಂಬೆಯಲ್ಲಿ ನೇತಾಡುತ್ತಿದ್ದ ಗೀಜಗನ ಗೂಡು ಕಂಡು ಆಕರ್ಷಿತನಾದ. ಅಲ್ಲೇ ಇದ್ದ ಕುರಿ ಕಾಯುವ ಕುರುಬನೊಬ್ಬನನ್ನು 'ಆ ಗೀಜಗನ ಗೂಡು ಕಿತ್ತುಕೊಡು. ನಿನಗೆ ಹತ್ತು ರೂಪಾಯಿ ಕೊಡುತ್ತೇನೆ' ಎಂದ. ಆ ಕುರುಬ 'ಸಾಧ್ಯವಿಲ್ಲ' ಎಂದ. ಈ ವಿದ್ಯಾವಂತ ಹೇಳಿದ 'ಇಪ್ಪತ್ತು ರೂಪಾಯಿ ಕೊಡುತ್ತೇನೆ ಕಿತ್ತುಕೊಡು'. ಆ ಕುರುಬ 'ಇಲ್ಲ ಸ್ವಾಮಿ' ಎಂದ. ಎಷ್ಟು ದುರಾಸೆ ಈ ಕುರುಬನಿಗೆ ಎಂದು ವಿದ್ಯಾವಂತನಿಗೆ ಕೋಪ ಬಂತು. 'ಹಾಗಾದರೆ ಎಷ್ಟು ದುಡ್ಡು ಕೊಟ್ಟರೆ ನೀನು ಕಿತ್ತು ಕೊಡುತ್ತೀಯ?' ಎಂದು ವ್ಯಂಗ್ಯವಾಗಿ ಕೇಳಿದ. ಆಗ ಕುರುಬ ಹೇಳಿದ, 'ಸ್ವಾಮಿ ನೀವು ಎಷ್ಟು ದುಡ್ಡು ಕೊಟ್ಟರೂ ಆ ಗೂಡನ್ನು ಕಿತ್ತುಕೊಡುವುದಿಲ್ಲ. ಅದರಲ್ಲಿ ಮರಿಗಳಿವೆ. ಅದರ ತಾಯಿ ತನ್ನ ಮರಿಗಳಿಗೆ ಆಹಾರ ತರಲು ಹೋಗಿದೆ'.

ಇದೊಂದು ಸರಳೀಕರಿಸಿದ ಕಥೆ ಎನ್ನಬಹುದು. ಇಂದು ಹಣ ಕೊಟ್ಟರೂ ಹಕ್ಕಿಯ ಮರಿಗಳಿಗಾಗಿ ಹಣ ತ್ಯಾಗ ಮಾಡುವ ಕುರುಬರು ಕಾಣುತ್ತಾರೆಯೇ ಎಂಬುದು ಪ್ರಶ್ನೆ.

ಕಾಲ ಬದಲಾದಂತೆ ವಿದ್ಯಾವಂತರಾಗಲೀ-ಅವಿದ್ಯಾವಂತರಾಗಲೀ ಪ್ರಕೃತಿಯ ಬಗ್ಗೆ, ಜೀವಜಂತುಗಳ ಬಗ್ಗೆ ಸೂಕ್ಷ್ಮ ಸಂವೇದನಾಶೀಲತೆಯನ್ನು ಉಳಿಸಿಕೊಂಡಿಲ್ಲ. ಅಥವಾ ಇಂದು ನಮ್ಮ ನಡುವೆ ಈ ಬಗೆಯ ಸಂವೇದನಾಶೀಲತೆಯನ್ನು ಉಳಿಸಿಕೊಂಡಿರುವವರಲ್ಲಿ ವಿದ್ಯಾವಂತರೂ ಇದ್ದಾರೆ, ಅವಿದ್ಯಾವಂತರೂ ಇದ್ದಾರೆ. ಇಲ್ಲಿ ನಮ್ಮನ್ನು ಕಾಡುವ ಪ್ರಶ್ನೆ ಎಂದರೆ ಒಂದೇ ಬಗೆಯ ಶಿಕ್ಷಣ ಪಡೆದು ಒಂದೇ ಬಗೆಯ ಪರಿಸರದಲ್ಲಿ ಇದ್ದರೂ ಈ ಕೆಲವರು ತಮ್ಮ ಸಂವೇದನಾಶೀಲತೆಯನ್ನು ಹೇಗೆ ಉಳಿಸಿಕೊಳ್ಳಲು ಸಾಧ್ಯವಾಯಿತು? ಇದೊಂದು ಹುಟ್ಟುಗುಣ ಎನ್ನಬೇಕೆ? ಒಂದು ವೇಳೆ ಹುಟ್ಟುಗುಣವಷ್ಟೇ ಈ ಶೀಲವನ್ನು ಮನುಷ್ಯನಲ್ಲಿ ರೂಪಿಸುವುದಾದರೆ ಮನುಷ್ಯನ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಶಿಕ್ಷಣದ ಪಾತ್ರವೇನು? ಅಥವಾ ನಮ್ಮ ಸುತ್ತಮುತ್ತ ಇರುವ ನಮ್ಮ ಹೆಮ್ಮೆಯ ಸಂಸ್ಕೃತಿಯ ಪಾತ್ರವೇನು?

ಈ ಸಂದರ್ಭದಲ್ಲಿ **ಸೊಂಡಿಲು ಇಲ್ಲದ ಆನೆಯ ಘಟನೆ** ನೆನಪಾಗುತ್ತದೆ. ಜೀನ್ ಪಿಯರಿ ಹ್ಯಾಲೆಟ್ ಎಂಬ ವಿಜ್ಞಾನಿ ಆನೆಗಳನ್ನು ಅಧ್ಯಯನ ಮಾಡುತ್ತಿದ್ದ. ಒಂದು ಗುಂಪಿನಲ್ಲಿ ಸೊಂಡಿಲಿಲ್ಲದ ಆನೆಯೊಂದು ಕಂಡುಬಂತು. ಬಹುಶಃ ಅಪಘಾತದಲ್ಲಿ ಈ ಆನೆ ಸೊಂಡಿಲು ಕಳೆದುಕೊಂಡಿತ್ತು. ಆದರೆ ಈ ಆನೆ ಹೇಗೆ ಹುಲ್ಲು ತಿನ್ನುತ್ತದೆ ಎಂದು ಕುತೂಹಲದಿಂದ ಆನೆಗಳ ಗುಂಪನ್ನೇ ಹಿಂಬಾಲಿಸಿ ಹೋದ. ಸಾಕಷ್ಟು ಹುಲ್ಲು ಬೆಳದಿದ್ದ ಸ್ಥಳಕ್ಕೆ ಈ ಆನೆಗಳಲ್ಲ ತಲುಪಿದವು. ನೋಡುತ್ತಾನೆ- ಎಲ್ಲಾ ಆನೆಗಳು ಪೈಪೋಟಿಯಿಂದ ಸೊಂಡಿಲಿಲ್ಲದ ಆನೆಗೆ ಹುಲ್ಲು ತಿನ್ನಿಸತೊಡಗಿದವು. ಸೊಂಡಿಲಿಲ್ಲದ ಆನೆ ಹೊಟ್ಟೆ ತುಂಬ ಹುಲ್ಲು ತಿಂದಿತು. ಈ ಘಟನೆಯಿಂದ ಪರಸ್ಪರ ಸಹಕರಿಸುವ ಹುಟ್ಟರಿವು ಎಲ್ಲ ಪ್ರಾಣಿಗಳಲ್ಲೂ ಇರುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಇದು ಬದುಕಿಗೆಬೇಕಾದ ಒಂದು ಸಾವಯುವ ಅರಿವು. ಆದರೆ ನಮ್ಮ ಶಿಕ್ಷಣ ಈ ಅರಿವನ್ನು ಉಳಿಸಲು ಸಹಕಾರಿಯಾಗಿಲ್ಲ.

ಪ್ರಕೃತಿಯ ಬಗೆಗಿನ ಕಾಳಜಿ, ಪರಸ್ಪರ ಸಹಕಾರ, ಸಹಾನುಭೂತಿ ಇವೆಲ್ಲ ಬದುಕಿನ ಸಹಜ ಶೀಲಗಳು. ಈ ಬಗೆಯ ಶೀಲನಿರ್ಮಾಣಕ್ಕೆ ಬೇಕಾದ ಆನುವಂಶೀಯ ಗುಣಗಳು ಎಲ್ಲರಲ್ಲೂ ಇವೆ. ಅದು ಸೂಕ್ತವಾಗಿ ವಿಕಾಸವಾಗಲು ಅನುಸರಣೀಯ ಮಾದರಿಗಳು, ಉತ್ತಮ ಪರಿಸರ ಎರಡೂ ಬೇಕು. ಜೀವಂತ ಮಾದರಿಗಳ ಅಭಾವದಲ್ಲಿ ನಾವು ಪಡೆದ ಶಿಕ್ಷಣ ನಮ್ಮನ್ನು ಮತ್ತಷ್ಟು ವಿಚ್ಛಿದ್ರಕಾರಿಯಾಗಿ ಮಾಡುತ್ತದೆ. ಯಾವ ಭಾವನಾ ಸಮುಚ್ಚಯುಗಳಿಗೆ ಮನ್ನಣೆ ಆದರಗಳು ನಮ್ಮ ಸಮಾಜದಲ್ಲಿ ದೊರೆಯುತ್ತವೆಯೊ ಆ ಭಾವನಾ ಸಮುಚ್ಚಯುಗಳು ಮಕ್ಕಳ ಮನಸ್ಸಿನಲ್ಲಿ ಆಳವಾಗಿ ಬೇರೂರುತ್ತವೆ. ಆದ್ದರಿಂದ ವಿಕೃತ ಸಾಮಾಜಿಕ ಪರಿಸರದಲ್ಲಿ ಈ ಬಗೆಯ ಭಾವನೆಗಳಿಗೇ ಆದ್ಯತೆ ನೀಡುವ ಶಿಕ್ಷಣದ ಪರಿಣಾಮ ಮತ್ತಷ್ಟು ವಿಚ್ಛಿದ್ರಕಾರಿಯಾಗಿ ಇರಬಲ್ಲದು. ಆದ್ದರಿಂದ ಬಡವನಾಗಲೀ-ಬಲ್ಲಿದನಾಗಲೀ, ವಿದ್ಯಾವಂತನಾಗಲೀ-ನಿರಕ್ಷರಕುಕ್ಷಿಯಾಗಲೀ

ಒಟ್ಟಾರೆಯಾಗಿ ಪ್ರಕೃತಿಯ ಬಗ್ಗೆ, ತನ್ನ ನೆರೆಹೊರೆಯವರ ಬಗ್ಗೆ, ಸುತ್ತಮುತ್ತಲಿನ ಜೀವಜಂತುಗಳ ಬಗ್ಗೆ ಇರಬೇಕಾದ ಸಂವೇದನಾಶೀಲತೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗಿಲ್ಲ. ಇದು ಕೇವಲ ಬೌದ್ಧಿಕ ಅರಿವಿಗೆ ಸಂಬಂಧಿಸಿದ್ದಲ್ಲ. ಏಕೆಂದರೆ ಬೌದ್ಧಿಕವಾಗಿ ಎಲ್ಲರೂ ಸಂವೇದನಾಶೀಲತೆಯನ್ನು ಉಳಿಸಿಕೊಳ್ಳುವ ಮತ್ತು ಪ್ರಕೃತಿಯನ್ನು ಕಾಪಾಡುವ ಮಾತನಾಡುತ್ತಾರೆ. ಆದರೆ ಪರಿಣಾಮದಲ್ಲಿ ಮಾತ್ರ ಪ್ರಕೃತಿಯನ್ನು ವಿನಾಶ ಮಾಡುತ್ತಾರೆ. ಇದು ನಮ್ಮ ಅರ್ಥಕೇಂದ್ರಿತ ಔಪಚಾರಿಕ ಶಿಕ್ಷಣದ ಪರಿಣಾಮ.

ಹಾಗಾದರೆ ನಮ್ಮ ನಡವಳಿಕೆಯನ್ನು ಬದಲಿಸಬಲ್ಲ ಅಂಶ ಯಾವುದು? ನಿಶ್ಚಯವಾಗಿ ಹೇಳಬೇಕೆಂದರೆ ಮನುಷ್ಯನ ಭಾವನಾ ಸಮುಚ್ಚಯಗಳನ್ನು ರೂಪಿಸುವ ದೈನಂದಿನ ಅಭ್ಯಾಸಗಳು. ಎಂದರೆ ಬಾಲ್ಯದಲ್ಲಿ ತೀವ್ರವಾಗಿ ಪರಿಣಾಮ ಬೀರಿದ ಜೀವಂತ ಮಾದರಿಗಳು ಮನುಷ್ಯನ ಅಭ್ಯಾಸಕ್ಕೆ ಎಂದರೆ ಅಪ್ರಜ್ಞಾಪೂರ್ವಕ ನಡವಳಿಕೆಗೆ ಬುನಾದಿಯಾಗಿವೆ. ವಾಸ್ತವವಾಗಿ ಮನುಷ್ಯನ ಬಹುತೇಕ ನಡವಳಿಕೆಗಳು ಅಪ್ರಜ್ಞಾ ಪೂರ್ವಕ ಸ್ತರದಿಂದ ಹೊಮ್ಮಿದ ನಡವಳಿಕೆಗಳು. ಒಬ್ಬ ಮನುಷ್ಯ ಒಳ್ಳೆಯವನಾಗಿರುವುದು ಅವನಿಗೆ ಕೆಟ್ಟವನಾಗಲು ಸಾಧ್ಯವಾಗದೇ ಇರುವುದರಿಂದ. ಅಥವಾ ಕೆಟ್ಟವನಾಗಿರುವುದೂ ಕೂಡ ಇದೇ ಬಗೆಯ ಅನಿವಾರ್ಯತೆಯಿಂದ. ಇದಕ್ಕೆ ಕಾರಣ ಮನದಾಳದಲ್ಲಿ ಬೇರೂರಿರುವ ಅಭ್ಯಾಸಗಳು. ಈಗ ನಮ್ಮ ಮುಂದೆ ಇರುವ ಸವಾಲು ಎಂದರೆ **ನಾವು ನಮ್ಮ ಬೌದ್ಧಿಕ ಶಕ್ತಿಯಿಂದ ಪಡೆದ ಜ್ಞಾನವನ್ನು ನಮ್ಮ ಮುಂದಿನ ಪೀಳಿಗೆಗೆ ಅಭ್ಯಾಸದ ಮಾದರಿಗಳಾಗಿ ಕೊಡಲು ಸಾಧ್ಯವೆ?** ಇಂತಹ ಒಂದು ಜ್ಞಾನ ವರ್ಗಾವಣೆಯ ತಂತ್ರವನ್ನು ನಾವು ಶಿಕ್ಷಣದ ಮೂಲಕ ರೂಪಿಸಬಹುದೆ? ಒಳ್ಳೆಯ ನಡವಳಿಕೆಗಳ ಅಭ್ಯಾಸಗಳು ಮನದಾಳದಲ್ಲಿ ಬೇರೂರಿದ ಮೇಲೆ ಅದರ ಬೌದ್ಧಿಕ ಆಯಾಮಗಳನ್ನು, ಆ ಸಂಬಂಧವಾದ ವೈಚಾರಿಕತೆಯನ್ನು ಮಕ್ಕಳು ಬೆಳೆಸಿಕೊಳ್ಳಬಹುದು. ಅಥವಾ ಈ ಅಭ್ಯಾಸಗಳ ನಡುವೆ ಬೆಳೆದ ದೊಡ್ಡವರೂ ಬೆಳೆಸಿಕೊಳ್ಳಬಹುದು. ಇದು ಬಹುಮುಖ್ಯವಾದ ಪ್ರಶ್ನೆ. ಏಕೆಂದರೆ ವೈಚಾರಿಕತೆಯ ಮೂಲಕ ಸಾಧಿಸಿದ ನಿಷ್ಕರ್ಷೆ ಕೃತಿಯಲ್ಲಿ ಮೂಡದೇ ಇರುವುದನ್ನು ನಾವು ನೋಡುತ್ತಿದ್ದೇವೆ. ಒಂದು ವೇಳೆ ವೈಚಾರಿಕತೆಯನ್ನು ಸಂಪೂರ್ಣವಾಗಿ ಕೈಬಿಟ್ಟು ಕೇವಲ ಅಪ್ರಜ್ಞಾಪೂರ್ವಕವಾದ ನಡವಳಿಕೆಯನ್ನು ಅವಲಂಬಿಸಿದರೆ ಅದೂ ನಮ್ಮನ್ನು ಮತ್ತಷ್ಟು ಅವಿವೇಕಕ್ಕೆ ಕೊಂಡೊಯ್ಯಬಹುದು. ಆದ್ದರಿಂದ ಮನುಷ್ಯನ ಮೂಲಭೂತ ವ್ಯಕ್ತಿತ್ವ ರೂಪುಗೊಳ್ಳುವಾಗ ಮೌಲ್ಯಗಳ ಆಧಾರದ ಮೇಲೆ ಅಭ್ಯಾಸಗಳನ್ನು ರಕ್ತಗತ ಮಾಡಿಕೊಂಡು ಆನಂತರ ವೈಚಾರಿಕ ಆಯಾಮವನ್ನು ಪ್ರವೇಶಿಸುವುದು ಮತ್ತು ಈ ವೈಚಾರಿಕ ಶಕ್ತಿಯನ್ನು ಪ್ರಬುದ್ಧವಾಗಿ ಬೆಳೆಸಿಕೊಂಡಮೇಲೆ ಅಸಂಬದ್ಧವಾದ ಅಭ್ಯಾಸಗಳು ಕಂಡುಬಂದಲ್ಲಿ ಅವುಗಳಿಂದ ಬಿಡುಗಡೆ ಪಡೆಯಬಹುದು. ಅಥವಾ ಅಂತಹ ಅಭ್ಯಾಸಾಧಾರಿತ ನಡವಳಿಕೆಗಳು ಸಮಾಜಕಂಟಕವಾಗದಂತೆ ವೈಚಾರಿಕ ಶಕ್ತಿಯಿಂದ ತಡೆಗಟ್ಟಬಹುದು. ಮೊದಲನೆಯದಾಗಿ 'ಮನಸ್ಸು ಪಕ್ವವಾಗುತ್ತದೆ, ವಿವೇಕವನ್ನು

ಗಳಿಸುತ್ತದೆ' ಎಂಬ ಅಂಶವನ್ನಾದರೂ ನಮ್ಮ ಶಿಕ್ಷಣ ಪದ್ಧತಿ ಗುರುತಿಸಬೇಕು. ಮಾಹಿತಿ ಕೊಡುವುದಷ್ಟೇ ಶಿಕ್ಷಣದ ಕೆಲಸ ಎಂದು ಭಾವಿಸಿರುವಾಗ ವಿವೇಕಕ್ಕೆ ಸ್ಥಾನವೆಲ್ಲಿದೆ?

**ಹಿಂಸೆ ಮತ್ತು ಯಂತ್ರ–ಶಸ್ತ್ರಗಳು**

ಕೆಲವರು ಹೇಳುವಂತೆ ನಮ್ಮ ಮಾಹಿತಿ ತಂತ್ರಜ್ಞಾನ, ತಾಂತ್ರಿಕ ಪ್ರಗತಿ ಒಳ್ಳೆಯದು ಕೆಟ್ಟದ್ದು ಎಂಬ ಯಾವ ಭೇದವೂ ಇಲ್ಲದೆ ಬಳಕೆಯಾಗುತ್ತಿದೆ. ಎಲ್ಲದಕ್ಕೂ ಈವರೆಗೆ ಉತ್ಪತ್ತಿಯಾಗಿರುವ ಯಂತ್ರಗಳೆಲ್ಲವೂ ವಿಧ್ವಂಸಕಕಾರಿಯಲ್ಲ. ಅವು ಮಾನವಕಲ್ಯಾಣಕ್ಕೆ ಬಳಕೆಯಾಗುತ್ತಿರುವುದೂ ನಿಜ. ಆದರೆ ಅಣುಬಾಂಬಿನಂತಹ ವಿಧ್ವಂಸಕಕಾರಿ ಅಸ್ತ್ರಗಳ ತಯಾರಿಕೆ ಮತ್ತು ಬಳಕೆಯಲ್ಲಿ ಮನುಷ್ಯನು ತೊಡಗದಂತೆ ತಡೆಯುವ ಶಕ್ತಿ ಮಾಹಿತಿ ತಂತ್ರಜ್ಞಾನಕ್ಕಿದೆಯೋ ಅಥವಾ ವಿವೇಕಕ್ಕಿದೆಯೋ ಎಂಬುದು ಪ್ರಮುಖವಾದ ಪ್ರಶ್ನೆ.

ಇಂದು ಭೂಮಿಯ ಮೇಲೆ ಮೂವತ್ತಾರು ಸಾವಿರ ಅಣುಬಾಂಬ್‌ಗಳನ್ನು ತಯಾರಿಸಿ ಶೇಖರಿಸಿಡಲಾಗಿದೆ. ಈ ಒಂದೊಂದು ಬಾಂಬ್ ಹಿರೋಶಿಮಾ–ನಾಗಾಸಾಕಿ ಮೇಲೆ ಹಾಕಿದ ಅಣುಬಾಂಬಿಗಿಂತ 2700 ಪಟ್ಟು ಶಕ್ತಿಶಾಲಿ. ನಾವು ಮಾನವಕಲ್ಯಾಣಕ್ಕಾಗಿ ಎಷ್ಟು ಯಂತ್ರಗಳನ್ನು ತಯಾರಿಸಿದರೇನು? ಒಂದೋ ಎರಡೋ ಅಣುಬಾಂಬ್‌ಗಳನ್ನು ಸಿಡಿಸಿದರೂ ಸರ್ವನಾಶವಾದೀತು. ಇಲ್ಲಿ ಪ್ರಶ್ನೆಯೇನೆಂದರೆ ಮಾನವಕಲ್ಯಾಣವನ್ನು ಬಾಯಲ್ಲಿ ಪಠಿಸುತ್ತಿದ್ದರೂ ಯಂತ್ರತಯಾರಕರ ಗಮನವೆಲ್ಲ ಯಂತ್ರಗಳಿಂದ ಗಳಿಸಬಹುದಾದ ಹಣದ ಕಡೆ. ಯಂತ್ರ ತಯಾರಕರು ತಯಾರಿಸುವ ಯಂತ್ರಗಳಿಗೆ ಬೇಡಿಕೆಯಿದೆ ಎಂಬ ಕಾರಣಕ್ಕಾಗಿ ಯಂತ್ರ ತಯಾರಾಗುತ್ತದೆ. ಶ್ರೀಮಂತ ಭಯೋತ್ಪಾದಕನೊಬ್ಬ ಹಣ ನೀಡಿದರೆ ಇದೇ ಯಂತ್ರ ತಯಾರಕರು ಸಮೂಹ ಕಗ್ಗೊಲೆ ಮಾಡಬಲ್ಲ ಯಂತ್ರಗಳನ್ನು ತಯಾರು ಮಾಡಿಕೊಡುತ್ತಾರೆ. ಲಾಯರ್, ಇಂಜಿನಿಯರ್, ಡಾಕ್ಟರ್ ಮೊದಲಾದವರೆಲ್ಲ ಇದು 'ಸತ್ಯ', ಇದು 'ಬಹುಜನರ ಹಿತ' ಎಂದು ಭಾವಿಸುತ್ತ ಕೆಲಸ ಮಾಡುತ್ತಾರೇನು? ಪರಿಣತಿ–ಕೌಶಲದಂತಹ ಮೌಲ್ಯಗಳು ಮಾತ್ರ ಇವರಿಗೆ ಗಳಿಸಬೇಕಾದ ಮೌಲ್ಯಗಳು ಎಂದು ತೋರುತ್ತವೆ. ಸತ್ಯ ಅಹಿಂಸೆಗಳು ಇವರಿಗೆ ಪಳೆಯುಳಿಕೆ ಮೌಲ್ಯಗಳಾಗಿ ಕಾಣುತ್ತವೆ. ಈ ಸಂದರ್ಭದಲ್ಲಿ ರಾಮಾಯಣದಲ್ಲಿ ಸೀತೆ ರಾಮನಿಗೆ ಬುದ್ಧಿ ಹೇಳಿದ ಪ್ರಸಂಗವೊಂದು ನೆನಪಿಗೆ ಬರುತ್ತದೆ. ಇಲ್ಲಿ ಮೌಲ್ಯಗ್ರಹಿಕೆಯ ಸಂದರ್ಭದಲ್ಲಿ ಸೀತೆ – ರಾಮರ ಸಂವಾದ ಮುಕ್ತವಾಗಿದೆ, ಲಿಂಗತಾರತಮ್ಯವಿಲ್ಲದೆ ಸಮತೋಲನದಲ್ಲಿದೆ ಎಂಬುದನ್ನು ಗಮನಿಸಬೇಕು. ಜೊತೆಗೆ ಸರಿ–ತಪ್ಪುಗಳ ಆಯ್ಕೆಯಲ್ಲಿ ಯುಕ್ತಾಯುಕ್ತ ವಿವೇಚನೆ ಹೇಗೆ ಕೇವಲ ಔಪಚಾರಿಕ ಜ್ಞಾನಕ್ಕೆ ಸಂಬಂಧಿಸಿಲ್ಲ, ಅದನ್ನು ಮೀರಿದ ಒಂದು ವಿವೇಕ ಅಲ್ಲಿ ಕೆಲಸಮಾಡುತ್ತಿದೆ ಎಂಬುದನ್ನೂ ಗಮನಿಸಬಹುದು. ಬಹುತಃ ಗುರುಕುಲ ಪದ್ಧತಿಯ ಶಿಕ್ಷಣದಲ್ಲಿ ಈ

ಬಗೆಯ ಜ್ಞಾನದ ಬೆಳವಣಿಗೆಗೆ ಹೆಚ್ಚು ಒತ್ತುಕೊಡುತ್ತಿದ್ದರು ಎಂದು ಕಾಣುತ್ತದೆ. ಆದರೆ ಜಾತಿಆಧಾರಿತ ಅಧಿಕಾರಿಭೇದ ಸಮಾನತೆಯ ಮೌಲ್ಯಕ್ಕೆ ಹೊಂದಿಕೊಳ್ಳುವುದಿಲ್ಲ ಎಂಬುದೂ ಸತ್ಯ.

## ರಾಮನಿಗೆ ಸೀತೆಯ ಬುದ್ಧಿವಾದ

ಪಿತೃವಾಕ್ಯ ಪರಿಪಾಲನೆಗಾಗಿ ರಾಮ, ಲಕ್ಷ್ಮಣ, ಸೀತೆ ಮೂವರೂ ಹದಿನಾಲ್ಕು ವರ್ಷ ವನವಾಸ ಮಾಡುತ್ತಿದ್ದರು. ಆ ಸಮಯದಲ್ಲಿ ರಾಮನು ಅನೇಕ ರಾಕ್ಷಸರನ್ನು ಕೊಂದುಹಾಕಿದ. ಆ ರಾಕ್ಷಸಸಂಬಂಧಿಗಳೆಲ್ಲಾ ರಾಮನ ಮೇಲೆ ದ್ವೇಷ ಸಾಧಿಸುತ್ತಿದ್ದರು. ರಾಮಲಕ್ಷ್ಮಣರನ್ನು ನೇರವಾಗಿ ಎದುರಿಸಿ ಈ ರಾಕ್ಷಸರಿಗೆ ಗೆಲ್ಲಲಾಗುತ್ತಿರಲಿಲ್ಲ. ಆದರೆ ಸುಲಭವಾಗಿ ಸೀತೆಗೆ ತೊಂದರೆ ಕೊಟ್ಟು ತಮ್ಮ ಸೇಡನ್ನು ತೀರಿಸಿಕೊಳ್ಳಬಹುದಾಗಿತ್ತು. ಆದ್ದರಿಂದ ಸೀತೆ ಭಯಭೀತಳಾಗಿದ್ದಳು. ಒಂದು ಬಾರಿ ಸೀತೆ ರಾಮನಿಗೆ ಬುದ್ಧಿ ಹೇಳಿದಳು. "ನೀವು, ಅನೇಕ ರಾಕ್ಷಸರನ್ನು ಕೊಲ್ಲುತ್ತೀದ್ದೀರಿ; ಅವರೆಲ್ಲರ ಮೇಲೆ ದ್ವೇಷ ಕಟ್ಟಿಕೊಳ್ಳುವುದು ಒಳ್ಳೆಯದಲ್ಲ. ಶಸ್ತ್ರಾಸ್ತ್ರಗಳು ಹಿಂಸೆಯನ್ನು ಪ್ರಚೋದಿಸುತ್ತವೆ. ಶಸ್ತ್ರಾಸ್ತ್ರಗಳ ಸಹವಾಸದಲ್ಲೇ ಬದುಕಬೇಕಾದ ಕ್ಷತ್ರಿಯರಿಗೆ ಶಸ್ತ್ರಗಳಿಂದ ಕೇಡು ತಪ್ಪಿದ್ದಲ್ಲ. ಶಸ್ತ್ರಾಸ್ತ್ರಗಳ ಗೊಡವೆ ಇಲ್ಲದ ಬ್ರಾಹ್ಮಣರು ಎಷ್ಟೋ ಪಾಲಿಗೆ ಸುಖಿಗಳು".

ಆಗ ರಾಮ ಹೇಳಿದ: "ಸೀತೆ, ನೀನು ಉತ್ತಮ ಕುಲದ ರಾಜಕುಮಾರಿ, ಆದ್ದರಿಂದ ನಿನ್ನ ಬಾಯಿಯಲ್ಲಿ ಇಂತಹ ಒಳ್ಳೆಯ ಮಾತುಗಳು ಬರುತ್ತಿವೆ, ಆದರೆ ನಾನೇನು ಮಾಡಲಿ? ಕೆಟ್ಟವರನ್ನು ಶಿಕ್ಷಿಸುವುದು, ಒಳ್ಳೆಯವರನ್ನು ರಕ್ಷಿಸುವುದು ಕ್ಷತ್ರಿಯಧರ್ಮ. ಈ ರಾಕ್ಷಸರು ಋಷಿಗಳಿಗೆ ತೊಂದರೆ ಕೊಡುತ್ತಾರೆ. ಆದ್ದರಿಂದ ನಾನು ರಾಕ್ಷಸರನ್ನು ಕೊಲ್ಲುತ್ತೇನೆ".

ಆಗ ಸೀತೆ, "ನೀವು ಏನೇ ಹೇಳಿ, ಈ ಶಸ್ತ್ರಾಸ್ತ್ರಗಳು ನನಗೆ ಸ್ವಲ್ಪವೂ ರುಚಿಸುತ್ತಿಲ್ಲ, ಈ ಸಂಬಂಧವಾಗಿ ಒಂದು ಕತೆಯನ್ನು ಕೇಳಿ" ಎಂದು ಒಂದು ಕಥೆಯನ್ನು ಹೇಳಿದಳು:

ಬಹಳ ಹಿಂದೆ ಒಬ್ಬ ಋಷಿ ಕಾಡಿನಲ್ಲಿ ತಪಸ್ಸು ಮಾಡಿಕೊಂಡಿದ್ದ. ಹಾಗಾಗಿ ಇಂದ್ರನಿಗೆ ತನ್ನ ಸಿಂಹಾಸನ ಹೋದೀತು ಎಂದು ಹೆದರಿಕೆಯಾಯಿತು. ಋಷಿಯ ತಪಸ್ಸನ್ನು ಕೆಡಿಸಲು ಒಂದು ಉಪಾಯ ಮಾಡಿದ. ಅವನು ಋಷಿಯ ಬಳಿ ಬಂದು, 'ಸ್ವಾಮಿ, ನನ್ನ ಬಳಿ ಒಂದು ಅಮೂಲ್ಯವಾದ ಕತ್ತಿ ಇದೆ. ಇದನ್ನು ತಮ್ಮ ಆಶ್ರಮದಲ್ಲಿ ಇಟ್ಟು ಹೋಗಿರುತ್ತೇನೆ. ನಾನು ಪುನಃ ಬಂದು ಇದನ್ನು ಕೊಂಡೊಯ್ಯುತ್ತೇನೆ, ಅಲ್ಲಿಯವರೆಗೆ ಈ ಕತ್ತಿ ಸುರಕ್ಷಿತವಾಗಿ ನಿಮ್ಮಲ್ಲಿಯೇ ಇರಲಿ' ಎಂದು ಕೇಳಿಕೊಂಡ.

ಆಗ ಋಷಿ 'ಅದಕ್ಕೇನಂತೆ? ಅದನ್ನು ನನ್ನ ಆಶ್ರಮದ ಒಂದು ಮೂಲೆಯಲ್ಲಿ ಇಟ್ಟುಹೋಗು' ಎಂದು ಹೇಳಿದ. ಹೀಗೆ ಸ್ವಲ್ಪ ಕಾಲವಾದ ನಂತರ ಋಷಿಗೆ ಆ ಕತ್ತಿಯ

ಮೇಲೆ ವಿಶೇಷ ಕುತೂಹಲ ಮೂಡಿತು. ಅದರಿಂದ ಅವನು ಚಿಕ್ಕಮಟ್ಟ ಎಲೆ ಬಳ್ಳಿಗಳನ್ನು ಕತ್ತರಿಸಲು ಆರಂಭಿಸಿದ. ಕ್ರಮೇಣ ಅದೇ ಅಭ್ಯಾಸವಾಗಿ ಕೈಗೆ ಸಿಕ್ಕ ಪ್ರಾಣಿ–ಪಕ್ಷಿಗಳನ್ನೆಲ್ಲಾ ಕತ್ತರಿಸಿ ಹಾಕಲಾರಂಭಿಸಿದ, ಹೀಗೆ ಅವನು ಹಿಂಸಾಕಾರ್ಯಗಳಲ್ಲಿ ತೊಡಗಿ ತನ್ನ ತಪಸ್ಸನ್ನು ಕಳೆದುಕೊಂಡ. ಆದ್ದರಿಂದ ಶಸ್ತ್ರಾಸ್ತ್ರಗಳು ಎಲ್ಲಿರುತ್ತವೆಯೋ ಅಲ್ಲಿ ಹಿಂಸೆ ತಾನಾಗಿಯೇ ಉತ್ಪತ್ತಿಯಾಗುತ್ತದೆ. ಹಾಗಾಗಿ ನಾವು ಶಸ್ತ್ರಗಳಿಂದ ದೂರ ಇರುವುದೇ ಒಳ್ಳೆಯದು.

ಶಸ್ತ್ರ ಮತ್ತು ಹಿಂಸೆಗಳಿಗೆ ಇರುವ ಸಂಬಂಧವನ್ನು ಕೇವಲ ಬೌದ್ಧಿಕವಾಗಿ ಅರಿತರೆ ಈ ಬಗೆಯ ವಿವೇಕ ಹುಟ್ಟುತ್ತದೆಯೆ? ಔಪಚಾರಿಕ ಶಿಕ್ಷಣ ಈ ವಿವೇಕವನ್ನು ಕೊಟ್ಟಿದ್ದರೆ ನಾವು ಅಣುಬಾಂಬುಗಳ ತಂಟೆಗೇ ಹೋಗುತ್ತಿರಲಿಲ್ಲ. ಮನುಷ್ಯನ ಅಳಿವು–ಉಳಿವಿನ ಪ್ರಶ್ನೆ ಬಂದಾಗ ಔಪಚಾರಿಕ ಶಿಕ್ಷಣ ನಮಗೆ ಉಪಯೋಗಕ್ಕೆ ಬರುತ್ತಿಲ್ಲ ಎಂಬುದು ತಿಳಿದುಬರುತ್ತಿದೆ.

## ಹಿಟ್ಲರ್ ಹಾಗೂ ಗಾಂಧಿ

ಈ ಸಂದರ್ಭದಲ್ಲಿ ನಮ್ಮ ಆಶ್ರಮದಲ್ಲಿ ನಡೆದ ಘಟನೆಯೊಂದು ನೆನಪಾಗುತ್ತಿದೆ. ಜರ್ಮನಿಯ ಇಬ್ಬರು ಯುವತಿಯರು ಆಗಾಗ ನಮ್ಮಲ್ಲಿಗೆ ಬಂದು ತಮ್ಮನ್ನು ಸೇವಾಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಾರೆ. ಹೀಗೆ ಬಂದವರಲ್ಲಿ ಇಬ್ಬರು ಯುವತಿಯರು ನಮ್ಮೂರಿನ ಅಂಗಡಿಯೊಂದರಲ್ಲಿ ತಮಗಾದ ಅನುಭವವನ್ನು ಹೇಳಿಕೊಂಡು ಅತ್ತೇ ಬಿಟ್ಟರು. ಅಂಗಡಿಯಾತ ಇವರನ್ನು ನೀವು ಯಾವ ದೇಶದಿಂದ ಬಂದಿದ್ದೀರಿ ಎಂದು ಕೇಳಿದನಂತೆ. ಅದಕ್ಕೆ ಅವರು ಜರ್ಮನಿಯಿಂದ ಎಂದು ಹೇಳಿದರಂತೆ. ಆತ ತಕ್ಷಣ 'ಓ, ಹಿಟ್ಲರ್‌ನ ದೇಶದಿಂದ ಬಂದಿದ್ದೀರಾ?' ಎಂದನಂತೆ. ಇಂತಹ ಪ್ರತಿಕ್ರಿಯೆಯನ್ನು ಈ ಯುವತಿಯರು ನಿರೀಕ್ಷಿಸಿರಲಿಲ್ಲ. ಅವರಿಗೆ ಎಷ್ಟು ಆಘಾತವಾಯಿತೆಂದರೆ ಅಂಗಡಿಯಲ್ಲಿ ಏನೂ ಕೊಳ್ಳದೆ ಮನೆಗೆ ಹಿಂತಿರುಗಿ ಬಂದು ಮಂಕಾಗಿ ಕುಳಿತಿದ್ದರು. 'ಏನು ಸಮಾಚಾರ' ಎಂದು ವಿಚಾರಿಸಿದಾಗ ಆದ ಘಟನೆಯನ್ನು ವಿವರಿಸಿ 'ಅಂಗಡಿಯಾತ ಎಂತಹ ನಿರ್ದಯಿ! ಜರ್ಮನಿಯನ್ನು ಲ್ಯಾಂಡ್ ಆಫ್ ಹಿಟ್ಲರ್ ಎಂದನಲ್ಲ!' ಎಂದು ದುಃಖಪಟ್ಟರು. ಆಗ ನಾನು ಭಾವಿಸಿದೆ – ಒಂದು ವೇಳೆ ನಾವು ಹೊರದೇಶಕ್ಕೆ ಹೋದಾಗ ಅಲ್ಲಿಯ ಜನ ಎಲ್ಲಿಂದ ಬಂದಿದ್ದೀರಿ ಎಂದು ಕೇಳಿದರೆ, ನಾವು – ಇಂಡಿಯಾ ಎಂದಾಗ ಅಲ್ಲಿಯವರು 'ಲ್ಯಾಂಡ್ ಆಫ್ ಗಾಂಧಿ' ಎಂದು ಹೇಳಬೇಕಷ್ಟೆ. ಆಗ ನಮಗೆ ದುಃಖವಾಗುವುದಿಲ್ಲ, ಸಂತೋಷವಾಗುತ್ತದೆ. ಯಾವ ಆಯ್ಕೆಯನ್ನೂ ಮಾಡದೆ ನಾವು ಒಂದು ದೇಶಕ್ಕೆ ಸೇರಿದ್ದೇವೆ. ಆದರೂ ನಮ್ಮ ನಂಬಿಕೆ ಆಚಾರ ವಿಚಾರಗಳಿಗನುಗುಣವಾಗಿ ನಮ್ಮ ಸಂಸ್ಕೃತಿ ರೂಪುಗೊಳ್ಳುತ್ತದೆ. ಅದಕ್ಕನುಗುಣವಾಗಿ ನಮ್ಮ ನಾಯಕರು ರೂಪುಗೊಳ್ಳುತ್ತಾರೆ. ಅದರ ಪರಿಣಾಮವನ್ನು ಇಡೀ ದೇಶದ ಜನ ಅನುಭವಿಸುತ್ತಾರೆ. ನಮ್ಮ ದೇಶದ ಅಹಿಂಸಾ ಸಿದ್ಧಾಂತಕ್ಕೆ ಗಾಂಧೀಜಿಯವರೊಬ್ಬರೇ ಕಾರಣರಲ್ಲ. ಮಹಾವೀರ,

ಬುದ್ಧರಿಂದ ಇಲ್ಲಿಯವರೆಗೆ ಶತಶತಮಾನಗಳ ಪರ್ಯಂತ 'ಅಹಿಂಸೆಯೇ ಪರಮಧರ್ಮ' ಎಂಬ ನಂಬಿಕೆಯನ್ನಿಟ್ಟುಕೊಂಡು ಜನ ಬದುಕಿಬಂದಿದ್ದಾರೆ. ಚಾರಿತ್ರಿಕವಾಗಿ ಒಂದು ಜನಸಮುದಾಯ ಪೋಷಿಸಿಕೊಂಡು ಬರುವ ಪ್ರಧಾನ ವಿಚಾರಧಾರೆ ಆಯಾ ಪ್ರದೇಶದ ಒಬ್ಬ ಪ್ರಭಾವಶಾಲಿ ವ್ಯಕ್ತಿ ನಂಬಿದ, ಬದುಕಿದ ಚಿಂತನೆಯಾಗಿರುತ್ತದೆ. ಮೊದಲನೆಯದಾಗಿ ಎಂತಹ ವ್ಯಕ್ತಿ ನಮ್ಮ ಸಮುದಾಯದ ಮೇಲೆ ಪ್ರಭಾವ ಬೀರಬಲ್ಲ ಎಂಬುದು ಸಮೂಹ ಮನಸ್ಸನ್ನು ಕೊಂಚ ಮಟ್ಟಿಗೆ ಅವಲಂಬಿಸಿದೆಯಾದರೂ ಈ ಪ್ರಭಾವಿ ವ್ಯಕ್ತಿ ತಳೆಯುವ ನಿಲುವು ನಿರ್ಣಾಯಕವಾಗಬಲ್ಲುದು. ಅದೃಷ್ಟವಶಾತ್ ನಾವು ಗಾಂಧಿಯಿಂದ ಪ್ರಭಾವಿತರಾಗಿದ್ದೇವೆ. ದುರದೃಷ್ಟದಿಂದಾಗಿ ಜರ್ಮನರು ಹಿಟ್ಲರ್‌ನ ಹಿಡಿತಕ್ಕೆ ಸಿಕ್ಕಿಕೊಂಡಿದ್ದರು. ಆದರೆ ಈಗಿನ ಪೀಳಿಗೆಯ ಜರ್ಮನ್ ಯುವಕರು ಹಿಟ್ಲರನನ್ನು ನೆನೆದರೆ ಸಾಕು ನಾಚಿಕೆಯಿಂದ ತಲೆ ತಗ್ಗಿಸುತ್ತಾರೆ. ಹಿಟ್ಲರನ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುವಂತಹದು. ಇಂದು ಏನೂ ಇಲ್ಲ. ಅಹಿಂಸೆಯಂತಹ ಒಂದು ಮೌಲ್ಯವನ್ನು ಎತ್ತಿಹಿಡಿದ ನಮ್ಮ ಚಿಂತನೆಯನ್ನು ಯಾವುದೋ ಒಂದು ಆಧುನಿಕ ಅಲೆ ಹೊಡೆದುಕೊಂಡು ಹೋಗದಂತೆ ನಮ್ಮ ಶಿಕ್ಷಣ ಕಾಯಬೇಕು. ಇಲ್ಲದೆ ಹೋದರೆ ಕ್ರಮೇಣ ಇಡೀ ಭೂಮಿಯೇ ಹಿಟ್ಲರ್‌ನ ಭೂಮಿಯಾಗಿ ಪರಿಣಮಿಸುತ್ತದೆ.

### ವಿಧ್ವಂಸಕಕಾರಿ ಮನಸ್ಸು ಹುಟ್ಟುವುದು ಹೇಗೆ?

ನಮ್ಮ ಇತ್ಯಾತ್ಮಕ-ನೇತ್ಯಾತ್ಮಕ ಚಿಂತನೆಗಳು ಹುಟ್ಟುವ ಬಗೆಯನ್ನು ವಿಶ್ಲೇಷಿಸಿದರೆ ನಮಗೆ ತಿಳಿಯುತ್ತದೆ – ನಾವು ಯಾವ ಪ್ರಯತ್ನವೂ ಇಲ್ಲದೆ ನೇತ್ಯಾತ್ಮಕ ಚಿಂತನೆಯನ್ನು ಮಾಡಬಲ್ಲೆವು ಎಂದು. ಇವುಗಳನ್ನು Automatic Negetive Thoughts ಅಥವಾ 'ANT' ಎನ್ನುತ್ತಾರೆ. ಇತ್ಯಾತ್ಮಕ ಚಿಂತನೆಗಳು ಮನಸ್ಸಿನಲ್ಲಿ ಮೂಡಬೇಕಾದರೆ ನಾವು ಸಾಕಷ್ಟು ಪ್ರಯತ್ನಪಡಬೇಕಾಗುತ್ತದೆ. ಅಧ್ಯಾತ್ಮಸಾಧನೆ ಮಾಡುವವರಿಗೆ ಮಂಗಳದೃಷ್ಟಿ ಇರಬೇಕು ಎಂದು ಗುರುಗಳು ಹೇಳುತ್ತಾರೆ. ಪ್ರಯತ್ನಪೂರ್ವಕವಾಗಿ ಸಾಧಿಸಬೇಕಾದ ಕೆಲಸವಿದು. ವ್ಯಕ್ತಿವಿಕಾಸದ ದೃಷ್ಟಿಯಿಂದ ಇತ್ಯಾತ್ಮಕ ಮನೋಧರ್ಮ ಬಹಳ ಮುಖ್ಯ. ಪರಿಪೂರ್ಣ ವ್ಯಕ್ತಿತ್ವ ಅಧ್ಯಾತ್ಮಸಾಧನೆಯ ಶಿಖರ ಎಂದು ಭಾವಿಸುವುದಾದರೆ ಇದಕ್ಕೆ ಇತ್ಯಾತ್ಮಕ ದೃಷ್ಟಿ ಅಗತ್ಯ. ನೇತ್ಯಾತ್ಮಕ ಮನೋಧರ್ಮ ನಮ್ಮನ್ನು ಸಣ್ಣಸಣ್ಣ ವಲಯಗಳಲ್ಲಿ ಬಂಧಿಯಾಗಿಡುತ್ತದೆ. ವಿಶ್ವಮಾನವತೆಯ ಮನೋಧರ್ಮವನ್ನು ಸಾಧಿಸಬೇಕಾದರೆ ಇತ್ಯಾತ್ಮಕ ಮನೋಧರ್ಮ ಅನಿವಾರ್ಯ. ನೇತ್ಯಾತ್ಮಕ ವ್ಯಕ್ತಿಗಳು ಮೂಲತಃ ಅಸಂತೋಷಿಗಳು. ಮುಂದುವರಿದು ಹೇಳಬೇಕೆಂದರೆ ಇವರು ವಿಘ್ನಸಂತೋಷಿಗಳಾಗಿ ಪರಿಣಮಿಸುತ್ತಾರೆ. ಹಾಗಾಗಿ ಇವರು ಬೇಸಿಗೆಯ ಬಿಸಿಲಿನಲ್ಲಿ ಒಣಗುತ್ತಿರುವ ಯಾವುದೋ ಒಂದು ಸಣ್ಣ ಕೊಳದಲ್ಲಿ ವಾಸಿಸುತ್ತಿರುವ ಮೀನಿನಂತೆ ಕಂಡುಬರುತ್ತಾರೆ. ಇವರಿಗೆ ಯಾವ ಭವಿಷ್ಯವೂ ಇಲ್ಲ. ಆದರೆ ಇತ್ಯಾತ್ಮಕ ಮನೋಧರ್ಮದ ವ್ಯಕ್ತಿಗಳು ವಿಶಾಲವಾದ

ಸಮುದ್ರದಲ್ಲಿ ಈಜುತ್ತಿರುವ ಮೀನಿನಂತೆ. ಇವರು ನಿರ್ಭಯವಾದ ಸ್ವತಂತ್ರ ವ್ಯಕ್ತಿತ್ವವನ್ನು ಪಡೆದುಕೊಳ್ಳುತ್ತಾರೆ. ಆದ್ದರಿಂದ ಇತ್ಯಾತ್ಮಕ ಮನೋಧರ್ಮದ ವ್ಯಕ್ತಿಯೊಬ್ಬ ಆರೋಗ್ಯಕರ ಬೆಳವಣಿಗೆಯ ಎಲ್ಲಾ ಮುಖಗಳಿಗೂ ತನ್ನನ್ನು ತಾನು ತೆರೆದುಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಮಹಾಭಾರತದ ಕಥೆಯೊಂದು ನೆನಪಿಗೆ ಬರುತ್ತದೆ. ಧರ್ಮರಾಜನನ್ನು ಈ ಪ್ರಪಂಚದಲ್ಲಿ ಕೆಟ್ಟವರನ್ನು ಹುಡುಕಿಕೊಂಡು ಬಾ ಎಂದು ಹೇಳಿ ಕಳುಹಿಸಿದರಂತೆ. ಅವನು ಪ್ರಪಂಚವನ್ನೆಲ್ಲ ಸುತ್ತಿ ಕಡೆಗೆ ಕೆಟ್ಟವರಾರೂ ಸಿಗಲಿಲ್ಲ ಎಂದು ಹಿಂದಿರುಗಿದನಂತೆ. ಹಾಗೆಯೇ ದುರ್ಯೋಧನನನ್ನು ಪ್ರಪಂಚದಲ್ಲಿರಬಹುದಾದ ಒಳ್ಳೆಯವರನ್ನು ಹುಡುಕಿಕೊಂಡು ಬಾ ಎಂದರಂತೆ. ಅವನು ಹಿಂತಿರುಗಿ ಬಂದು ಈ ಪ್ರಪಂಚದಲ್ಲಿ ಒಳ್ಳೆಯವರು ಇಲ್ಲವೇ ಇಲ್ಲ ಎಂದನಂತೆ. ಧನಾತ್ಮಕ ಚಿಂತನೆಯಿಂದ ಮಂಗಳದೃಷ್ಟಿ ಹುಟ್ಟುತ್ತದೆ.

ಆಲೋಚನೆಯ ಧಾಟಿಯನ್ನು ಪ್ರಯತ್ನಪೂರ್ವಕವಾಗಿ ಬದಲಿಸಿಕೊಳ್ಳುವ ಇರಾದೆ ನಮಗೆ ಇದ್ದರೆ ಬಹಳ ಕಾಲದ ಅಭ್ಯಾಸದಿಂದ ನಾವು ಇತ್ಯಾತ್ಮಕ ಅಥವಾ ಧನಾತ್ಮಕ ಚಿಂತನೆಯನ್ನು ರೂಢಿಸಿಕೊಳ್ಳಲು ಸಾಧ್ಯ. ಈ ಧನಾತ್ಮಕ ಚಿಂತನೆಯ ಪ್ರಾಮುಖ್ಯವನ್ನು ಇತ್ತೀಚೆಗಷ್ಟೇ ನಮ್ಮ ಶಿಕ್ಷಣ ಇಲಾಖೆಗಳು ಗುರುತಿಸುತ್ತಿವೆ. ಹಾಗಾಗಿ ಅಧ್ಯಾಪಕರಿಗೆ ಧನಾತ್ಮಕ ಚಿಂತನೆಯ ಶಿಬಿರಗಳನ್ನು ಏರ್ಪಡಿಸುತ್ತಿವೆ.

ನೇತ್ಯಾತ್ಮಕ ಚಿಂತನೆ ಎಲ್ಲಿಂದ ಹುಟ್ಟುತ್ತದೆ? ಅದು ಏಕೆ ನಮ್ಮ ಪ್ರಧಾನ ಆಲೋಚನೆಯ ಧಾಟಿಯಾಗಿದೆ ಎಂಬುದನ್ನು ಕುರಿತು ನಾವು ಚಿಂತಿಸಬೇಕಾಗಿದೆ. ಮಗುವಿನ ಪ್ರತಿಯೊಂದು ನಡವಳಿಕೆಯ ಹಿಂದೆಯೂ ಒಂದು ಕಾರಣವಿರುತ್ತದೆ. ಹುಟ್ಟಿನಿಂದಲೇ ಜೊತೆಗೆ ಬರುವ ಭಯ, ಸಂಶಯ, ಆಕ್ರಮಣಕಾರಿ ಸ್ವಭಾವಗಳು ಜೀವಿಯೊಂದು ಸ್ಪರ್ಧಾತ್ಮಕ ಜಗತ್ತಿನಲ್ಲಿ ಬದುಕುಳಿಯಲು ಅಗತ್ಯವಾಗಿರುವ ಹುಟ್ಟರಿವುಗಳು. ಇದರೊಡನೆ ದುಃಖ-ಖಿನ್ನತೆಗಳು ಹುಟ್ಟುತ್ತವೆ. ಶೈಶವದಲ್ಲಿ ಎಳೆಯ ಮಕ್ಕಳಿಗೆ ದುಃಖವಾದಾಗ, ಅಭದ್ರತೆಯ ಭಯ ಉಂಟಾದಾಗ ತನ್ನ ಪರಿಸರ ಮತ್ತು ಜನಗಳ ಬಗ್ಗೆ ಸಂಶಯ ತಾಳುತ್ತವೆ. ಒಂದು ವೇಳೆ ಯಾರೂ ಮಗುವಿನ ಸಹಾಯಕ್ಕೆ ಬರದಿದ್ದರೆ ಈ ಭಾವನೆಗಳು ನೇತ್ಯಾತ್ಮಕ ಮನೋಧರ್ಮವಾಗಿ ಮಗುವಿನ ಮನಸ್ಸಿನಲ್ಲಿ ಬೇರೂರಬಹುದು. ಮುಂದೆ ನೇತ್ಯಾತ್ಮಕ ಚಿಂತನೆಯ ಧಾಟಿ ಮಗುವಿನ ವ್ಯಕ್ತಿತ್ವದ ಭಾಗವಾಗಬಹುದು. ಆದರೆ ತಾಯಿ ಅಥವಾ ಪೋಷಕರು ಮಗುವಿಗೆ ದುಃಖವಾದಾಗ, ಭಯವಾದಾಗ, ಅದರ ಅಳುವನ್ನು ಗುರುತಿಸಿ ಆರೈಕೆ ಮಾಡಿದರೆ, ಮಗುವಿಗೆ ಮುದನೀಡುವ ಇತ್ಯಾತ್ಮಕ ಭಾವನಾಸಂದೇಶವನ್ನು ಕೃತಿಯ ಮೂಲಕ ತೋರಿದರೆ ಮಗು ಈ ಭಯ, ದುಃಖಗಳು ಉಂಟುಮಾಡಬಹುದಾದ ಶಾಶ್ವತ ನೇತ್ಯಾತ್ಮಕ ಪರಿಣಾಮದಿಂದ ಪಾರಾಗುತ್ತದೆ. ಇಂದಿನ ಮೆದುಳಿಗೆ ಸಂಬಂಧಪಟ್ಟ ಸಂಶೋಧನೆಗಳು ಈ ಅಂಶವನ್ನು ನಿರ್ವಿವಾದವಾಗಿ ತೋರಿಸಿಕೊಟ್ಟಿವೆ. ತಾಯಿಯೊಬ್ಬಳು ಮಗು ಅಳುತ್ತಿರುವಾಗ ಅಥವಾ ರಗಳೆ ಮಾಡುತ್ತಿರುವಾಗ ಅದಕ್ಕೆ ಒಂದು ಕಾರಣವಿದೆ

ಎಂದು ಗುರುತಿಸದೆ ಕೋಪಗೊಂಡು ಮಗುವನ್ನು ಶಿಕ್ಷಿಸಿದರೆ ಇದು ಮಗುವಿನ ಮನಸ್ಸಿನ ಮೇಲೆ ಶಾಶ್ವತವಾದ ನೇತ್ಯಾತ್ಮಕ ಪರಿಣಾಮವನ್ನುಂಟುಮಾಡುತ್ತದೆ. ಒಂದು ವರ್ಷದಷ್ಟು ಎಳೆಯ ಮಕ್ಕಳೂ ತಮ್ಮ ಭಾವನೆಗಳನ್ನು ಹಂಚಿಕೊಳ್ಳುವ ಮೂಲಕ ದುಃಖ ಶಮನಮಾಡಿಕೊಳ್ಳುತ್ತವೆ ಎಂಬ ಸತ್ಯ ಪೋಷಕರಿಗೆ ತಿಳಿದಿರಬೇಕು. ನಿರ್ಲಕ್ಷ್ಯಕ್ಕೆ ಒಳಗಾದ ಎಳೆಯ ಮಕ್ಕಳು ಹಂಚಿಕೊಳ್ಳಲಾರದ ಈ ಭಾವನೆಗಳನ್ನು ತಮ್ಮ ಮನಸ್ಸಿನ ಆಳಕ್ಕೆ ತಳ್ಳಿಬಿಡುತ್ತವೆ. ಹೀಗೆ ಆಳಕ್ಕೆ ತಳ್ಳಲಾದ ಈ ಭಾವನೆಗಳು ಜೀವನಪರ್ಯಂತ ಮನದಾಳದಲ್ಲಿ ಕುಳಿತು ನಿಷ್ಕಾರಣವಾದ ಭಯ-ಸಂಶಯಗಳಿಗೆ ಕಾರಣವಾಗುತ್ತದೆ. ಇದರ ಪರಿಣಾಮವಾಗಿ ಈ ಮಕ್ಕಳ ಮೆದುಳಿನ ರಾಸಾಯನಿಕ ರಚನೆಯೇ ಬದಲಾಗಬಹುದು. ಅಲ್ಲದೆ ನಿಯಂತ್ರಣಕ್ಕೆ ಬಾರದ ಭಾವೋದ್ರೇಕಗಳು ನೇತ್ಯಾತ್ಮಕ ಚಿಂತನೆಗೂ ಕಾರಣವಾಗಬಹುದು. ಶೈಶವದಲ್ಲಿ ಭಾವನಾತ್ಮಕ ನೆರವನ್ನು ಪಡೆದ ಮಕ್ಕಳು ಇತ್ಯಾತ್ಮಕ ಸ್ವಭಾವವನ್ನು ಬೆಳೆಸಿಕೊಳ್ಳುವುದು ಸಂಶೋಧನೆಗಳಿಂದ ದೃಢಪಟ್ಟಿದೆ. ತಮ್ಮ ಭಾವನೆಗಳನ್ನು ಹಂಚಿಕೊಳ್ಳುವ ಮೂಲಕ ದುಗುಡವನ್ನು ಕಡಿಮೆಮಾಡಿಕೊಳ್ಳುವ ಕಲೆಯನ್ನು ಈ ಮಕ್ಕಳು ಕರಗತಮಾಡಿಕೊಳ್ಳುತ್ತವೆ. ಕೆಲವೊಮ್ಮೆ ತಾಯಿಯೊಬ್ಬಳು ಮಾನಸಿಕ ಅಸ್ವಸ್ಥತೆಯಿಂದ ನರಳುತ್ತಿದ್ದರೆ ಅಥವಾ ಖಿನ್ನತೆಯಿಂದ ಬಳಲುತ್ತಿದ್ದರೆ ಅಥವಾ ಸ್ವಭಾವತಃ ಸೋಮಾರಿಯಾಗಿದ್ದರೆ ಇದು ಮಗುವಿನ ಆರೋಗ್ಯದ ಮೇಲೆ ಶಾಶ್ವತ ನೇತ್ಯಾತ್ಮಕ ಪರಿಣಾಮಗಳನ್ನು ಬೀರುತ್ತದೆ. ಒಟ್ಟಿನಲ್ಲಿ ಮಗುವಿಗೆ ಭಾವನಾತ್ಮಕ ನೆರವು ದೊರೆಯದೆ ಇದ್ದರೆ ಅದು ತನ್ನ ಭಾವವೈಪರೀತ್ಯಗಳನ್ನು ಸುಲಭವಾಗಿ ಸಮತೋಲನದಲ್ಲಿ ಹಿಡಿದಿಡುವ ಕಲೆಯನ್ನು ಕಲಿಯುವುದೇ ಇಲ್ಲ. ನಿಯಂತ್ರಣ ತಪ್ಪಿದ ಭಾವನೆಗಳು ನೇತ್ಯಾತ್ಮಕತೆಗೆ ಕೊಂಡೊಯ್ಯುತ್ತವೆ.

ನೇತ್ಯಾತ್ಮಕ ಮನೋಧರ್ಮಕ್ಕೆ ಇಂದಿನ ಜಾಗತೀಕರಣದ ಸಂಸ್ಕೃತಿಯೂ ಕಾರಣ ಎಂಬುದನ್ನು ನಾವು ಗುರುತಿಸಬೇಕು. ವಸ್ತುಪ್ರಧಾನವಾದ ಸಂಸ್ಕೃತಿಯಲ್ಲಿ ಪ್ರತಿಯೊಂದು ಸಹ 'ಪ್ಲಾನ್' ಪ್ರಕಾರ, ಎಂದರೆ ಪೂರ್ವಯೋಜಿತ ಕಾರ್ಯಕ್ರಮದಂತೆ ನಡೆಯಬೇಕು. ಗೆಳೆಯರನ್ನು ನೋಡಬೇಕಾದರೆ, ಅತಿಥಿಗಳು ಬರುವುದಾದರೆ ಎಲ್ಲವೂ ಪೂರ್ವನಿಯೋಜಿತವಾಗಿರಬೇಕು. ಪಾಶ್ಚಾತ್ಯ ಸಂಸ್ಕೃತಿಯ ದುರದೃಷ್ಟಕರ ಅಂಶ ಎಂದರೆ ಅರ್ಥವಿಲ್ಲದ ಪ್ರಮಾಣದಲ್ಲಿ ಅವರು ಅನುಸರಿಸುವ 'ಪ್ರೈವೆಸಿ-ಫಾರ್ಮಾಲಿಟಿ'. ಇದು ಮತ್ತೊಬ್ಬರು ತನಗೆ ತೊಂದರೆ ಕೊಡದಂತೆ ನಿಗ್ರಹಿಸಲು, ಸಾಧ್ಯವಾದರೆ ಇತರರನ್ನು ಸದಾ ಕಾಲವೂ ಅಂಕೆ-ಆಜ್ಞೆಯಲ್ಲಿ ಇಟ್ಟುಕೊಳ್ಳಲು ಸಾಧ್ಯವಾಗಿಸುವ ಒಂದು ತಂತ್ರ. ವಸಾಹತುಶಾಹಿ ಮನಸ್ಸಿನ ಮೂಲಮಂತ್ರ ಇದೇ. ಇದರ ನೆರವಿನಿಂದಲೇ ಬ್ರಿಟಿಷರು ಇಡೀ ಪ್ರಪಂಚವನ್ನು ಆಳಲು ಸಾಧ್ಯವಾಯಿತು. ಭಾವನಾತ್ಮಕ ಸಂಬಂಧಗಳನ್ನು ಲೆಕ್ಕಿಸದಂತಹ ನೇತ್ಯಾತ್ಮಕ ಸ್ವಭಾವವನ್ನು ಬೆಳೆಸಿಕೊಂಡರೆ ಮಾತ್ರ ವಸಾಹತುಶಾಹಿ ಸಾಧ್ಯವಾಗುತ್ತದೆ. ಆಳುವ ನೀತಿಯ ಮತ್ತೊಂದು ಮುಖವನ್ನು ನಾವು 'ಜಾಗತೀಕರಣ'

ಎಂದು ಗುರುತಿಸಬಹುದು. ಇದು ಮನುಷ್ಯನ ವಸ್ತು ಅವಲಂಬನೆಯನ್ನು ಹೆಚ್ಚು ಮಾಡಿ ಭಾವನಾತ್ಮಕ ಬಡತನಕ್ಕೆ ಕಾರಣವಾಗಿದೆ. ಒಟ್ಟಿನಲ್ಲಿ ಅಸ್ಪಷ್ಟವಾದ ಭಾವನಾತ್ಮಕ ವಲಯದಿಂದ ನಿಯಂತ್ರಣಕ್ಕೆ ನೆರವಾಗುವ ವಿಚಾರಪ್ರಧಾನ ಮನೋಧರ್ಮಕ್ಕೆ ನಾವು ದಾಪುಗಾಲು ಇಡುತ್ತಿದ್ದೇವೆ. ಇದರ ಹಿಂದೆ ಇರುವ ಮುಖ್ಯ ಉದ್ದೇಶ ಮಾತ್ರ ವಸ್ತುಲಾಭವೇ ಹೊರತು ಸತ್ಯಶೋಧನೆಯಲ್ಲ. ವೈಚಾರಿಕತೆಯಿಂದ ಸರಕು ಪಡೆಯುವುದೇನೋ ನಿಜ. ಆದರೆ ಜೀವನದ ಅರ್ಥವನ್ನು ಎತ್ತಿ ಹಿಡಿಯುವ, ಜೀವನಸಂತೋಷವನ್ನುಂಟುಮಾಡುವ ನಮ್ಮದೇ ಆದ ಭಾವನಾತ್ಮಕ ವಲಯದಿಂದ ನಾವು ದೂರ ಸರಿಯುತ್ತಿದ್ದೇವೆ. ಇದು ಕೂಡ ನಮ್ಮ ನೇತ್ಯಾತ್ಮಕ ಚಿಂತನೆಗಳಿಗೆ ಕಾರಣ ಎಂಬುದನ್ನು ನಾವು ಗುರುತಿಸಲೇಬೇಕು. ಸರಕು ಸಂಸ್ಕೃತಿ ಮತ್ತು ಸರಕು ಸಮೃದ್ಧಿಯ ನಡುವೆ ಜೀವನಪ್ರೀತಿಯನ್ನು, ಜೀವನದ ಸಂತೋಷವನ್ನು ಕಳೆದುಕೊಂಡಿರುವುದನ್ನು ವಾಸ್ತವವಾಗಿ ಅನುಭವಿಸಿದರೂ ಮನುಷ್ಯ ತಾನು ಕಳೆದುಕೊಂಡಿರುವುದನ್ನು ಒಪ್ಪಲು ತಯಾರಿಲ್ಲ. ಇಂತಹ ಒಂದು ಮಿಥ್ಯಾ ಮನೋಧರ್ಮವನ್ನು ಸೃಷ್ಟಿಸುವಲ್ಲಿ ಜಾಗತೀಕರಣ ಬಹಳ ಯಶಸ್ವಿಯಾಗಿದೆ.

### ಸರಕುಸಂಸ್ಕೃತಿಯ ಪರಿಣಾಮ

ದುಃಖ, ಖಿನ್ನತೆ, ಅಭದ್ರತೆಯ ಅನುಭವಗಳು ಹುಟ್ಟರಿವುಗಳಾಗಿ ಬರುವುದರ ಜೊತೆ ಜೊತೆಗೆ ಜಾಗತೀಕರಣ ರೂಪಿಸುವ ಮಿಥ್ಯಾ ಮನೋಧರ್ಮವು ನೇತ್ಯಾತ್ಮಕತೆಯ ಹೆಚ್ಚಳಕ್ಕೆ ಕಾರಣವಾಗಿದೆ. ಮೊದಲನೆಯದಾಗಿ ಸರಕುಸಂಸ್ಕೃತಿಯಿಂದಾಗಿ ಮನುಷ್ಯಸಂಬಂಧಗಳಲ್ಲಿ ಭಾವನಾತ್ಮಕ ಬೆಸುಗೆ ಕಡಿಮೆಯಾಗುತ್ತಿದೆ. ಇದು ಎಲ್ಲ ಬಗೆಯ ಮನುಷ್ಯಸಂಬಂಧಗಳ ಮೇಲೂ ಪ್ರಭಾವ ಬೀರುತ್ತಿದೆ. ಈ ಪ್ರಭಾವಕ್ಕೆ ನಮ್ಮ ತಾಯಂದಿರೂ ಹೊರತಲ್ಲ. ತಾಯಿ ತನ್ನ ಮಗುವಿಗೆ ನೀಡುವ ಭಾವನಾತ್ಮಕ ನೆರವಿನಲ್ಲೂ ಜಾಗತೀಕರಣದ ಕಪ್ಪುನೆರಳು ಕಾಣುತ್ತಿದೆ. ಒಮ್ಮೆ ನಾನು ಸೂಪರ್ ಮಾರ್ಕೆಟ್ ಒಂದರಲ್ಲಿ ತಾಯಿ ತನ್ನ ಮೂರು ವರ್ಷದ ಮಗುವಿನೊಡನೆ ನಡೆಯುತ್ತಿದ್ದುದನ್ನು ಗಮನಿಸಿದೆ. ಆ ಯುವ ತಾಯಿಗೆ ತನ್ನ ಗಮನವೆಲ್ಲ ತನ್ನ ಸೌಂದರ್ಯದ ಕಡೆಗೆ. ತಾಯಿ ಎತ್ತಿಕೊಳ್ಳಲಿ ಎಂದು ಮಗು ಅಳುತ್ತಿತ್ತು. ಆದರೆ ಈ ತಾಯಿಗೆ ತಾನು ತನ್ನ ಮಗುವನ್ನು 'ಗಾಢವಾಗಿ ಪ್ರೀತಿಸುವ ತಾಯಿ' ಎಂದು ಕಾಣಿಸಿಕೊಳ್ಳಲು ಏನೋ ಹಿಂಜರಿಕೆ. ಬಹುಶಃ ಈ ತಾಯಿಗೆ ತನ್ನ ಸೌಂದರ್ಯಕ್ಕಾಗಿ ಮೀಸಲಾಗಿಟ್ಟ ಮನಸ್ಸಿನ ಬಹುದೊಡ್ಡ ಭಾಗವನ್ನು ತಾಯ್ತನದ ಬದ್ಧತೆಯ ಜೊತೆ ವಿನಿಮಯಮಾಡಿಕೊಳ್ಳಲು ಎಳ್ಳಷ್ಟೂ ಇಷ್ಟವಿರಲಿಲ್ಲ ಎಂದು ಕಾಣುತ್ತದೆ. ಆ ತಾಯಿ ತನ್ನ ಮಗುವಿನ ವೇದನೆಯ ಧ್ವನಿಗೆ ಎಷ್ಟು ಕಿವುಡಾಗಿದ್ದಳು ಎಂದರೆ ತನ್ನ ಪ್ರಸನ್ನಚಿತ್ತವನ್ನು ಸ್ವಲ್ಪವೂ ಕಳೆದುಕೊಳ್ಳದೆ ಮಗುವನ್ನು ನಿರ್ಲಕ್ಷಿಸುತ್ತಿದ್ದಳು. ಸೌಂದರ್ಯಸಂಬಂಧವಾದ ಜಾಹೀರಾತುಗಳು ಈ ತಾಯಿಯ ಮನಸ್ಸನ್ನು ಎಷ್ಟು

ಹೊಕ್ಕಿವೆ ಎಂದರೆ ಅದು ತಾಯ್ತನವನ್ನೂ ಮರೆಸುವಷ್ಟು ಶಕ್ತಿಶಾಲಿಯಾಗಿತ್ತು. ತಾಯಿಯಾಗಿದ್ದರೂ ಸುಂದರಿಯಾಗಿ ಕಾಣುತ್ತ ಅನೇಕಾನೇಕ ಯುವಕರ ಹೃದಯ ಢವಗುಟ್ಟುವಂತೆ ಮಾಡಬಹುದೆಂದು ನಮ್ಮ ಕಂಪನಿಗಳು ವಿಶೇಷ 'ಕಾಸ್ಮೆಟಿಕ್' ಜಾಹೀರಾತುಗಳನ್ನು ಸೃಷ್ಟಿಸಿವೆ. ಇಂತಹ ಒಂದು ಭಾವನೆ ಸರಳವಾದ ಜನಗಳ ಮನಸ್ಸಿನಲ್ಲಿ ಬೇರೂರಲು ಪೂರಕವಾಗಿರುವ ಪರಿಸರವನ್ನು ಜಾಗತೀಕರಣದ ಮಾರುಕಟ್ಟೆ ಸೃಷ್ಟಿಸಿದೆ. ಇದರ ಒಟ್ಟು ಸಂದೇಶ ತಾಯ್ತನವನ್ನೂ ಲೆಕ್ಕಿಸದೆ ಸೌಂದರ್ಯವನ್ನು ಕಾಪಾಡಿಕೊಳ್ಳಲು ಸೌಂದರ್ಯವರ್ಧಕಗಳನ್ನು ಕೊಳ್ಳಬೇಕು. ಇದರ ಪರಿಣಾಮವೆಂದರೆ ಮಗುವಿಗೆ ತಾಯಿಯಾದವಳು ನೀಡಬೇಕಾದ ಭಾವನಾತ್ಮಕ ಸಹಸ್ಪಂದನಗಳ ಅಭಾವ. ಮಗು ಇದರಿಂದಾಗಿ 'Emotional deprivation' ನಿಂದ ಬಳಲುತ್ತದೆ. ಇದು ಮತ್ತೆ ನೇತ್ಯಾತ್ಮಕತೆಗೆ ಕಾರಣವಾಗುತ್ತದೆ. 'Emotional deprivation' ಅಥವಾ ಭಾವನಾತ್ಮಕ ಸಹಸ್ಪಂದನಗಳ ಅಭಾವದಿಂದ ಬಳಲುವ ಮಕ್ಕಳು ಬೆಳೆದಂತೆಲ್ಲ ತಮ್ಮೊಳಗಿನ ಭಾವನಾ ಬುದ್ಬುದಗಳನ್ನು ನಿಯಂತ್ರಿಸಲಾರದೆ ನೇತ್ಯಾತ್ಮಕ ಸೆಳೆತಗಳ ತೂಯ್ದಾಟದಲ್ಲಿ ತೊಳಲುತ್ತಇಡೀ ಜೀವನವನ್ನು ಕಳೆಯುತ್ತಾರೆ.

ಈ ಸಂದರ್ಭದಲ್ಲಿ ಶಿವರಾಮಕಾರಂತರ ಅಣ್ಣ ಕೋ.ಲ.ಕಾರಂತರು ತಮ್ಮ 'ಮುಪ್ಪಿನಂಗಳದಲ್ಲಿ ಮುಸ್ಸಂಜೆಯ ಹೊತ್ತು' ಎಂಬ ಪುಸ್ತಕದಲ್ಲಿ ದಾಖಲಿಸಿರುವ ಘಟನೆ ನೆನಪಿಗೆ ಬರುತ್ತದೆ. ಮಕ್ಕಳಿಲ್ಲದ ಅಜ್ಜಿಗೆ ಚಿಕ್ಕಮಕ್ಕಳನ್ನು ಕಂಡರೆ ಬಹಳ ಪ್ರೀತಿ. ಮಕ್ಕಳು ಅಜ್ಜಿಯ ಮನೆಯ ಅಂಗಳದಲ್ಲಿ ಆಡುತ್ತಾರೆ. ಅದನ್ನು ನೋಡಿ ಅಜ್ಜಿ ಸಂತೋಷಪಡುತ್ತಾಳೆ. ಅಷ್ಟೇ ಅಲ್ಲ; ಮಕ್ಕಳು ಬರುವ ಮೊದಲು ತನ್ನ ಮನೆಯ ಮುಂದಿನ ಮಣ್ಣಿನ ಅಂಗಳಕ್ಕೆ ನೀರು ಸಿಂಪಡಿಸುತ್ತಾಳೆ. ಮಕ್ಕಳು ಅಜ್ಜಿಯ ಅಂಗಳದಲ್ಲಿ ಕುಣಿದು ಕುಪ್ಪಳಿಸಿ ನಿರ್ಗಮಿಸಿದ ನಂತರ ಆ ಅಂಗಳದ ತುಂಬಾ ಪುಟ್ಟ ಪುಟ್ಟ ಹೆಜ್ಜೆ ಗುರುತುಗಳು ಉಳಿದಿರುತ್ತವೆ. ಅಜ್ಜಿ ಆ ಹೆಜ್ಜೆ ಗುರುತುಗಳನ್ನು ಪದೇಪದೇ ನೋಡಿ ಆನಂದಪಡುತ್ತಾಳೆ.

ಇದೊಂದು ಸಾಧಾರಣ ಘಟನೆಯಂತೆ ಕಂಡುಬಂದರೂ ಅಜ್ಜಿಯ ಪ್ರೀತಿ ನಿಸ್ಪೃಹವಾಗಿ, ಸರಳವಾಗಿ, ಅವ್ಯಾಜವಾಗಿ ಮಕ್ಕಳ ಕಡೆ ಹರಿಯುತ್ತದೆ. ನಮ್ಮ ಸೂಪರ್ ಮಾರ್ಕೆಟ್ 'ತಾಯಿ' ಅಥವಾ ಸೂಪರ್ ಮಾರ್ಕೆಟ್ 'ಅಜ್ಜಿ' ಯರಿಗೆ ಇಂತಹ ಸರಳಪ್ರೀತಿ ಸಾಧ್ಯವಾಗುವುದೆ? ಇವರು ಪ್ರೀತಿಯೇ ಇಲ್ಲದೆ ಹುಟ್ಟಿದರು ಎಂದು ಭಾವಿಸಲಾಗದು. ಆದರೆ ಈ ಅಮೂಲ್ಯವಾದ ಬದುಕಿಗೆ ಮುದನೀಡುವ ಪ್ರೀತಿ ನಾವೇ ರಚಿಸಿಕೊಂಡಿರುವ ಅನೇಕ ಶಿಷ್ಟಾಚಾರ ಮತ್ತು ತಾಂತ್ರಿಕತೆಗಳ ಜಾಲರಿಯ ಮೂಲಕ ಹಾಯ್ದು ಬರಬೇಕಾಗಿದೆ. ಈ ಎಲ್ಲವನ್ನೂ ದಾಟಿ ಕೊನೆಗೆ ಹೊರಬಂದ ಪ್ರೀತಿ ತಾಂತ್ರಿಕತೆಯ ಸ್ವರೂಪವನ್ನು ಪಡೆಯುವ ಸಾಧ್ಯತೆಯೇ ಹೆಚ್ಚು. ಅಥವಾ ಅದು ಹೊರಬರಲಾರದೆ ಒಳಗೇ ಮುರುಟಿ ಹೋಗಬಹುದು. ಈ ಕಾರಣದಿಂದ ತಾಂತ್ರಿಕತೆ ನಮ್ಮ ಸಂತೋಷವನ್ನು ಹೆಚ್ಚಿಸುವ

ಬದಲು ಅಳಿದುಳಿದ ಸಂತೋಷವನ್ನೂ ಕಸಿದುಕೊಂಡು ಆ ಸ್ಥಾನವನ್ನು "ತಾಂತ್ರಿಕವಾಗಿ ಇದು ಸರಿ, ಆದ್ದರಿಂದ ಇದೇ ಮನುಷ್ಯ ಜೀವನದಲ್ಲಿ ನಾನು ಪಡೆಯಬೇಕಾದ ಪರಮೋಚ್ಚ ಫಲ" ಎಂಬಂತಹ ಭಾವನೆಯನ್ನು ಕೊಡುತ್ತದೆ. ತಾಂತ್ರಿಕ ನಿಷ್ಠೆ ಮತ್ತು ಪ್ರೀತಿಯ ನಿಷ್ಠೆಗಳ ನಡುವೆ ತಾಂತ್ರಿಕ ನಿಷ್ಠೆಯೇ ಗೆಲ್ಲುತ್ತಿರುವುದು ನಮ್ಮ ಇಂದಿನ ದುರಂತ.

ತಾಂತ್ರಿಕವಾಗಿ ಸಮಂಜಸವಾದದ್ದು ಪರಮೋಚ್ಚ ಸತ್ಯ, ವೈಚಾರಿಕವಾಗಿ ಕಂಡುಕೊಂಡದ್ದೆಲ್ಲವೂ ಕಟ್ಟಕಡೆಯ ಸತ್ಯ ಎಂಬ ನಿಲುವಿಗೆ ನಾವು ಬಂದು ನಿಂತಿದ್ದೇವೆ. ಇದನ್ನು ಗಾಂಧೀಜಿ ಪ್ರಶ್ನಿಸುತ್ತಾರೆ. ತಾಂತ್ರಿಕವಾಗಿ, ವೈಚಾರಿಕವಾಗಿ ಒಂದು ನಿರ್ದಿಷ್ಟ ಸಂದರ್ಭದಲ್ಲಿ ನಾವು ಕಂಡುಕೊಂಡ ಸತ್ಯ ತಾರ್ಕಿಕವಾಗಿ ಸಮಂಜಸವೆನಿಸಬಹುದು. ಆದರೆ ಅದೇ ಅಂತಿಮ ಸತ್ಯವಾಗಿರಬೇಕಾಗಿಲ್ಲ. ಯಾವ ಮನೋಧರ್ಮದ ಆಧಾರದ ಮೇಲೆ ವಿಚಾರ ಪ್ರತಿಪಾದನೆಯಾಗಿದೆ ಎಂಬುದನ್ನು ಆಧರಿಸಿ ವೈಚಾರಿಕತೆಯ ಫಲಶ್ರುತಿ ಪವಿತ್ರವೋ ಅಪವಿತ್ರವೋ ಎಂದು ನಿರ್ಧರಿಸಬೇಕಾಗುತ್ತದೆ. ನಮ್ಮೊಳಗೇ ಈ ವೈಚಾರಿಕತೆಯನ್ನು (Rational Element) ಪವಿತ್ರಗೊಳಿಸಬಲ್ಲ ಒಂದು ಘಟಕ ಇದೆ. ಗಾಂಧೀಜಿ ಹೇಳುತ್ತಾರೆ – 'ದಯವಿಟ್ಟು ಇಂತಹದು ಒಂದು ಇದೆ ಎಂಬುದನ್ನು ಗುರುತಿಸಿ'. ಈ ಸಂದರ್ಭದಲ್ಲಿ ಐನ್‌ಸ್ಟೈನ್ ಅವರ ಮಾತನ್ನು ನೆನಪಿಸಿಕೊಳ್ಳುವುದು ಒಳಿತು. ಅವರು ಹೇಳುತ್ತಾರೆ – ಯಾವುದೇ ವಾದ ಅಥವಾ ಥಿಯರಿಗೆ ಹುಟ್ಟು, ಬೆಳವಣಿಗೆ, ಪರಾಕಾಷ್ಠತೆ (Climax) ಮತ್ತು ಇಳಿಮುಖ (decline) ಎಂಬುದು ಇರುತ್ತದೆ. ಎಂದರೆ ತಾರ್ಕಿಕವಾಗಿ ಪ್ರತಿಪಾದಿಸಿದ ಯಾವುದೇ ವಾದ ಅಚಲವಾದ ಪರಮಸತ್ಯವಲ್ಲ. ಮನುಷ್ಯನ ಗ್ರಹಿಕೆ ವಿಸ್ತಾರಗೊಂಡಂತೆ ಅದೇ ತರ್ಕವನ್ನು ಪುನರ್ವಿಂಗಡಿಸಿ ಸೃಜನಶೀಲ ಆಯಾಮದಲ್ಲಿ ಮತ್ತೊಮ್ಮೆ ಪ್ರತಿಪಾದಿಸಿದಾಗ ಅದು ಈವರೆಗೆ ಪ್ರಚಲಿತವಿದ್ದ ನಂಬಿಕೆಯನ್ನು ಸಡಿಲಗೊಳಿಸುತ್ತದೆ, ಹೊಸ ತಿಳುವಳಿಕೆಗೆ ಕೊಂಡೊಯ್ಯುತ್ತದೆ. ಅಲ್ಲದೆ ಗಾಂಧೀಜಿ ಹೇಳುವಂತೆ, ಹುಟ್ಟುವ ಎಲ್ಲಾ ತರ್ಕಗಳು ನಮ್ಮೊಳಗಿನ ಪವಿತ್ರ ಆಂತರಿಕ ಸ್ರೋತದ ಝರಿಯಿಂದ ಹೊರಹೊಮ್ಮಿದರೆ ಅದು ಜೀವನಪ್ರೀತಿಯನ್ನು ಉಳಿಸಿಕೊಡುತ್ತದೆ ಮತ್ತು ಸಹಜ ಬದುಕು ವಿಚಾರಕ್ಕಿಂತಲೂ ತರ್ಕ ಪ್ರತಿಪಾದಿಸುವ ಯಾವುದೇ ಸತ್ಯಕ್ಕಿಂತಲೂ ಹೆಚ್ಚು ಅಪ್ಯಾಯಮಾನವೂ ಮುಖ್ಯವೂ ಆಗಿದೆ ಎಂಬುದನ್ನು ತೋರಿಸಿಕೊಡುತ್ತದೆ.

ವಸ್ತುಗಳನ್ನು ಕೊಂಡುಕೊಳ್ಳುವ ಮೂಲಕ ನಾವು ಸಂತೋಷವಾಗಿರಬಲ್ಲೆವು ಎಂಬ ಮನೋಧರ್ಮ ಮನುಷ್ಯಸಂಬಂಧಗಳನ್ನು, ಅದರಿಂದ ಹುಟ್ಟುವ ಸಂತೋಷವನ್ನು ಕಡೆಗಣಿಸುತ್ತದೆ. ಜಾಗತೀಕರಣದ ಯಶಸ್ಸಿನ ಮೂಲಗುಟ್ಟು ಜನಗಳ ದೌರ್ಬಲ್ಯಗಳಲ್ಲಿ ಅಡಗಿದೆ ಎಂಬುದನ್ನು ನಾವು ಗುರುತಿಸಬೇಕು. ಮನುಷ್ಯನ ಮನಸ್ಸಿನಲ್ಲಿರುವ ಎಲ್ಲ ಬಗೆಯ ದೌರ್ಬಲ್ಯಗಳನ್ನು ಜಾಗತೀಕರಣ ಬಂಡವಾಳ ಮಾಡಿಕೊಂಡಿದೆ. ಹಾಗೆ ನೋಡಿದರೆ ಎಲ್ಲ ವ್ಯಾಪಾರಿ ಸಂಸ್ಥೆಗಳು ಅಗತ್ಯಕ್ಕಿಂತ ಅಧಿಕವಾದ ಕೃತಕ ಆವಶ್ಯಕತೆಗಳನ್ನು

ಸೃಷ್ಟಿಸಿ ಅವನ ದೌರ್ಬಲ್ಯವನ್ನು ಬಂಡವಾಳ ಮಾಡಿಕೊಂಡು ಬೆಳೆಯುವುದೇ ಹೆಚ್ಚು. ಅಲ್ಪ ತೃಪ್ತಿ, ಪರಸ್ಪರ ಪ್ರೀತಿಗಳು ಬಹುಶಃ ಮನುಷ್ಯನ ವಸ್ತುಸಂಬಂಧಿ ಅವಲಂಬನೆಯನ್ನು ಕಡಿಮೆ ಮಾಡುವುದರಿಂದ ಇದು ಜಾಗತಿಕ ಮಾರುಕಟ್ಟೆಗೆ ಅಡಚಣೆ. ಹಾಗಾಗಿ ತನ್ನದೇ ಆದ ಕುಟಿಲ ವಿಧಾನಗಳಿಂದ ಜಾಗತಿಕ ಮಾರುಕಟ್ಟೆ ಮನುಷ್ಯ ಸಂಬಂಧಗಳು ಹದಗೆಡುವಂತೆ ಮಾಡುತ್ತದೆ. ವಸ್ತುವಿಗೆ ಹೊರತಾದ ಭಾವನಾತ್ಮಕ ಸಂಬಂಧಗಳ ಸೌಂದರ್ಯ ಮನುಷ್ಯ ವ್ಯವಹಾರದಲ್ಲಿ ಮುಖ್ಯ ಪಾತ್ರ ವಹಿಸುವುದೇ ಇಲ್ಲ. ದಿನೇದಿನೇ ಭಾವನೆಗಳು ಬಡವಾಗುತ್ತವೆ. ಒಂದು ರೋಗಗ್ರಸ್ತ ಸಮಾಜ ಹುಟ್ಟಲು ಇದಕ್ಕಿಂತ ಹೆಚ್ಚಿನದೇನೂ ಬೇಡ. ಈಗಾಗಲೇ ನಮ್ಮ ಸಮಾಜ ರೋಗಗ್ರಸ್ತವಾಗಿದೆ. ಇದಕ್ಕೆ ಕಾರಣ ಸರಕುಸಂಸ್ಕೃತಿ. ಸರಕುಸಂಸ್ಕೃತಿಯಿಂದ ಭಾವನೆಗಳು ಬಡವಾಗುತ್ತವೆ. ಭಾವನೆಗಳು ಬಡವಾದರೆ ಅವು ಅನಾರೋಗ್ಯಕರ ತಿರುವು ಪಡೆಯುತ್ತವೆ. ಇದು ನೇತ್ಯಾತ್ಮಕ ಚಿಂತನೆಗೆ ಕಾರಣವಾಗುತ್ತದೆ. ನೇತ್ಯಾತ್ಮಕ ಚಿಂತನೆ ಮತ್ತಷ್ಟು ರೋಗಗ್ರಸ್ತ ಮನಸ್ಸುಗಳಿಗೆ ಕಾರಣವಾಗುತ್ತದೆ. ಹೀಗೆ ವಿಷವರ್ತುಲ ಮುಂದುವರಿದು ಸಮಾಜದ ಎಲ್ಲರೂ ರೋಗಗ್ರಸ್ತರಾಗಿ ನೇತ್ಯಾತ್ಮಕ ಚಿಂತನೆಗಳೇ ಸಮಾಜದ ಪ್ರಧಾನ ಮನೋಧರ್ಮವಾಗಿ ಬಿಡುತ್ತದೆ. ಕೆಟ್ಟವರೇ ಹೆಚ್ಚು ಸಂಖ್ಯೆಯಲ್ಲಿರುವ ಸಮಾಜದಲ್ಲಿ ಮತ್ತಷ್ಟು ಕೆಟ್ಟವರು ಸುಲಭವಾಗಿ ಸೇರ್ಪಡೆಯಾಗುತ್ತಾರೆ. ಈ ನೇತ್ಯಾತ್ಮಕ ಚಿಂತನೆಗಳು ಶೈಶವ–ಬಾಲ್ಯಗಳನ್ನು ಹೊಕ್ಕು ವಿಚ್ಛಿದ್ರಕಾರಿ ಮನಸ್ಸುಗಳನ್ನು ಸೃಷ್ಟಿಸಬಲ್ಲುದು. ನೇತ್ಯಾತ್ಮಕತೆ ಅಸಹನೀಯವಾದಾಗ ಮಾತ್ರ ಎಲ್ಲರೂ ಮೌಲ್ಯಗಳ ಕುರಿತು, ಅಧ್ಯಾತ್ಮದ ಕುರಿತು ಮಾತನಾಡುತ್ತಾರೆ. ಹಿಂದೆ ಎರಡನೇ ಮಹಾಯುದ್ಧದ ಸಮಯದಲ್ಲಿ ಅಮೆರಿಕಾದ ಅಧ್ಯಾಪಕರು ಶಾಲಾ ಪಠ್ಯಕ್ರಮದಲ್ಲಿ ಅಧ್ಯಾತ್ಮವನ್ನು ಸೇರಿಸಬೇಕೆಂದು ಸಲಹೆ ನೀಡಿದ್ದರಂತೆ. ಏಕೆಂದರೆ ಯುದ್ಧಕ್ಕೆ ಕಾರಣವಾದ ಅಂದಿನ ರಾಜಕೀಯ, ಸಾಮಾಜಿಕ ಪರಿಸ್ಥಿತಿಗಳು ಕೇವಲ ಬೌದ್ಧಿಕ ಕಸರತ್ತಿನಿಂದ ಪರಿಹರಿಸಬಹುದಾದ ಸಮಸ್ಯೆಗಳಾಗಿರಲಿಲ್ಲ. ಬೌದ್ಧಿಕತೆಯನ್ನು ಮೀರಿದ ಉನ್ನತ ಭಾವನೆಗಳಷ್ಟೇ ಇದಕ್ಕೆ ಪರಿಹಾರವಾದೀತೆಂದು ಆ ಅಧ್ಯಾಪಕರು ಮನಗಂಡಿದ್ದರೆಂದು ಕಾಣುತ್ತದೆ. ಹಾಗೆಯೇ ಯುದ್ಧದಲ್ಲಿ ಸತ್ತ ಸೈನಿಕನೊಬ್ಬನ ಜೇಬಿನಲ್ಲಿ ಒಂದು ಪುಸ್ತಕ ದೊರೆಯಿತಂತೆ. ಅದರಲ್ಲಿ ಆತ ಬರೆದಿದ್ದನಂತೆ "ಮನುಷ್ಯರಿಗೆ ಉನ್ನತವಾದ ಒಂದು ಧರ್ಮ ಬೇಕು. ಅದು ಇಲ್ಲದೇ ಇರುವುದರಿಂದಲೇ ಯುದ್ಧಗಳು ಸಂಭವಿಸುತ್ತಿವೆ, ಅನಾಹುತಗಳಾಗುತ್ತವೆ" ಎಂದು. ಬಹುಶಃ ಈ ಸೈನಿಕ ಮಾನವೀಯ ಮೌಲ್ಯಗಳು ಉತ್ತಮವಾದ ಧರ್ಮದಿಂದ ಹುಟ್ಟುತ್ತವೆ ಎಂದು ಭಾವಿಸಿದ್ದಿರಬೇಕು. ಏನೇ ಆದರೂ ನೇತ್ಯಾತ್ಮಕ ಚಿಂತನೆಗಳು ಸಮಾಜದಲ್ಲಿ ಹೆಚ್ಚಾಗದಂತೆ ತಡೆಯಬೇಕಾದರೆ ಅದು ಸರಕು ಸಂಸ್ಕೃತಿಯ ಮಿಥ್ಯೆಯನ್ನು ಬಯಲು ಮಾಡುವುದರಿಂದ ಮಾತ್ರ ಸಾಧ್ಯ.

ಧನಾತ್ಮಕ ಚಿಂತನೆಯ ಶಿಬಿರಗಳನ್ನು ಶಿಕ್ಷಣ ಇಲಾಖೆ ಇತ್ತೀಚೆಗೆ ನಡೆಸುತ್ತಿರುವುದು ಸ್ತುತ್ಯರ್ಹ. ಮಕ್ಕಳ ಒಡನಾಟದಲ್ಲಿ ಅಧ್ಯಾಪಕರು ಈ ಧನಾತ್ಮಕ ಚಿಂತನೆಗಳ ಪ್ರಾಮುಖ್ಯವನ್ನು

ಅರಿತು ಮಕ್ಕಳಿಗೆ ನೆರವು ನೀಡುವುದು ಅಗತ್ಯ. ಜೊತೆಗೆ ಪೋಷಕರೂ ಇದನ್ನು ಗಮನಿಸಬೇಕು. ಮಗುವಿನ ಭಾವನಾತ್ಮಕ ವ್ಯಕ್ತಿತ್ವವನ್ನು ನಿರಾಕರಿಸಿದರೆ ಅದು ಮುಂದೆಂದೂ ಸರಿಪಡಿಸಲಾಗದ ನೇತ್ಯಾತ್ಮಕತೆಗೆ ಕಾರಣವಾಗುತ್ತದೆಂದು ಸಂಶೋಧನೆಗಳು ತಿಳಿಸುತ್ತವೆ. ಆದರೆ ಅಸಂಖ್ಯಾತರಾದ ಅನಾಥ ಮಕ್ಕಳ ಬಹುದೊಡ್ಡ ಸಮಸ್ಯೆ ಎಂದರೆ ಭಾವನಾತ್ಮಕ ನೆರವಿನ ಅಭಾವ. ದಲೈ ಲಾಮ ಅವರೊಡನೆ ಕೆಲವು ವಿಜ್ಞಾನಿಗಳು ಮನುಷ್ಯನಲ್ಲಿ ವಿಧ್ವಂಸಕಕಾರಿ ಚಿಂತನೆಗಳು ಹೇಗೆ ಹುಟ್ಟುತ್ತವೆ ಎಂದು ಒಂದು ಚರ್ಚೆಯಲ್ಲಿ ತೊಡಗಿದ್ದರು. ಆ ಚರ್ಚೆಯ ಸಂದರ್ಭದಲ್ಲಿ ಮೆದುಳಿನ ವಿಜ್ಞಾನಿಗಳು ಮೆದುಳಿನ ಸಂಶೋಧನೆಗಳನ್ನು ವಿವರಿಸುತ್ತಾ "Emotional deprivation" ಎಂದರೆ ಮಗುವಿಗೆ ಭಾವನಾತ್ಮಕ ನಿರಾಕರಣೆಯಾದಾಗ ಉಂಟಾಗುವ ಪರಿಣಾಮವನ್ನು ವಿವರಿಸಿದರು. ಯಾವ ಮಕ್ಕಳು ಶೈಶವ- ಬಾಲ್ಯಗಳಲ್ಲಿ ಇಂತಹ ನಿರಾಕರಣೆಗೆ ಒಳಗಾಗಿರುತ್ತಾರೋ ಅವರು ಮುಂದೆ ತಮ್ಮ ಭಾವನೆಗಳನ್ನು ಸಮತೋಲನದಲ್ಲಿಡಲು ವಿಫಲರಾಗಿ, ಕೊನೆಗೆ ವಿಚ್ಛಿದ್ರಕಾರಿ ಮನಸ್ಸುಗಳ ಒಡೆಯರಾಗುತ್ತಾರೆ. ಏಷ್ಯಾ ಮತ್ತು ಆಫ್ರಿಕಾಗಳಲ್ಲಿ ಅನಾಥ ಮಕ್ಕಳ ಸಂಖ್ಯೆ ಹೆಚ್ಚಾಗುತ್ತಿರುವ ಬಗ್ಗೆ ಮತ್ತು ಆ ಕಾರಣದಿಂದ ಅವರೆಲ್ಲಾ ಭಾವನಾತ್ಮಕ ನಿರಾಕರಣೆಗೆ ಒಳಗಾಗುತ್ತಿರುವ ಬಗ್ಗೆ ಚರ್ಚೆ ನಡೆಯಿತು. ಆಫ್ರಿಕಾದ ಶೇಕಡ ಇಪ್ಪತ್ತೇಳರಷ್ಟು ಮಹಿಳೆಯರು ಹೆಚ್.ಐ.ವಿ. ಪೀಡಿತರಾಗಿರುವುದರಿಂದ ಆಫ್ರಿಕಾ ಏಷ್ಯಾ ಖಂಡಗಳಲ್ಲಿ ಮಿಲಿಯಂತರ ಮಕ್ಕಳು ತಾಯಿಯ ಪ್ರೀತಿಯಿಂದ ವಂಚಿತರಾಗುತ್ತಾರೆ ಅಥವಾ ಭಾವನಾತ್ಮಕ ನಿರಾಕರಣೆಗೆ ಒಳಗಾಗುತ್ತಾರೆ. ಇಂತಹ ಮಕ್ಕಳು ಮುಂದೆ ನೇತ್ಯಾತ್ಮಕ ಚಿಂತನೆಗಳ ಗುಡಾಣವಾಗಿ ಬಿಡುತ್ತಾರೆ. ಈ ಕುರಿತು ಚರ್ಚಿಸಿದಾಗ ದಲೈ ಲಾಮ ಅವರು ತೀವ್ರವಾಗಿ ನೊಂದು ದುಃಖಿತರಾದರಂತೆ. ಈ ಸಂದರ್ಭದಲ್ಲಿ "ನಾವು ಮಕ್ಕಳನ್ನು ಪ್ರೀತಿಸಿದ್ದರೆ ಪ್ರಪಂಚದಲ್ಲಿ ಯುದ್ಧವೆಂಬುದೇ ಇರುತ್ತಿರಲಿಲ್ಲ" ಎಂಬ ಜೆ. ಕೃಷ್ಣಮೂರ್ತಿ ಯವರ ಮಾತು ನೆನಪಾಗುತ್ತದೆ.

## ವಸ್ತುಗಳಿಗಿಂತ ಮನುಷ್ಯನೇ ಮುಖ್ಯ

ಮನುಷ್ಯ ಯಾರು? ಅವನು ಪಡೆದಿರುವ ಕೌಶಲಗಳು ಅವನನ್ನು ಪ್ರತಿನಿಧಿಸುತ್ತವೆಯೆ ಅಥವಾ ಅವನು ಪಡೆದುಕೊಂಡಿರುವ ಮೌಲ್ಯಗಳು ಅವನನ್ನು ಪ್ರತಿನಿಧಿಸುತ್ತವೆಯೆ? ಮನುಷ್ಯ ಕಳೆದುಹೋಗುತ್ತಿದ್ದಾನೆ ಎಂದು ನಾವು ಮಾತನಾಡುವಾಗ ಈ ಎರಡರಲ್ಲಿ ಯಾವುದು ಕಳೆದುಹೋಗುತ್ತಿದೆ? ತಾತ್ತ್ವಿಕವಾಗಿ ಮಾತನಾಡುವಾಗ ನಾವು ಮೌಲ್ಯಗಳ ಕುರಿತಾಗಿಯೇ ಮಾತನಾಡುತ್ತೇವೆ. ಮನುಷ್ಯನನ್ನು ನಾವು ಅವನ ಮೌಲ್ಯಗಳೊಂದಿಗೆ ಗುರುತಿಸುತ್ತೇವೆ. ಆದರೆ ನಮ್ಮ ಶಾಲಾಶಿಕ್ಷಣ ಇಂದು ಒತ್ತುಕೊಡುತ್ತಿರುವುದು ಪರಿಣತಿ- ಕೌಶಲ-ತಂತ್ರಜ್ಞಾನಗಳಿಗೆ. ಮೌಲ್ಯವಂತ ವ್ಯಕ್ತಿಗಳು ನಮ್ಮ ಶಾಲಾವ್ಯವಸ್ಥೆಯಲ್ಲಿ ಮನ್ನಣೆ ಗಳಿಸುವುದೇ ಇಲ್ಲ. ಶಾಲಾವ್ಯವಸ್ಥೆ ಹೀಗೆ ಒಬ್ಬನಿಗೆ ಕೌಶಲ ಇರಲಿ ಇಲ್ಲದಿರಲಿ, ಪರಿಣತಿ

ಇರಲಿ ಇಲ್ಲದಿರಲಿ, ಆತ ಮೌಲ್ಯವಂತ ಶಿಕ್ಷಕ ಎಂಬ ಕಾರಣಕ್ಕಾಗಿ ಅವನನ್ನು ವಿಶೇಷವಾಗಿ ಗುರುತಿಸಿ ಅಂತಹವರ ಬದ್ಧತೆಯನ್ನು, ಅವರು ಅನುಸರಿಸುತ್ತಿರುವ ತತ್ತ್ವಗಳನ್ನು, ಮೌಲ್ಯಗಳನ್ನು ಗುರುತಿಸಿ ಗೌರವಿಸುತ್ತದೆಯೇ? ಮೌಲ್ಯಗಳಿಗೆ ಮನ್ನಣೆ ಇಲ್ಲದ ಸ್ಥಳದಲ್ಲಿ ಮಕ್ಕಳು ಮೌಲ್ಯಗಳನ್ನು ಗಳಿಸುವುದಾದರೂ ಹೇಗೆ? ಪರೀಕ್ಷೆಯ ಅಂಕಗಳಿಗಿಂತ ಶಾಲಾ ಬಾಲಕರ ಬಾಲಕಿಯರ ಮೌಲ್ಯವೇ ಮುಖ್ಯ ಎಂದು ಒತ್ತಿ ಹೇಳುವ, ಮೌಲ್ಯವುಳ್ಳ ಮಕ್ಕಳನ್ನು ಮೌಲ್ಯಕ್ಕಾಗಿ ಗುರುತಿಸುವ ಪದ್ಧತಿ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಜಾರಿಗೆ ಬರಬೇಕು. ಅಧ್ಯಾಪಕರಲ್ಲೇ ಆಗಲೀ ಅಥವಾ ಮಕ್ಕಳಲ್ಲೇ ಆಗಲೀ ಕಂಡು ಬರುವ ಮೌಲ್ಯಗಳನ್ನು ಬಹಿರಂಗವಾಗಿ ಗುರುತಿಸಿ ಅದು ಅನುಸರಣೀಯ ಎಂಬ ಸಂದೇಶವನ್ನು ಕೊಡಲು ಸಾಧ್ಯವಾಗಬೇಕು. ಕೌಶಲಗಳು ಅಗತ್ಯಕ್ಕಿಂತ ಹೆಚ್ಚು ಪ್ರಾಮುಖ್ಯ ಪಡೆಯತ್ತಿರುವುದು ಕಡಿಮೆಯಾಗಬೇಕು. ಜೀವನವನ್ನು ಸಮಗ್ರವಾಗಿ ನೋಡಬಲ್ಲ ಒಂದು ಸರಳ ಜೀವನದೃಷ್ಟಿಯನ್ನು ರೂಪಿಸುವ ಶಿಕ್ಷಣ ಇಂದು ನಮಗೆ ಬೇಕು.

ಇಂತಹ ಸನ್ನಿವೇಶದಲ್ಲಿ ಗಾಂಧೀಜೀವನ ಮಾದರಿ ನಮಗೆ ಆಸರೆಯಾಗಿ ನಿಲ್ಲುತ್ತದೆ. ಗಾಂಧೀ ಕುಟೀರದ ಬಗ್ಗೆ ಆಳವಾದ ಚಿಂತನೆಯನ್ನು ಹರಿಯಬಿಟ್ಟ ಇವಾನ್ ಇಲಿಯಚ್ ಎಂಬ ಚಿಂತಕ ಸರಳ ಜೀವನವನ್ನು ಮತ್ತು ಗಾಂಧೀ ಕುಟೀರದ ಸರಳತೆಯ ಬಗೆಗೆ ಹೇಳುವ ಮಾತುಗಳನ್ನು ಗಮನಿಸಿ. ಮೊದಲನೆಯದಾಗಿ ಗಾಂಧೀ ಕುಟೀರದಲ್ಲಿ ಅನಗತ್ಯವಾದ ವಸ್ತುಗಳೇ ಇಲ್ಲ. ಇದು ವಸ್ತುಗಳಿಗಿಂತ ಮನುಷ್ಯ ಮುಖ್ಯ ಎಂಬ ಸಂದೇಶವನ್ನು ನೀಡುತ್ತದೆ. ನಮ್ಮ ಆಧುನಿಕ ಮನೆಗಳನ್ನೇ ನೋಡಿ. ಮನೆ ಕಟ್ಟುವಾಗ ನಾವು ನಮ್ಮ ಕಂಪ್ಯೂಟರ್‌ಗಳಿಗೆ, ವಾಷಿಂಗ್ ಮೆಷೀನಿಗೆ, ಫ್ರಿಡ್ಜ್ ಮತ್ತು ಟಿ.ವಿ.ಗೆ – ಹೀಗೆ ನಾವು ಬಳಸುವ ಅನೇಕಾನೇಕ ಉಪಕರಣಗಳನ್ನು ಎಲ್ಲಿ ಇಡಬೇಕು ಎಂಬುದನ್ನು ಗಮನದಲ್ಲಿಟ್ಟುಕೊಂಡು ಮನೆ ನಿರ್ಮಿಸುತ್ತೇವೆ. ಈ ವಸ್ತುಗಳ ನಡುವೆ ಹೇಗೋ ಮಾಡಿ ಮನುಷ್ಯ ಹೊಂದಿಕೊಂಡು ಬದುಕಬೇಕು. ಸ್ವತಂತ್ರವಾಗಿ ಓಡಿ ಆಡುವ ನಮ್ಮ ಮಕ್ಕಳಿಗೆ ಈ ಇಕ್ಕಟ್ಟಿನ ಪ್ರದೇಶಗಳಿಗೆ ಹೊಂದಿಕೊಂಡು ಓಡುವುದನ್ನು, ಆಡುವುದನ್ನು ಕಲಿಸುತ್ತೇವೆ. ವಸ್ತುವೇ ಮುಖ್ಯವಾದ ಈ ಎರಡನೇ ದರ್ಜೆಯ ಜೀವನವಿಧಾನಕ್ಕೆ ಮಕ್ಕಳನ್ನು ಪಳಗಿಸುತ್ತೇವೆ. ದೊಡ್ಡವರಾದ ಮೇಲೆ ಇವರೂ ತಮ್ಮ ಮಕ್ಕಳನ್ನು ಇದೇ ಬಗೆಯ ಜೀವನಕ್ಕೆ ಪಳಗಿಸುತ್ತಾರೆ. ಇದನ್ನು ಪ್ರಶ್ನಿಸುವ ಶಕ್ತಿಯನ್ನು ಶಿಕ್ಷಣ ನಮಗೆ ನೀಡುತ್ತಿಲ್ಲ.

ವಸ್ತುಗಳನ್ನು ಜೀವನಪರ್ಯಂತ ಸಂಗ್ರಹಿಸುತ್ತಲೇ ಇದ್ದರೆ ಇವು ಮನೆಯ ತುಂಬಾ ತುಂಬಿಕೊಂಡು ಕೊನೆಗೆ ಮನೆಯ ಮಾಲೀಕರಿಗೆ ಸ್ಥಳವಿಲ್ಲದಂತೆ ಆಗುವುದುಂಟು. ಹಾಗಾದಾಗ ಹಳೆಯ ವಸ್ತುಗಳನ್ನು ಯಾರಿಗಾದರೂ ದಾನ ಮಾಡುತ್ತೇವೆ ಅಥವಾ ಕಾರ್ ಷೆಡ್‌ಗಳಲ್ಲಿ ತುಂಬಿಕೊಳ್ಳುತ್ತೇವೆ. ಜೀವನಪರ್ಯಂತ ಹೀಗೆ ಹೊಸ ವಸ್ತುಗಳನ್ನು ಖರೀದಿಸುತ್ತಲೇ ಇರುತ್ತೇವೆ; ಮನೆಗೆ ತುಂಬಿಸಿಕೊಳ್ಳುತ್ತಲೇ ಇರುತ್ತೇವೆ. ಇದು

ಕೇವಲ ವಸ್ತು ಮತ್ತು ಅದರ ವೆಚ್ಚದ ಪ್ರಶ್ನೆಯಷ್ಟೆ ಅಲ್ಲ. ಹೀಗೆ ಅನಾವಶ್ಯಕವಾದ ಬಾಹ್ಯಾವಲಂಬನೆ ಮನುಷ್ಯನ ಧೀಶಕ್ತಿಯನ್ನು ಕುಗ್ಗಿಸುತ್ತದೆ. ಅಂತರಂಗವನ್ನು ಬಡವಾಗಿಸುತ್ತದೆ. ಬಗೆಬಗೆಯ ವಸ್ತುಗಳ ಮೇಲಿನ ಅವಲಂಬನೆ ಕ್ರಮೇಣ ಮನುಷ್ಯನ ಸ್ವಂತಿಕೆಗೆ ಮಾರಕವಾಗುತ್ತದೆ. ಅವನ ಹಾವಭಾವಗಳು, ನಂಬುವ ಮೌಲ್ಯಗಳು, ತಳೆಯುವ ನಿಲುವುಗಳು ಇವನು ಸಂಗ್ರಹಿಸಿರುವ ವಸ್ತುಗಳಿಂದ ಪ್ರಭಾವಿತವಾಗುತ್ತವೆ. ಈ ವಸ್ತುಗಳ ಮೇಲಿನ ತನ್ನ ಮಾಲೀಕತ್ವವನ್ನು ಹಳಿಯುವ, ನಿರಾಕರಿಸುವ ಯಾವ ನಿಲುವನ್ನೂ ಅಥವಾ ಯಾವ ಮೌಲ್ಯವನ್ನೂ ಇವನು ಪ್ರತಿಪಾದಿಸಲಾರ, ಒಪ್ಪಲಾರ. ಇವನ ತರ್ಕದ ಸರ್ಕಸ್‌ಗಳು ಈ ವಸ್ತುಗಳನ್ನು ತನಗಾಗಿ ಉಳಿಸಿಕೊಂಡು ಪ್ರತಿಪಾದಿಸಬಹುದಾದ ಸಾಮಾಜಿಕನ್ಯಾಯವಾಗಿರುತ್ತದೆ. ಈ ವಸ್ತುಗಳ ಮೇಲಿನ ಮಾಲೀಕತ್ವವನ್ನು ಅನುಮೋದಿಸುವ ತರ್ಕಸರಣಿಯಾಗಿರುತ್ತದೆ. ಈ ವಸ್ತುಗಳ ಅನಿವಾರ್ಯತೆಯನ್ನು ಒಪ್ಪುವ ಜೀವನದೃಷ್ಟಿಯಾಗಿರುತ್ತದೆ. ಹೀಗೆ ಅನಗತ್ಯ ವಸ್ತುಗಳು ನಮ್ಮ ಮನಸ್ಸಿನ ಮೇಲೆ ಪ್ರಭಾವ ಬೀರುತ್ತ ನಮ್ಮ ಅಂತರಂಗವನ್ನು ಬಡವಾಗಿಸುತ್ತವೆ. ಮನುಷ್ಯನಲ್ಲಿ ಸ್ವಾಭಾವಿಕವಾಗಿಯೇ ಇರುವ ಪ್ರೀತಿ ಅನುಕಂಪಗಳು ಈ ಅನಗತ್ಯ ವಸ್ತುಗಳ ವ್ಯಾಮೋಹದಿಂದ ಮರೆಯಾಗುತ್ತವೆ. ಒಟ್ಟಿನಲ್ಲಿ ಮನುಷ್ಯ ವಸ್ತುಗಳನ್ನು ಗಳಿಸುತ್ತ ಪ್ರೀತಿಸುವ ಶಕ್ತಿಯನ್ನು ಕಳೆದುಕೊಂಡುಬಿಡುತ್ತಾನೆ. ಅವನಿಗೆ ವಸ್ತುಗಳು ಅದನ್ನು ಉತ್ಪಾದನೆ ಮಾಡುವ ಮನುಷ್ಯನಿಗಿಂತ ಹೆಚ್ಚು ಮೌಲ್ಯವುಳ್ಳದ್ದಾಗಿ ಕಾಣುತ್ತದೆ. ಅವನ ತ್ಯಾಗ ನಿಷ್ಠೆಗಳೆಲ್ಲ ಏನಿದ್ದರೂ ಈ ವಸ್ತುಗಳಿಗಾಗಿಯೇ ಹೊರತು ಈ ವಸ್ತುಗಳ ಹಿಂದಿರುವ ಮನುಷ್ಯನಿಗಾಗಿ ಅಲ್ಲ. ಮನುಷ್ಯ ಸಂಬಂಧಗಳು ಹಳಸಿಹೋದರೂ ಚಿಂತೆಯಿಲ್ಲ, ವಸ್ತುಗಳ ಮೇಲಿನ ಸ್ವಾಮ್ಯವನ್ನು ಅವನು ಬಿಡಲಾರ.

ಇವಾನ್ ಇಲಿಯಚ್ ಹೇಳುತ್ತಾನೆ ಹೀಗೆ ಹೆಚ್ಚು ಹೆಚ್ಚು ಬಾಹ್ಯ ವಸ್ತುಗಳನ್ನು ಅವಲಂಬಿಸುವುದು ಒಂದು ವಿಕಲತೆಯ ಸಂಕೇತವಲ್ಲವೇ? ಜನ ತಮ್ಮ ಸಹಜ ಶಕ್ತಿಯನ್ನು ಮರೆಮಾಚಿ ಬಾಹ್ಯ ಸಲಕರಣೆಗಳಿಂದ ಆಕರ್ಷಿತರಾಗಿ ನ್ಯೂನತೆಗಳುಳ್ಳ ಜನರಂತೆ ನಡೆದುಕೊಳ್ಳುವುದು ನಾಗರಿಕತೆ ಎಂದು ಹೇಗೆ ಹೇಳಬಹುದು? ಎಂತಹ ಐಷಾರಾಮಿ ಆಸ್ಪತ್ರೆಯೂ ಅನಾರೋಗ್ಯವನ್ನು ಸೂಚಿಸುತ್ತದೆಯೇ ಹೊರತು ಅದನ್ನು ವೈಭವದ ಸಂಕೇತ ಎಂದು ಭಾವಿಸಲು ಸಾಧ್ಯವಿಲ್ಲ. ವಿಪರ್ಯಾಸವೆಂದರೆ ಕೈಕಾಲುಗಳು ಗಟ್ಟಿಮುಟ್ಟಾಗಿದ್ದರೂ ಈ ಮನುಷ್ಯ ಕಾಲಿಲ್ಲದವನು ಬಳಸುವ ಊರುಗೋಲನ್ನು ಹಿಡಿದು ನಡೆಯುವುದೇ ಒಂದು ಹೆಗ್ಗಳಿಕೆ ಎಂದು ಭಾವಿಸುವಂತಿದೆ ಇಂದಿನ ನಮ್ಮ ನಾಗರಿಕ ನಡವಳಿಕೆಗಳು.

ಅಗತ್ಯಕ್ಕಿಂತ ಹೆಚ್ಚಾಗಿ ವಸ್ತುಗಳನ್ನು ಬಳಸುವ ಸಂಸ್ಕೃತಿಯನ್ನು ಸರಕುಸಂಸ್ಕೃತಿ ಎನ್ನಬಹುದು. ಕೊಳ್ಳುಬಾಕ ಸಂಸ್ಕೃತಿ, ಸರಕುಸಂಸ್ಕೃತಿ ಮನುಷ್ಯನ ಮಾಹಿತಿ ತಂತ್ರಜ್ಞಾನದ ವೈಭವವನ್ನೂ ವಿವೇಕದ ಅಭಾವವನ್ನೂ ಸೂಚಿಸುತ್ತದೆ. ಹೆಚ್ಚು ಹೆಚ್ಚು ಕೇಳಿ

ಪಡೆದುಕೊಳ್ಳುವುದು ವಿವೇಕದ ಲಕ್ಷಣವೋ ಎಂಬಂತೆ ಜನ ಭಾವಿಸುತ್ತಾರೆ. ನ್ಯಾಯವಾಗಿ ಸಲ್ಲಬೇಕಾದದ್ದನನ್ನು ಧೈರ್ಯವಾಗಿ ಕೇಳಿಪಡೆಯುವುದರಲ್ಲಿ ತಪ್ಪಿಲ್ಲ. ಆದರೆ ಸಂದರ್ಭೋಚಿತವಾದ ಇತಿಮಿತಿಗಳನ್ನು ಕಡೆಗಣಿಸಿ, ಎಲ್ಲೆಮೀರಿದ, ಸೌಜನ್ಯವಿಲ್ಲದ ನಡವಳಿಕೆಯನ್ನು ಧೈರ್ಯದ, ಆತ್ಮವಿಶ್ವಾಸದ ಕುರುಹಾಗಿ ಬಿಂಬಿಸುತ್ತಾ ಯಶಸ್ಸಿನ ಮೆಟ್ಟಿಲೇರುವುದು ಆಧುನಿಕ ಮನೋವೈಜ್ಞಾನಿಕ ವಿಧಾನವಾಗಿದೆ. ಈ ಸಂದರ್ಭದಲ್ಲಿ ಮಹಾಭಾರತದಲ್ಲಿ ಗಂಡಂದಿರನ್ನು, ಶಸ್ತ್ರಗಳನ್ನು ಕಳೆದುಕೊಂಡು, ವಿವಸ್ತ್ರಳಾಗಿ ಕೌರವನ ಸಭೆಯಲ್ಲಿ ನಿಂತ ದ್ರೌಪದಿಯ ನೆನಪಾಗುತ್ತದೆ. ಧೃತರಾಷ್ಟ್ರ ಹೇಳುತ್ತಾನೆ, "ದ್ರೌಪದಿ ನಿನಗೆ ಅನ್ಯಾಯವಾಗಿದೆ, ನೀನು ಏನಾದರೂ ವರವನ್ನು ಕೇಳು". ದ್ರೌಪದಿ ಆ ವರದಿಂದ ತನ್ನ ಗಂಡಂದಿರನ್ನು ದಾಸ್ಯಮುಕ್ತರನ್ನಾಗಿ ಮಾಡುತ್ತಾಳೆ. ಧೃತರಾಷ್ಟ್ರ ಮತ್ತೊಂದು ವರವನ್ನು ಕೇಳುವಂತೆ ಹೇಳುತ್ತಾನೆ. ಆಗ ದ್ರೌಪದಿಯು ತನ್ನ ಗಂಡಂದಿರ ಶಸ್ತ್ರಾಸ್ತ್ರಗಳನ್ನು ಬಿಡಿಸಿಕೊಳ್ಳುತ್ತಾಳೆ. ಇಷ್ಟಕ್ಕೆ ತೃಪ್ತನಾಗದ ಧೃತರಾಷ್ಟ್ರ ಮತ್ತೊಂದು ವರವನ್ನು ಕೇಳುವಂತೆ ದ್ರೌಪದಿಗೆ ಹೇಳುತ್ತಾನೆ. ಆಗ **ದ್ರೌಪದಿ ಹೇಳುತ್ತಾಳೆ: "ಮಹಾರಾಜ, ನಾನು ಕ್ಷತ್ರಿಯ ಕನ್ಯೆ. ಎರಡಕ್ಕಿಂತ ಹೆಚ್ಚು ವರ ಕೇಳಬಾರದು. ನಾನು ಮೂರನೇ ವರ ಕೇಳುವುದಿಲ್ಲ".** ಇಂತಹ ಒಂದು ಸಂಯಮದ ಮೌಲ್ಯ ನಮ್ಮ ನಡುವೆ ಈಗ ಏಕೆ ಕಾಣೆಯಾಗುತ್ತಿದೆ? ತಾವು ಕೇಳಿ ಪಡೆಯಬಹುದಾದ ಸಾಧ್ಯತೆಗಳಿಗೆ ಒಂದು ಗೆರೆಯನ್ನು ಗುರುತಿಸುವ ವಿವೇಕವನ್ನು ನಮ್ಮ ನಾಗರಿಕ ಜನ ಏಕೆ ಕಳೆದುಕೊಳ್ಳುತ್ತಿದ್ದಾರೆ? ವಾಚ್ಯವಾಗಿ ಕೇಳಿಪಡೆಯುವುದು ಮನಃಶಾಸ್ತ್ರಜ್ಞರು ಕಲಿಸಿಕೊಡುವ ಒಂದು ಯಶಸ್ಸಿನ ಸೂತ್ರ. ಇದು ಅನಾಗರಿಕಮಟ್ಟ ತಲುಪುವುದನ್ನು ನಮ್ಮ ಜನ ಗುರುತಿಸುವುದೇ ಇಲ್ಲ. ಎಷ್ಟು ಕೊಟ್ಟರೂ ಬೇಕೆಂಬ ಅಥವಾ ಸುಲಭ ಬೆಲೆಗೆ ಸಿಗುತ್ತದೆ ಎಂದರೆ ಮಾರಾಟ ಮಳಿಗೆಗಳಿಗೆ ಲಗ್ಗೆ ಹಾಕುವ ನಮ್ಮ ಜನಗಳಿಗೆ ವಿವೇಕ ಇದೆ ಎಂದು ತಿಳಿಯಬಹುದೆ?

# ೭. ಪರಿಸರ ಮತ್ತು ನಮ್ಮ ಶಿಕ್ಷಣ

## ನಮ್ಮ ಅತಿವಿದ್ಯಾವಂತರು ಮತ್ತು ಪರಿಸರ

ಹದಗೆಡುತ್ತಿರುವ ನಮ್ಮ ಭೂಮಿಯ ಪರಿಸರವನ್ನು ಕುರಿತು ಡೇವಿಡ್ ಓರ್ ಎಂಬ ಚಿಂತಕ ಮನೋಜ್ಞವಾಗಿ ಹೇಳುತ್ತಾನೆ. ಅದರ ಸಾರಾಂಶ ಹೀಗಿದೆ: ಎಂದಿನಂತೆ ಇಂದು ಕೂಡ ಸಂಜೆಯ ವೇಳೆಗೆ ನೂರಹದಿನಾರು ಚದರ ಕಿ.ಮೀ.ಗಳ ಮಳೆಯ ಕಾಡನ್ನು ನಾವು ಕಳೆದುಕೊಳ್ಳುತ್ತೇವೆ. ಜನಸಂಖ್ಯಾ ಸ್ಫೋಟದಿಂದಾಗಿ ಮರಳುಗಾಡುಗಳು ಇಂದು ಒಂದೇ ದಿನದಲ್ಲಿ ಎಪ್ಪತ್ತೆರಡು ಕಿ.ಮೀ.ಗಳಷ್ಟು ಅಗಲವಾಗಿ ವಿಸ್ತರಿಸುತ್ತಿವೆ. ನಲವತ್ತರಿಂದ ನೂರು ಜೀವಜಾತಿಗಳು ಈ ಭೂಮಿಯಿಂದ ಶಾಶ್ವತವಾಗಿ ಕಣ್ಮರೆಯಾಗುತ್ತಿವೆ. ಸಿ.ಎಫ್.ಸಿ. ಅನಿಲ, ಇಂಗಾಲದ ಡೈ ಆಕ್ಸೈಡ್ ಅನಿಲಗಳು ಹೆಚ್ಚಾಗಿ ಜಾಗತಿಕ ತಾಪಮಾನ ಹೆಚ್ಚಾಗುತ್ತದೆ. ಓಝೋನ್ ಕವಚ ಶಿಥಿಲವಾಗುತ್ತಿದೆ. ಆತ ಮತ್ತೆ ಹೇಳುತ್ತಾನೆ: 'ಸತ್ಯವೇನೆಂದರೆ ಈ ಅವಘಡಗಳಿಗೆಲ್ಲಾ ಕಾರಣರಾದವರು ಅಲ್ಪವಿದ್ಯೆಯ ಬಹುಸಂಖ್ಯಾತ ಜನಸಾಮಾನ್ಯರಲ್ಲ; ಆದರೆ ವಿಶ್ವವಿದ್ಯಾಲಯಗಳಿಂದ ಬಿ.ಎ., ಬಿಎಸ್ಸಿ, ಎಲ್.ಎಲ್.ಬಿ. ಮತ್ತು ಪಿಎಚ್.ಡಿ ಪದವಿಗಳನ್ನು ಪಡೆದವರು. ನಮ್ಮ ಭೂಮಿಯ ಹವಾಗುಣ ವೈಪರೀತ್ಯಗಳಿಗೆ, ಜೀವವೈವಿಧ್ಯತೆದ ನಾಶಕ್ಕೆ, ಒಟ್ಟಿನಲ್ಲಿ ಇಡೀ ಭೂಮಂಡಲಕ್ಕೆ ಮಾರಕರಾಗಿರುವವರು ಈ ಪದವೀಧರರು'.

ಈ ಮಾತುಗಳನ್ನು ಕುರಿತು ನಾವು ಆಳವಾಗಿ ಚಿಂತಿಸಬೇಕಾಗಿದೆ. ಈ ಸರಳ ಸತ್ಯಗಳು ನಮ್ಮ ಗಮನಕ್ಕೆ ಬಂದರೂ ಅದನ್ನು ಗುರುತಿಸುವ ಶಕ್ತಿಯನ್ನು ನಮ್ಮ ಶಿಕ್ಷಣ ನಮಗೇಕೆ ಕೊಟ್ಟಿಲ್ಲ? ಈ ವಾಸ್ತವ ಪರಿಸ್ಥಿತಿಯನ್ನು ಅರಿವಿಗೆ ತಂದುಕೊಂಡು ರಚನಾತ್ಮಕವಾಗಿ ಸ್ಪಂದಿಸುವ ಶಕ್ತಿಯನ್ನೇಕೆ ಕೊಡುತ್ತಿಲ್ಲ? ಪುಸ್ತಕಜ್ಞಾನದ ಬೌದ್ಧಿಕ ಚಿಂತನೆಗಳ ವಿಫಲತೆಗಳನ್ನು ಕುರಿತು ಎಲಿವೈಸೆಲ್ ಎಂಬ ಮಹಾಶಯ ಹೀಗೆ ವಿವರಿಸುತ್ತಾನೆ – ಜರ್ಮನ್ನರು ಬಹುಶಃ ಪ್ರಪಂಚದಲ್ಲೆ ಅತ್ಯಂತ ಹೆಚ್ಚು ವಿದ್ಯಾವಂತರು. ಗಯಾಟೆ ಅಥವಾ ಕ್ಯಾಂಟ್‌ಸಂತಹ ಚಿಂತಕರು ಈ ವಿದ್ಯಾವಂತರ ಮೇಲೆ ಬಹಳವಾದ ಪ್ರಭಾವ ಬೀರಿದ್ದಾರೆ. ಆದರೆ ಲಕ್ಷಾಂತರ ಜನಗಳ ಮಾರಣ ಹೋಮಕ್ಕೆ ಕಾರಣರಾದವರೂ ಇವರೇ. ಇವರು ಪಡೆದ ಶಿಕ್ಷಣ ಇವರಲ್ಲಿ ಮನುಷ್ಯತ್ವವನ್ನು ಬೆಳೆಸುವ ಬದಲಾಗಿ ಕ್ರೌರ್ಯವನ್ನು ಹೆಚ್ಚಿಸಿದ್ದು ಹೇಗೆ? ಇದಕ್ಕೆ ಉತ್ತರವಾಗಿ ವೈಸೆಲ್ ಹೇಳುತ್ತಾನೆ: "ಇವರ

ಶಿಕ್ಷಣವು ಮೌಲ್ಯಗಳಿಗೆ ಬದಲಾಗಿ ಶುಷ್ಕ ಸಿದ್ಧಾಂತಗಳಿಗೆ ಒತ್ತು ಕೊಡುತ್ತದೆ; ಮನುಷ್ಯನನ್ನು ಮುಖ್ಯ ಎಂದು ಗುರುತಿಸುವ ಬದಲು ಅವನ ಪರಿಕಲ್ಪನೆಗಳಿಗೆ ಒತ್ತು ಕೊಡುತ್ತದೆ; ಈ ಶಿಕ್ಷಣ ಅಮೂರ್ತ ಆಯಾಮಗಳ ಚಿಂತನೆಗಳಿಗೆ ಮಹತ್ತ್ವ ನೀಡಿದೆಯೇ ಹೊರತು ಆ ಚಿಂತನೆಗೆ ಕಾರಣವಾದ ಪ್ರಜ್ಞೆಯ ಕುರಿತು ಧ್ಯಾನಿಸಲಿಲ್ಲ; ಉತ್ತರಗಳಿಂದ ಪಡೆದ ತೃಪ್ತಿಯಲ್ಲಿ ಮುಖ್ಯವಾದ ಪ್ರಶ್ನೆಗಳನ್ನೇ ಬದಿಗೊತ್ತಲಾಗಿದೆ. ಅಂತಃಸಾಕ್ಷಿಗೆ ಬದಲಾಗಿ ದಕ್ಷತೆಗೆ, ಸಿದ್ಧಾಂತಗಳಿಗೆ ಪ್ರಾಮುಖ್ಯ ನೀಡಲಾಗಿದೆ.'

**ಮನಸ್ಸಿಗೆ ಶಿಕ್ಷಣ**

ಜರ್ಮನ್ ಅನುಭಾವಿ ಮೈಸ್ಟರ್ ಎಕಾರ್ಟ್ ಹೇಳುತ್ತಾನೆ– 'ಜನಗಳು ತಾವು ಏನು ಮಾಡಬೇಕು ಎಂಬುದಕ್ಕಿಂತ ತಾವು ಏನಾಗಿರಬೇಕು ಎಂಬುದರ ಬಗೆಗೆ ಚಿಂತಿಸಬೇಕು. ಒಂದು ವೇಳೆ ಅವರ ಬದುಕು ಉತ್ತಮವಾಗಿದ್ದರೆ ಅವರ ಕೆಲಸಗಳೆಲ್ಲ ಪ್ರಕಾಶಮಾನವಾಗಿ ಕಂಡುಬರುತ್ತವೆ': ಹಾಗೆಯೇ ಎಮರ್ಸನ್ ಹೇಳುವ ಮಾತು – "ನೀನು ಏನಾಗಿದ್ದೀಯೋ ಅದು ನನ್ನ ಕಿವಿಯಲ್ಲಿ ಎಷ್ಟು ಜೋರಾಗಿ ಮೊಳಗುತ್ತಿದೆ ಎಂದರೆ ನೀನು ಹೇಳುತ್ತಿರುವುದು ನನಗೆ ಕೇಳಿಸುತ್ತಲೇ ಇಲ". ಈ ಇಬ್ಬರು ಮಹಾಶಯರು ಮನುಷ್ಯನನ್ನು ಅವನು ಪಡೆದಿರುವ ಮೌಲ್ಯಗಳ ಆಧಾರದ ಮೇಲೆ ಗುರುತಿಸುತ್ತಾರೆ. ಈ ಮನುಷ್ಯ ರೂಪುಗೊಳ್ಳುವುದು ಹೇಗೆ? ಅವನ ಮನಸ್ಸು ಯಾವುದನ್ನು ನಾವು ನಿಜವಾದ ಶಿಕ್ಷಣ ಎಂದು ಗುರುತಿಸಬಹುದೊ ಆ ಶಿಕ್ಷಣ ವನ್ನು ಪಡೆದಾಗ. ಪ್ರಶ್ನೆಯೇನೆಂದರೆ ಶಿಕ್ಷಣ ನಮಗೆ ವಿಷಯವನ್ನು ತರ್ಕಬದ್ಧವಾಗಿ ಅರಿಯುವ ಮತ್ತು ಅದನ್ನು ಅಷ್ಟೇ ತರ್ಕಬದ್ಧವಾಗಿ ಮಂಡಿಸುವ ಶಕ್ತಿಯನ್ನು ಕೊಡುತ್ತದೆ. ಆದರೆ ಅದು ಮನುಷ್ಯನ ಮೂಲ ಮೃಗೀಯ ಸ್ವಭಾವಗಳನ್ನು ತೆಗೆದುಹಾಕಿ ಅದರ ಸ್ಥಾನದಲ್ಲಿ ಮಾನವೀಯ ಗುಣಗಳನ್ನು ತುಂಬಬಲ್ಲುದೆ?

ಈ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರ ಕೆಲವು ವಿಶ್ಲೇಷಣೆಗಳು ಮನೋಜ್ಞವಾಗಿವೆ. ಅವರು ಹೇಳುತ್ತಾರೆ: "ಪ್ರಪಂಚದಲ್ಲಿ ಎಲ್ಲ ಧರ್ಮಗಳ ನೀತಿಶಾಸ್ತ್ರಗಳು ಮನುಷ್ಯನಿಗೆ ಕೆಟ್ಟದ್ದನ್ನು ಮಾಡಬೇಡ ಎಂದು ಬೋಧಿಸುತ್ತವೆಯೇ ಹೊರತು ಕೆಟ್ಟದ್ದನ್ನು ಮಾಡದಂತೆ ನಮ್ಮನ್ನೇ ನಾವು ತಡೆಗಟ್ಟುವುದು ಹೇಗೆ ಎಂದು ಹೇಳಿ ಕೊಡುವುದಿಲ್ಲ. 'ಕದಿಯ ಬೇಡ' ಎನ್ನುತ್ತೇವೆ. ಆದರೆ ಒಬ್ಬ ಮನುಷ್ಯ ಏಕೆ ಕದಿಯುತ್ತಾನೆ?" ಸ್ವಾಮೀಜಿ ಹೇಳುತ್ತಾರೆ: "ಏಕೆಂದರೆ ಈ ಕದಿಯುವುದು ಸ್ವಯಂಚಾಲಿತವಾಗಿ ನಡೆಯುವ ಕ್ರಿಯೆ. ಎಂದರೆ ಈ ಸಂಬಂಧವಾದ ನೇತ್ಯಾತ್ಮಕ ಆಲೋಚನೆಗಳೆಲ್ಲ ಸುಪ್ತ ಮನಸ್ಸಿನಲ್ಲಿ ವಿಚಾರದ ಕೈಗೆಟುಕದೆ ದಾಖಲೆಯಾಗಿವೆ. ಮನುಷ್ಯ ಮಾಡುವ ದುಷ್ಟ ಕ್ರಿಯೆಗಳೆಲ್ಲ ಅವನ ಸುಪ್ತ ಮನಸ್ಸಿನ ಕೆಲಸ". ಅವರು ಹೇಳುತ್ತಾರೆ: 'ಈ ಸುಪ್ತಸ್ತರದ ನೇತ್ಯಾತ್ಮಕತೆಗಳು ಮನುಷ್ಯ ಕುಲವನ್ನೇ ಕೊಲ್ಲುತ್ತಿವೆ' ನಾವು ಕೆಟ್ಟದ್ದನ್ನು ಮಾಡದಂತೆ ನಮ್ಮನ್ನೆ ನಾವು ಕಾಪಾಡಿಕೊಳ್ಳಬೇಕಾದರೆ ನಮ್ಮ ಈ ಸುಪ್ತ ಮನಸ್ಸನ್ನು ಅರ್ಥ ಮಾಡಿಕೊಳ್ಳಲೇಬೇಕು.

ಅದರ ಬೇರುಗಳನ್ನು ಬಗೆದು ಶುಚಿ ಮಾಡಿಕೊಳ್ಳಬೇಕು. ಒಟ್ಟಿನಲ್ಲಿ ಹೇಳುವುದಾದರೆ ಮನುಷ್ಯ ಯಾವ ಕೌಶಲಗಳನ್ನು ಹೊಂದಿದ್ದಾನೆ ಎನ್ನುವುದಕ್ಕಿಂತ ಅವನು ತನ್ನ ಆಳದಲ್ಲಿ ಏನಾಗಿದ್ದಾನೆ ಎಂಬುದನ್ನು ಅವನೇ ಅರಿತು ನಡೆಯಬೇಕು.

ಸ್ವಾಮಿ ವಿವೇಕಾನಂದರು ಶಿಕ್ಷಣ ಎಂಬುದನ್ನು ಹೀಗೆ ವಿವರಿಸುತ್ತಾರೆ – "ಶಿಕ್ಷಣವೆಂದರೇನು? ಪುಸ್ತಕಜ್ಞಾನವೇ? ಅಲ್ಲ. ವಿವಿಧ ವಿಷಯಗಳನ್ನು ತಿಳಿಯುವುದೆ? ಅದೂ ಅಲ್ಲ. ಯಾವ ತರಬೇತಿಯ ಮೂಲಕ ಇಚ್ಛೆಯ ಹರಿವು ಮತ್ತು ಅಭಿವ್ಯಕ್ತಿಗಳನ್ನು ಹತೋಟಿಗೆ ತಂದುಕೊಂಡು ಸಾರ್ಥಕತೆ ಸಾಧಿಸಬಹುದೋ ಅದೇ ಶಿಕ್ಷಣ." ಹೀಗೆ ಶಿಕ್ಷಣವನ್ನು ನಾವು ಅರ್ಥಮಾಡಿಕೊಂಡರೆ ಶಿಕ್ಷಣ ಮನಸ್ಸಿನ ಮೂಲಪ್ರವೃತ್ತಿಗಳನ್ನು ನಿಯಂತ್ರಣಕ್ಕೆ ತರುವ ಸಾಧನ ಎಂದು ನಾವು ಭಾವಿಸಬೇಕಗುತ್ತದೆ. ಇದನ್ನು ಹೇಗೆ ಸಾಧಿಸಬೇಕು ಎಂದೂ ಸಹ ಸ್ವಾಮೀಜಿ ವಿವರಿಸುತ್ತಾರೆ. ನಮ್ಮ ಮನಸ್ಸಿನ ವೃತ್ತಿಗಳು ಎಂದರೆ ಆಲೋಚನೆಗಳನ್ನು ನಾವು ನಿಯಂತ್ರಿಸುವ ಸಾಧ್ಯತೆಯ ಬಗ್ಗೆ ನಾವು ಚಿಂತಿಸಿಯೇ ಇಲ್ಲ. ಮೊದಮೊದಲು ಎಲ್ಲರಿಗೂ ಜನಹಿತವಾದದ್ದನ್ನು ಸಾಧಿಸಬೇಕೆಂಬ ಹಂಬಲ ಇರುತ್ತದೆ. ಆದರೆ ಅಂತರಂಗದ ನೇತ್ಯಾತ್ಮಕತೆ ಇದಕ್ಕೆ ಎಡೆಮಾಡಿಕೊಡುವುದಿಲ್ಲ. ಆದ್ದರಿಂದ ನಮ್ಮ ಆಲೋಚನೆಗಳನ್ನು ನಾವು ಬುದ್ಧಿಪೂರ್ವಕವಾಗಿ ನಿಯಂತ್ರಿಸಬೇಕು. ಇದನ್ನು ಸಾಧ್ಯವಾಗಿಸುವುದು ಹೇಗೆ ಎಂಬುದನ್ನು ಎಂದು ಸ್ವಾಮೀಜಿ ತಿಳಿಸುತ್ತಾರೆ:

"ನಾವು ನಮ್ಮೊಳಗಿನ ಆಲೋಚನೆಗಳು ಹುಟ್ಟಿ ಕವಲೊಡೆದ ಮೇಲಷ್ಟೆ ಅವುಗಳನ್ನು ಅರಿವಿಗೆ ತಂದುಕೊಳ್ಳುತ್ತೇವೆ; ಕೆಲವೊಮ್ಮೆ ಅವು ಕ್ರಿಯಾರೂಪಕ್ಕೆ ಇಳಿದ ಮೇಲಷ್ಟೆ ಗ್ರಹಿಸುತ್ತೇವೆ. ಹಾಗಾಗಿ ನಮ್ಮ ಆಲೋಚನೆಗಳನ್ನು, ಕ್ರಿಯೆಗಳನ್ನು ನಿಯಂತ್ರಿಸುವುದು ನಮ್ಮ ಕೈಲಿಲ್ಲ ಎಂದು ಹುಯಿಲಿಡುತ್ತೇವೆ. ಹಾಗಾದರೆ ಈ ನಮ್ಮ ಆಲೋಚನೆಗಳನ್ನು ನಿಯಂತ್ರಿಸಲು ಸಾಧ್ಯವೇ ಇಲ್ಲವೆ? ಒಂದು ವೇಳೆ ನಾವು ಎಚ್ಚರವಾಗಿದ್ದು ಆಲೋಚನೆಗಳ ಅಂಕುರವಾಗುತ್ತಿದ್ದಂತೆಯೇ, ಅದು ಕ್ರಿಯೆಗೆ ಕೊಂಡೊಯ್ಯುವ ಮೊದಲೇ ನಿಯಂತ್ರಣಕ್ಕೆ ತಂದುಬಿಟ್ಟರೆ? ಆಗ ನಾವು ನಮ್ಮ ಮೇಲೆ ಸಮಗ್ರವಾದ ನಿಯಂತ್ರಣವನ್ನು ಸಾಧಿಸಬಹುದು. ಈಗ ಪ್ರಶ್ನೆ ಏನೆಂದರೆ ಮನಸ್ಸಿನ ಸೂಕ್ಷ್ಮ ಚಲನೆಯನ್ನು ವಿಶ್ಲೇಷಿಸಿ, ಪರೀಕ್ಷೆಗೆ ಒಳಪಡಿಸಿ, ಅರ್ಥಮಾಡಿಕೊಂಡು ನಿಯಂತ್ರಿಸುವ ವಿಧಾನವೇನಾದರೂ ಇದ್ದರೆ ಆಗ ಮಾತ್ರ ನಮ್ಮನ್ನು ನಾವು ನಿಗ್ರಹಕ್ಕೆ ಒಳಪಡಿಸಬಹುದು. ಹೀಗೆ ಯಾವ ಮನುಷ್ಯ ತನ್ನ ಮನಸ್ಸನ್ನು ಸಂಪೂರ್ಣ ಹಿಡಿತದಲ್ಲಿಟ್ಟುಕೊಂಡಿದ್ದಾನೋ ಅವನು ಎಲ್ಲ ಮನಸ್ಸುಗಳನ್ನು ನಿಯಂತ್ರಿಸಬಲ್ಲ. ಈ ಕಾರಣದಿಂದ ಪರಿಶುದ್ಧತೆ ಮತ್ತು ಸನ್ನಡತೆಗಳು ಧರ್ಮದ ಮೂಲ ಉದ್ದೇಶ. ನೀತಿವಂತನಾದ, ಪರಿಶುದ್ಧನಾದ ಮನುಷ್ಯ ತನ್ನನ್ನೇ ತಾನು ನಿಯಂತ್ರಿಸಿಕೊಳ್ಳುತ್ತಾನೆ".

ಸ್ವಾಮೀಜಿಯವರ ಮೇಲಿನ ಹೇಳಿಕೆಯಲ್ಲಿ ಗುರುತಿಸಬೇಕಾದ ಮುಖ್ಯಾಂಶವೇನೆಂದರೆ, ನಾವು ನಮ್ಮ ಆಲೋಚನೆಗಳ ಒಡೆಯರು; ಆಲೋಚನೆಗಳು ಮಾತ್ರವೇ ತತ್ಸಮಾನವಾದ

ಕ್ರಿಯೆಗೆ ಕೊಂಡೊಯ್ಯುತ್ತವೆ. ಆದ್ದರಿಂದ ವ್ಯಕ್ತಿಗತ ನೆಲೆಯಲ್ಲಿ ಪ್ರತಿಯೊಬ್ಬನೂ ಮಾಡಬಹುದಾದ ಒಂದು ಗುಣಾತ್ಮಕ ಕೆಲಸ ಎಂದರೆ ತನ್ನ ಆಲೋಚನೆಗಳನ್ನು ತಾನೇ ನಿಯಂತ್ರಿಸಿಕೊಳ್ಳುವುದು. ಹೀಗೆ ನಿಯಂತ್ರಿಸಲು ಒಂದು ಆಧಾರ ಬೇಕಲ್ಲವೆ? ನಿಯಂತ್ರಿಸುವುದು ಎಂದರೆ ಬೇಕಾದ್ದನ್ನು ಆರಿಸಿಕೊಂಡು ಬೇಡವಾದ್ದನ್ನು ತ್ಯಜಿಸುವುದು. ಈ ಆಯ್ಕೆಗೆ ಆಧಾರವಾದರೂ ಯಾವುದು? ಸ್ವಾಮೀಜಿಯವರ ಪ್ರಕಾರ ಧರ್ಮಮೂಲದ ಪಾವಿತ್ರ್ಯ ಮತ್ತು ಸನ್ನಡತೆಗಳು ಈ ಆಯ್ಕೆಗೆ ಇರುವ ಏಕಮಾತ್ರ ಸಾಧನ. ಮನಸ್ಸು ಸರಳವಾಗಿದ್ದರೆ 'ಮನವರಿಯದ ಕಳ್ಳತನವಿಲ್ಲ' ಎಂಬ ಸತ್ಯ ನಮಗೆ ಗೋಚರಿಸುತ್ತದೆ. ಬುದ್ಧಿಪೂರ್ವಕವಾಗಿ ಅಪ್ರಾಮಾಣಿಕವಾಗಿ ನಡೆದುಕೊಳ್ಳಬೇಕೆಂಬ ಇರಾದೆ ಇಲ್ಲದಿದ್ದರೆ ಆಯ್ಕೆಗಳ ಬಗ್ಗೆ ಗೊಂದಲ ಉಂಟಾಗುವುದಿಲ್ಲ. ಆಗ ಮನಸ್ಸಿನ ನಿಯಂತ್ರಣ ಸಾಧ್ಯವಾದೀತು.

ಈ ಬಗೆಯ ಮನೋನಿಯಂತ್ರಣದ ಸಾಧ್ಯತೆಯನ್ನು ನಮ್ಮ ಶಿಕ್ಷಣ ಗುರುತಿಸುತ್ತಿಲ್ಲ. ಹಾಗಾಗಿ ನಾವು ನಮಗೇ ಅಪರಿಚಿತರಾಗಿ ಉಳಿಯಲು ಶಿಕ್ಷಣ ಸಹಾಯ ಮಾಡುತ್ತಿರುವಂತಿದೆ. ನಮ್ಮ ನೈಜ ನೆಲೆಗಳಿಂದ ದೂರ ಕೊಂಡೊಯ್ಯುವ ಹಡಗಿನಂತಿದೆ. ಇದು ಹೀಗೇಕೆ? ನಮ್ಮ ಅಂತರಾಳದ ಇತ್ಯಾತ್ಮಕ ಸಾಧ್ಯತೆಗಳನ್ನು ಅದು ಗುರುತಿಸುವುದಿಲ್ಲ; ಪಾವಿತ್ರ್ಯವನ್ನು ಗುರುತಿಸುವುದಿಲ್ಲ; ಒಬ್ಬ ಮನುಷ್ಯ ತನ್ನಲ್ಲಿರುವ ಕಲ್ಮಶಗಳನ್ನೆಲ್ಲಾ ತೊಳೆದುಕೊಂಡು ಪವಿತ್ರನಾಗಬಲ್ಲ ಎಂಬುದನ್ನು ಗುರುತಿಸುವುದಿಲ್ಲ; ಏಕಾಏಕಿ ಪವಿತ್ರ–ಅಪವಿತ್ರಗಳಾಚೆಯ ಸ್ಥಿತಿಯ ಬಗ್ಗೆ ಮಾತನಾಡುವ ಬೌದ್ಧಿಕ ಚತುರತೆಯನ್ನು ಗಳಿಸುತ್ತೇವೆ. ಶೋಪನ್ ಹೊವರ್ ಮತ್ತು ಕ್ಯಾಂಟ್ ಅವರುಗಳ ಚಿಂತನೆಗಳು ಹೀಗೆ ಆಳವಾದ ತರ್ಕ ಸರಣಿಯನ್ನು ಮುಂದಿಡುತ್ತ ವಾಸ್ತವದಲ್ಲಿ ಒಳ್ಳೆಯದು–ಕೆಟ್ಟದ್ದು ಇಲ್ಲ ಎಂಬುದಾಗಿ ಪ್ರತಿಪಾದಿಸುತ್ತವೆ. ಒಳ್ಳೆಯ ಮತ್ತು ಕೆಟ್ಟ ಸ್ಥಿತಿಯನ್ನು ದಾಟಿ ಎಲ್ಲರೂ ಸ್ಥಿತಪ್ರಜ್ಞ ಸ್ಥಿತಿಯಲ್ಲಿದ್ದರೆ ಶಿಕ್ಷಣದ ಅಗತ್ಯವೇ ಇರುತ್ತಿರಲಿಲ್ಲ. ಹಾಗಾಗಿ ಊಹೆಯ ಮಾತುಗಳಿಗಿಂತ ದಿನನಿತ್ಯದ ಬದುಕಿನಲ್ಲಿ ಕ್ಷಣಕ್ಷಣವೂ ಎದುರಿಸುವ ಸಂದಿಗ್ಧಗಳಿಗೆ ಯುಕ್ತವಾಗಿ ಸ್ಪಂದಿಸುವ ವಿವೇಕವನ್ನು ನಾವು ನಿರೀಕ್ಷಿಸಲೇಬೇಕು; ಅಗತ್ಯವಾದ ಪವಿತ್ರತೆಯನ್ನು ನಿರೀಕ್ಷಿಸಲೇಬೇಕು. ಬೌದ್ಧಿಕ ಕಸರತ್ತುಗಳಿಗೇ ಪ್ರಾಧಾನ್ಯತೆ ನೀಡಿ ಪಾವಿತ್ರ್ಯವನ್ನು ಗಳಿಸಲು ಮಾಡಬೇಕಾದ ತ್ಯಾಗಗಳನ್ನು ಗೌಣ ಎಂದು ಪರಿಗಣಿಸಿ ಸ್ವೇಚ್ಛಾಚಾರಕ್ಕೆ ಪರವಾನಗಿ ಪಡೆಯುವುದು ವಿವೇಕವಲ್ಲ.

ಇಂದು 'ಕಾನೂನು' ಮಾತ್ರ ನಮ್ಮನ್ನು ನೇತ್ಯಾತ್ಮಕ ಕೆಲಸಗಳಿಂದ ತಡೆಯುವ ಏಕಮಾತ್ರ ಸಾಧನವಾಗಿ ವ್ಯವಸ್ಥೆಯಲ್ಲಿದೆ. ನಮ್ಮ ಶಿಕ್ಷಣ ಕಾನೂನಿಗೆ ಹೆಚ್ಚು ಒತ್ತು ಕೊಡುತ್ತದೆ, ಕಾನೂನಿನ ಸಾಧ್ಯತೆಗಳನ್ನು ಮಾತ್ರ ಗುರುತಿಸುತ್ತದೆ. ಕಾನೂನಿನ ಹೊರತಾಗಿಯೂ, ಮೂಲಭೂತವಾಗಿ ಮನುಷ್ಯನನ್ನು ಒಳ್ಳೆಯವನನ್ನಾಗಿ ಮಾಡಬಹುದಾದ ಸಾಧ್ಯತೆಗಳನ್ನು ಗುರುತಿಸಲು ಶಿಕ್ಷಣ ವಿಫಲವಾಗಿದೆ. ಬಲವಾದ ಕಾನೂನುಗಳು ಮನುಷ್ಯ ದಾರಿ ತಪ್ಪದಂತೆ ನೋಡಿಕೊಳ್ಳುವುದು ನಿಜವಾದರೂ ಎಷ್ಟೇ

ಕಾನೂನುಗಳು ಇದ್ದರೂ ಮನುಷ್ಯನ ಮೂಲಭೂತ ಒಳ್ಳೆಯತನವೇ ಕಟ್ಟಕಡೆಗೆ ಫಲ ಕೊಡುತ್ತದೆ. ಈ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರು ಹೇಳುವ ಮಾತುಗಳನ್ನು ಗಮನಿಸಬೇಕು: "ಸಾಮಾಜಿಕವೇ ಆಗಿರಲಿ, ರಾಜಕೀಯವೇ ಆಗಿರಲಿ, ಮೂಲಭೂತವಾಗಿ ಎಲ್ಲ ವ್ಯವಸ್ಥೆಗಳು ಆಧರಿಸುವುದು ಮನುಷ್ಯನ ಒಳ್ಳೆಯತನವನ್ನು. ಸರ್ಕಾರ ಈ ಕಾನೂನನ್ನೋ, ಆ ಕಾನೂನನ್ನೋ ಜಾರಿಗೊಳಿಸುತ್ತದೆ ಎಂಬ ಕಾರಣಕ್ಕಾಗಿ ಒಂದು ರಾಷ್ಟ್ರ ಶ್ರೇಷ್ಠವಾಗುವುದಿಲ್ಲ. ಹಾಗಾಗುವುದಿದ್ದರೆ ಅಲ್ಲಿನ ಜನ ಶ್ರೇಷ್ಠರು ಅಥವಾ ಒಳ್ಳೆಯವರು ಎಂಬ ಕಾರಣಕ್ಕಾಗಿ".

## ನಮ್ಮ ಉದ್ಯಮಗಳು ಮತ್ತು ಹಸಿರು ಭೂಮಿ

ಅದೊಂದು ಬಹಳ ದೊಡ್ಡ ಸಭೆ. ಉದ್ಯಮಶೀಲ ಎಂ.ಬಿ.ಎ. ವಿದ್ಯಾರ್ಥಿಗಳಿಗೆ ಅವರ ಸಾಮಾಜಿಕ ಕಳಕಳಿಯ ಸಾಧನೆಗಳನ್ನು ಗಮನಿಸಿ ಪ್ರಶಸ್ತಿಗಳನ್ನು ನೀಡಲಾಗುತ್ತಿತ್ತು. ಭಾರತದ ಬಹುದೊಡ್ಡ ಉದ್ಯಮಿಯೊಬ್ಬರು ಯುವಕರಿಗೆ ಬುದ್ಧಿವಾದ ಹೇಳುತ್ತಿದ್ದರು. ಅವರ ಬುದ್ಧಿವಾದ ಹೀಗೆ ಸಾಗಿತ್ತು: "ಹಣ ಸಂಪಾದಿಸುವುದನ್ನು ಎಂದೂ ನಿಲ್ಲಿಸಬೇಡಿ; ಹೆಚ್ಚು ಹೆಚ್ಚು ಹಣ ಸಂಪಾದಿಸಿ. ಬೇಕಾದರೆ ಅದನ್ನು ದಾನ ಮಾಡಿ. ಆದರೆ ಹಣ ಸಂಪಾದಿಸುವುದನ್ನು ಮಾತ್ರ ನಿಲ್ಲಿಸಬೇಡಿ. ನಿಮ್ಮ ವಾಣಿಜ್ಯೋದ್ಯಮ ಸದಾ ಬೆಳೆಯುತ್ತಿರಬೇಕು. ಮತ್ತು ಉದ್ಯಮಗಳಿಗೆ ಇದೊಂದೇ ದಾರಿ. ಬೆಳೆಯುವುದನ್ನು ನಿಲ್ಲಿಸಿದರೆ ಸಾವು ಖಚಿತ, ಆದ್ದರಿಂದ ನಿಮ್ಮ ಉದ್ಯಮ ಸದಾ ಬೆಳೆಯುತ್ತಿರುವಂತೆ ನೋಡಿಕೊಳ್ಳಿ. ಕನಿಷ್ಠ ಐದುನೂರು ವರ್ಷಗಳಾಚೆಗೆ ನಿಮ್ಮ ಉದ್ಯಮದ ಸ್ವರೂಪ ಹೇಗಿರಬೇಕೆಂದು ಒಂದು ದರ್ಶನ, ಒಂದು ಕಾಣ್ಕೆ ನಿಮಗೆ ಇರಲಿ. ಯಾವಾಗಲೂ ದೊಡ್ಡ ಬಹುದೊಡ್ಡ ಕನಸನ್ನು ಕಾಣಿರಿ. ನಿಮ್ಮ ಕನಸನ್ನು ಮುಂದಿನ ಪೀಳಿಗೆಗೆ ವರ್ಗಾಯಿಸಿ..."

"ಆದರೆ ಸ್ನೇಹಿತರೆ, ಎಲ್ಲವನ್ನೂ ನೈತಿಕ ಚೌಕಟ್ಟಿನಲ್ಲೇ ಸಾಧಿಸಿ. ಅನೈತಿಕ ಮಾರ್ಗ ಹಿಡಿಯುವುದು ಬೇಡ. ನಾವು ಎಲ್ಲ ಧರ್ಮಗಳನ್ನು ಗೌರವಿಸೋಣ, ಎಲ್ಲ ದೇಶದವರನ್ನೂ ಗೌರವಿಸೋಣ. ಎಲ್ಲಿ ಕೋಮು ಸೌಹಾರ್ದ ಇಲ್ಲವೋ ಅಲ್ಲಿ ಆರ್ಥಿಕ ಪ್ರಗತಿ ಸಾಧ್ಯವಿಲ್ಲ. ಆದ್ದರಿಂದ ಆರ್ಥಿಕ ಪ್ರಗತಿ ಸಾಧಿಸಬೇಕಾದರೆ ಜಾತ್ಯತೀತ ಮನೋಧರ್ಮ ಬೇಕು. ನಾವು ಎಲ್ಲ ದೇಶಗಳನ್ನು ಗೌರವಿಸೋಣ, ಎಲ್ಲ ದೇಶದ, ಎಲ್ಲ ಧರ್ಮಗಳ, ಎಲ್ಲ ಜನಾಂಗಗಳ ಜನರನ್ನು ಗೌರವಿಸೋಣ. ಕೋಮು ಸೌಹಾರ್ದ ಇರುವಲ್ಲಿ ಮಾತ್ರ ನಮ್ಮ ಉದ್ಯಮಗಳನ್ನು ಕಟ್ಟೋಣ. ನಮ್ಮ ಉದ್ಯಮ ರಾಷ್ಟ್ರೀಯ ಗಡಿಗಳಿಂದಾಚೆಗೆ ಅಂತಾರಾಷ್ಟ್ರೀಯವಾಗಿ ಬೆಳೆಯಬೇಕು. ಜಾಗತೀಕರಣ ಎಂದರೆ ಏನು ಗೊತ್ತೆ? ಎಲ್ಲಿ ಕಚ್ಚಾ ಪದಾರ್ಥಗಳು ಸುಲಭ ಬೆಲೆಯಲ್ಲಿ ಸಿಗುತ್ತದೋ ಅಲ್ಲಿ ಅದನ್ನು ಕೊಂಡು, ಎಲ್ಲಿ ಶ್ರಮಿಕರು ಕಡಿಮೆ ಬೆಲೆಯಲ್ಲಿ ಸಿಗುತ್ತಾರೋ ಮತ್ತು ಕೌಶಲವನ್ನು ಪಡೆದಿದ್ದಾರೋ

ಅಲ್ಲಿ ವಸ್ತುಗಳನ್ನು ತಯಾರಿಸಿ, ಅತ್ಯಂತ ಹೆಚ್ಚು ಬೆಲೆ ಎಲ್ಲಿ ದೊರೆಯುತ್ತದೋ ಅಲ್ಲಿ ಮಾರುವುದು. ಇದೇ ಜಾಗತೀಕರಣ.

"ಆದರೆ, ಸ್ನೇಹಿತರೆ, ಈ ಭೂಮಿ ಹಸಿರಾಗಿಯೇ ಉಳಿಯಬೇಕು. ನಮ್ಮ ಮಕ್ಕಳು, ಮೊಮ್ಮಕ್ಕಳು ಬದುಕಿ ಬಾಳಲು ಹಸನಾಗಿರಬೇಕು. ಇಂಗಾಲದ ಡೈ ಆಕ್ಸೈಡನ್ನು ಹೆಚ್ಚಾಗಿ ವಾತಾವರಣಕ್ಕೆ ಬಿಡುಗಡೆ ಮಾಡಿ ಜಾಗತಿಕ ತಾಪಮಾನಕ್ಕೆ ಕಾರಣರಾಗುವುದು ಬೇಡ. ಇರುವುದು ಒಂದೇ ಭೂಮಿ. ಇದನ್ನು ನಾವು ಹಾಳುಗೆಡಹುವುದು ಬೇಡ."

ಹೀಗೇ – ಭಾಷಣ ಸಾಗುತ್ತಿತ್ತು. ದೊಡ್ಡದಾದ ಕನಸನ್ನು ಕಾಣುವುದೇ ಆದರ್ಶ ಎಂಬ ಈ ಭಾಷಣವನ್ನು ಕೇಳಿ ಸ್ಫೂರ್ತಿಗೊಂಡ ಯುವಕರು ಆಗಾಗ ಶಿಳ್ಳೆ ಹಾಕುತ್ತಿದ್ದರು, ಕರತಾಡನ ಮಾಡುತ್ತಿದ್ದರು. ಬಹುಶಃ ಅವರಲ್ಲಿ ಈ ಸ್ಫೂರ್ತಿಯುತವಾದ ಭಾಷಣ ಕೇಳಿ ಹೊಸ ಕನಸುಗಳು ಆಗಲೇ ಅಂಕುರವಾಗಿಬಿಟ್ಟಿದ್ದವು. ಅಲ್ಲಿ ಸೇರಿದ್ದ ಯಶಸ್ವಿ ಉದ್ಯಮಿಗಳು ಭಾಷಣಕಾರನ ಸಾಧನೆಗಳನ್ನು ಕಂಡು ಕೇಳಿ ದಂಗಾಗಿಹೋಗಿದ್ದರು. ನವ ಉತ್ಸಾಹ ತುಂಬಿತುಳುಕುತ್ತಿದ್ದ ಆ ವಾತಾವರಣದಲ್ಲಿ ಬದುಕಿನ ಬಹುಮುಖ್ಯ ಪ್ರಶ್ನೆಗಳು ಅಪ್ರಸ್ತುತ ಎನಿಸುವಷ್ಟು ಅಂಚಿಗೆ ಹೋಗಿ ನಿಂತಿದ್ದವು.

ಈ ಸಂದರ್ಭದಲ್ಲಿ ನಮ್ಮನ್ನು ಕಾಡುವ ಪ್ರಶ್ನೆಗಳು ಯಾವುವೆಂದರೆ – ಎಣೆಯಿಲ್ಲದ ಆರ್ಥಿಕ ಪ್ರಗತಿ ಮತ್ತು ಹಸಿರು ಭೂಮಿ ಒಟ್ಟಿಗೆ ಇರಲು ಸಾಧ್ಯವೆ? ಪ್ರತಿಯೊಬ್ಬನೂ ದೊಡ್ಡದಾಗಿ ಬೆಳೆಯುವ ಕನಸು ಹೊತ್ತು ಹೊರಟರೆ, ಎಂದರೆ ಎಲ್ಲರೂ ಬಿಲಿಯನ್ ಡಾಲರ್ ಬಿಸಿನೆಸ್‌ಗಳನ್ನು ಬೆಳೆಸಿದರೆ, ಈ ಭಾರವನ್ನು ನಮ್ಮ ಭೂಮಿ ಹೇಗೆ ತಾನೆ ತಾಳಿಕೊಳ್ಳಬಲ್ಲುದು? ಈ ಉದ್ಯಮಕ್ಕೆ ಹೊಂದಿಕೊಂಡು ಯಥೇಚ್ಛವಾದ ಹಣಕ್ಕೆ ಪಾಲುದಾರರಾದ ಶ್ರೀಮಂತರ ಸಂಖ್ಯೆ ಹೆಚ್ಚಾಗುವುದು ಅನಿವಾರ್ಯ. ಇವರು ತಮ್ಮ ಹಣಬಲದಿಂದ ಪ್ರಕೃತಿ ಸಂಪನ್ಮೂಲಗಳನ್ನು ಧ್ವಂಸ ಮಾಡುವ ದುಷ್ಟಶಕ್ತಿಗಳಾಗಿ ಪರಿಣಮಿಸುವುದಿಲ್ಲವೆ? ಈ ಭಾಷಣದಲ್ಲಿ ಸಮಷ್ಟಿ ಜವಾಬ್ದಾರಿಯ ಕುರಿತು ಮಾತುಗಳಿದ್ದರೂ ಆ ಮಾತುಗಳು ತಮ್ಮ ಉದ್ಯಮಕ್ಕೆ ಕಳಂಕ ಬರದಿರಲು ಕನಿಷ್ಠ ಎಷ್ಟು ಬೇಕೋ ಅಷ್ಟು ಮಾತ್ರ. ಕೋಮುಸೌಹಾರ್ದ ಬೇಕಾದದ್ದು ಆರ್ಥಿಕ ಪ್ರಗತಿ ಸಾಧಿಸಲು. ಮನುಷ್ಯನ ನೆಮ್ಮದಿಗಾಗಿ ಈ ಮೌಲ್ಯ ಎಂಬುದು ಈ ಸಂದರ್ಭದಲ್ಲಿ ಎರಡನೆಯ ಮಾತು. ಅಂತಾರಾಷ್ಟ್ರೀಯ ಸೌಹಾರ್ದ, ಇತರ ಮನುಷ್ಯರ ಬಗ್ಗೆ ಗೌರವ ಇತ್ಯಾದಿಗಳು ಉದ್ಯಮವಿಸ್ತರಣೆಗೆ ಎಷ್ಟು ಬೇಕೊ ಅಷ್ಟು ಇದ್ದರೆ ಸಾಕು. ಒಟ್ಟಿನಲ್ಲಿ ಉದ್ಯಮವೊಂದು ಬೆಳೆಯುತ್ತಿದ್ದರೆ ಸಾಕು ಉಳಿದೆಲ್ಲವೂ ಸುಸೂತ್ರ ಎಂಬ ನಂಬಿಕೆ ಇದು. ಇಲ್ಲಿ ಮನಷ್ಯ ಉದ್ಯಮದ ಪರ್ಯಾಯರೂಪವಾಗಿಬಿಡುತ್ತಾನೆ. ಉದ್ಯಮದ ಹೊರತಾಗಿ ಅವನಿಗೆ ಬೇರೆಯಾದ ಅಸ್ತಿತ್ವವೇ ಇಲ್ಲ! ಮೌಲ್ಯಗಳನ್ನು ಸರಕು ಸಮೃದ್ಧಿಗಾಗಿ ಬಳಸಿಕೊಳ್ಳುವ ಏಕಮಾತ್ರ ಉದ್ದೇಶ ಈ ಮೌಲ್ಯ ಪ್ರತಿಪಾದನೆಯ ಹಿಂದೆ ಇದೆ. ಅಲ್ಲದೆ ಪರಿಸರದ ಕಾಳಜಿಗಳ ಬಗ್ಗೆ ಮಾತನಾಡುವ ಮೂಲಕ ಸುಲಭವಾಗಿ ಆ ಸಂಬಂಧದ

ಅಪರಾಧಿ ಪ್ರಜ್ಞೆಯನ್ನು ಶಮನ ಮಾಡಿಕೊಳ್ಳಬಹುದು. ಬದುಕುವುದಕ್ಕಿಂತ ಉದ್ಯಮ ಬೆಳೆಸುವುದು, ಹಣ ಗಳಿಸುವುದು ಬಹಳ ಮುಖ್ಯ ಎಂದು ಭಾವಿಸುವುದು ಇಂದಿನ ಜನಪ್ರಿಯ ಮೌಲ್ಯವಾಗಿರುವುದಕ್ಕೆ ಕಾರಣ ನಮ್ಮ ನಡುವೆ ಇರುವ ಇಂತಹ ಯಶಸ್ವೀ ಉದ್ಯಮಿಗಳು. ಈ ಉದ್ಯಮಿಗಳ ಜೀವನದೃಷ್ಟಿ ನಮ್ಮ ಯುವಜನತೆಯ ಜೀವನಾದರ್ಶವಾಗುವುದಾದರೆ, ಇವರು ನಮ್ಮ ಶಿಕ್ಷಣವನ್ನು ನಿಯಂತ್ರಿಸುವುದಾದರೆ, ಹುಟ್ಟುವ ಸುಶಿಕ್ಷಿತರು ಹೇಗಿರಬಹುದೆಂದು ಊಹಿಸಬಹುದಲ್ಲವೆ?

ಭಾಷಣಕಾರನಾದ ಈ ಉದ್ಯಮಿ ವೈಯಕ್ತಿಕ ಬದುಕಿನಲ್ಲಿ ಮೌಲ್ಯವಂತನೇ ಆದರೂ ಉದ್ಯಮದ ಬದುಕಿನಲ್ಲಿ ಆತನ ಬದ್ಧತೆ ಉದ್ಯಮಕ್ಕೆ ಮತ್ತು ಗ್ರಾಹಕರಿಗೆ ಸೀಮಿತ. ಮೌಲ್ಯಗಳ ಮಾತು ಹುಟ್ಟಿದ್ದು ಉದ್ಯಮಕ್ಕೆ ಪೂರಕವಾಗಿಯೇ ಹೊರತು ಅವುಗಳಿಗೆ ಯಾವ ಪ್ರಧಾನ್ಯವನ್ನೂ ಕೊಡಬೇಕೆಂಬ ಉದ್ದೇಶದಿಂದಲ್ಲ. ಇದು ಒಬ್ಬ ವ್ಯಕ್ತಿಯ ಸಮಸ್ಯೆ ಎನ್ನುವುದಕ್ಕಿಂತ ಉದ್ಯಮ-ಉದ್ಯಮಶೀಲತೆ ಹುಟ್ಟು ಹಾಕುವ ಮನೋಧರ್ಮದ ಸ್ವರೂಪವೇ ಹೀಗೆ ಇರುತ್ತದೆ ಎಂದು ಅರಿಯಬಹುದು.

ಉದ್ಯಮದ ಬಗ್ಗೆ ಜವಾಬ್ದಾರಿಯನ್ನು ಹೆಚ್ಚಿಸಲು, ತನ್ನದೇ ಉದ್ಯಮದ ಯಶಸ್ಸನ್ನು ಖಚಿತಪಡಿಸಿಕೊಳ್ಳಲು ಈ ಉದ್ಯಮಿ ಐದುನೂರು ವರ್ಷಗಳ ಆಚೆಗೆ ಕನಸು ಕಾಣಿರಿ ಎಂದು ಸಲಹೆ ನೀಡುತ್ತಾರೆ. ಈ ಮಾತನ್ನು ಅವರು ತಮ್ಮ ಸಿಬ್ಬಂದಿಗೇ ಹೆಚ್ಚು ಅನ್ವಯಿಸಿ ಮಾತನಾಡುತ್ತಿದ್ದರು ಎಂದು ಕಾಣುತ್ತದೆ. ಇವರ ಉದ್ಯಮದ ಅನುಯಾಯಿಗಳು ಹೀಗೆ ಮುಂದಾಲೋಚನೆ ಮಾಡುತ್ತ, ಮುಂದಾಳತ್ವವನ್ನು ವಹಿಸುತ್ತ ಕೆಲಸ ಮಾಡಿದರೆ ತಾನೆ ಅವರ ಉದ್ಯಮ ನಿರಂತರ ಬೆಳೆಯಲು ಸಾಧ್ಯ!

ಐದುನೂರು ವರ್ಷಗಳ ನಂತರ ಪರಿಸರ ಹೇಗಿರಬೇಕು ಎಂಬ ಬಗ್ಗೆ ನಿಜವಾದ ಕಳಕಳಿ ಇವರಿಗೆ ಇದೆಯೆ? ಇಂದಿನ ವಾಸ್ತವ ಪರಿಸ್ಥಿತಿಯ ಮುಂದುವರಿದ ಭಾಗ ಹೇಗಿರುತ್ತದೆ ಎಂದು ಇವರು ಊಹಿಸಲಾರರೆ? ಆದರೆ ಇವರಿಗೆ ಆ ವಿಚಾರ ಬೇಕಿಲ್ಲ. ಈಗ ನನ್ನ ಮುದ್ದು ಆಲೋಚನೆ "ದೊಡ್ಡದು ಮತ್ತೂ ದೊಡ್ಡದು" ಎಂಬ ಕನಸು ಕಾಣುತ್ತ ಬೆಳೆಯುತ್ತಲೇ ಇರಬೇಕು. ಐದುನೂರು ವರ್ಷದಾಚೆಗೆ ಕನಸುಕಾಣಿ ಎನ್ನುತ್ತಿರುವ ಇವರಿಗೆ ವರ್ತಮಾನದಲ್ಲೇ ದುರಂತಮಯವಾಗಿರುವ ನಮ್ಮ ಪರಿಸರ ಕಣ್ಣಿಗೇ ಕಾಣುತ್ತಿಲ್ಲ!

ಈ ಚರ್ಚೆಯ ಹಿನ್ನಲೆಯಲ್ಲಿ ಎರಡು ಮುಖ್ಯ ಅಂಶಗಳನ್ನು ಚರ್ಚಿಸಬೇಕು. ಮೊದಲನೆಯದಾಗಿ ಉದ್ಯಮ ಎಂಬುದು ಉಳಿಯಬೇಕಾದರೆ ಅದು ಸದಾ ಕಾಲವೂ ವಿಸ್ತರಿಸುತ್ತಲೇ ಇರಬೇಕು. ಇದು ಕ್ಯಾನ್ಸರ್ ರೋಗದಂತೆ. ಈ ವಿಸ್ತಾರ ಒಂದು ಅಸಹಜ ಬೆಳವಣಿಗೆ, ಅನಾರೋಗ್ಯ ಮನಸ್ಸಿನ ಆಶಯ. ಮನುಷ್ಯದೇಹದ ವಿಚಾರವಾಗಿ ನೋಡುವುದಾದರೆ ಅವನು ಕೆಲವು ಕಾಲ ಬೆಳೆದ ಬಳಿಕ ಮತ್ತಷ್ಟು ವಿಸ್ತಾರಗೊಳ್ಳುವ ಪ್ರಕ್ರಿಯೆಯನ್ನು ನಿಲ್ಲಿಸಿ ಬದುಕಲು ಪ್ರಾರಂಭಿಸುತ್ತಾನೆ. ಕೊನೆಗೆ ಸಾಯುವುದು ಸ್ವಾಭಾವಿಕ. ಉದ್ಯಮಗಳೂ ಹೀಗೇ ಆದರೆ ಒಳಿತು. ಹೊಸ ಮನುಷ್ಯರು ಈ ಜಗತ್ತಿಗೆ ಸೇರುವಂತೆ

ಹಳೇ ಉದ್ಯಮಗಳು ಸತ್ತು ಹೊಸ ಉದ್ಯಮಗಳು ತಲೆ ಎತ್ತುತ್ತವೆ. ಸದಾ ಬದುಕುತ್ತ ಸದಾ ವಿಸ್ತಾರಗೊಳ್ಳುವುದು ಮನುಷ್ಯನ ಗುಣ ಅಲ್ಲ. ಅದು ಜೀವಿಗಳ ಲಕ್ಷಣವೂ ಅಲ್ಲ. ಅದು ಹಿರಣ್ಯಕಶಿಪುವಿನಂತಹ ರಾಕ್ಷಸನ ಅವಾಸ್ತವ ಆಶಯ. ಇಂತಹ ಒಂದು ಉದ್ಯಮದ ಕಾಣ್ಕೆಗೆ ಮೌಲ್ಯದ ಬಣ್ಣ ಕಟ್ಟಿದ ಮಾತ್ರಕ್ಕೆ ಅದು ತನ್ನ ಪಾಪಗಳನ್ನು ತೊಳೆದುಕೊಂಡು ಶುಭ್ರವಾಗಿಬಿಡಲು ಸಾಧ್ಯವಿಲ್ಲ. ಮೌಲ್ಯವೇ ಪ್ರಧಾನವಾಗಿ, ಉದ್ಯಮ ಎರಡನೆಯ ಸ್ಥಾನಕ್ಕೆ ಸೇರಿದರೆ ಯಾರೂ ದೊಡ್ಡ ಬಹುದೊಡ್ಡ ಉದ್ಯಮಗಳನ್ನು ಕಟ್ಟಲು ಇಂದಿನ ಸಾಮಾಜಿಕ ಸ್ಥಿತಿಗತಿಗಳಲ್ಲಿ ಸಾಧ್ಯವೇ ಇಲ್ಲ. ಅಲ್ಲದೆ ಈ ಭಾಷಣಕಾರ ಹೇಳಿದ ಮತ್ತೊಂದು ಕಿವಿಮಾತು ಎಂದರೆ 'ಸರ್ಕಾರದೊಡನೆ ವಿರಸ ಕಟ್ಟಿಕೊಳ್ಳಬೇಡಿ.' ಈ ಮಾತಿನ ಹಿಂದೆಯೇ ಆತ ಹೇಳಿದ್ದು, 'ಹಾಗೆಂದರೆ ಅಧಿಕಾರಿಗಳ ಕೈಗೆ ಬೆಣ್ಣೆ ಹಚ್ಚಿ ಎಂದು ಇದರರ್ಥವಲ್ಲ.' ಆದರೆ ಇಂದು ನಮ್ಮ ಸಾಮಾಜಿಕ–ರಾಜಕೀಯ ಪರಿಸರದಲ್ಲಿ ಕಟ್ಟುನಿಟ್ಟಾದ ಮೌಲ್ಯವಂತರಿಗೆ ಅತಿ ದೊಡ್ಡದಾದ ಉದ್ಯಮವನ್ನು ಕಟ್ಟುವುದು ಸಾಧ್ಯವೇ ಇಲ್ಲ.

ಮುಖ್ಯವಾದ ಪ್ರಶ್ನೆ ಏನೆಂದರೆ ಅನಿರ್ಬಂಧಿತವಾದ ಆರ್ಥಿಕ ಪ್ರಗತಿ ಮತ್ತು ಸುಸ್ಥಿರ ಸಮಾಜ ಎರಡೂ ಒಟ್ಟಿಗೆ ಹೋಗುವುದು ಸಾಧ್ಯವಿಲ್ಲ. ದುರಾಸೆ ಪ್ರಧಾನವಾದ ಬದುಕು ಎಲ್ಲೆಲ್ಲೂ ತಾಂಡವವಾಡುತ್ತಿರುವ ಇಂದಿನ ಸಾಮಾಜಿಕ ಪರಿಸರದಲ್ಲಿ ಅಪಾರ ಹಣ ಸಂಪಾದಿಸಿಯೂ ಸಂಯಮದಿಂದ ಬದುಕಬಲ್ಲವರು ಎಲ್ಲೋ ಕೆಲವರು. ನಮ್ಮ ಈ ಭಾಷಣಕಾರನೂ ವೈಯಕ್ತಿಕ ಬದುಕಿನಲ್ಲಿ ಸರಳನಾಗಿರುವುದನ್ನು ಯಾರೂ ಪ್ರಶ್ನಿಸುವುದಿಲ್ಲ. ಆದರೆ ಯಾವ ಆದರ್ಶವನ್ನು ಈತ ತನ್ನ ಉದ್ಯಮಶೀಲತೆಯನ್ನು ಸಮರ್ಥಿಸಿಕೊಳ್ಳಲು ಪ್ರತಿಪಾದಿಸುತ್ತಿದ್ದಾನೆಯೋ ಆ ಆದರ್ಶ ಪೃಥ್ವಿಯನ್ನು ಬಹಳ ಕಾಲ ಹಸಿರಾಗಿ ಇಡುವುದಿಲ್ಲ ಎಂಬುದಂತೂ ಎಲ್ಲರಿಗೂ ತಿಳಿಯುವ ವಿಷಯ. ಸರಳ ಸಜ್ಜನ ಮನುಷ್ಯನೂ ಆಂತರಿಕವಾಗಿ ಭ್ರಷ್ಟನಾಗುವುದಕ್ಕೆ ಅವನ ಉದ್ಯಮ ಮತ್ತು ಉದ್ಯಮಶೀಲತೆಯೇ ಕಾರಣ. ಉದ್ಯಮಗಳು ಬೆಳೆಯುತ್ತ ಬೆಳೆಯುತ್ತ ಹೇಗೆ ಮಾಂತ್ರಿಕ ರೂಪಪಡೆಯುತ್ತವೆ ಎಂದು ಕಾರ್ಲ್‌ಮಾರ್ಕ್ಸ್ ವಿವರಿಸುತ್ತಾನೆ. ಬಂಡವಾಳಶಾಹಿ ಉದ್ಯಮಗಳು ಬೃಹತ್ ಉತ್ಪಾದನಾ ಕೇಂದ್ರಗಳಾಗಿ ಬೆಳೆಯುತ್ತ ತಮ್ಮ ಜನಕನ ನಿಯಂತ್ರಣವನ್ನು ಮೀರಿ ಬೆಳೆಯುತ್ತವೆ. ಇದು ಹೇಗೆಂದರೆ ಮಂತ್ರವಾದಿಯ ಮಾಂತ್ರಿಕ ಆಟಗಳು ಕೊನೆಗೆ ತಾವೇ ತಾವಾಗಿ ವಿಜೃಂಬಿಸುತ್ತಾ ಮಂತ್ರವಾದಿಯ ಹತೋಟಿಯನ್ನು ಮೀರುವಂತೆ ಎನ್ನುತ್ತಾನೆ ಮಾರ್ಕ್ಸ್.

ಆದ್ದರಿಂದಲೇ ದೊಡ್ಡ ಉದ್ಯಮಗಳಲ್ಲಿ 'ಇವಿಲ್' ಅಥವ 'ಕೆಡುಕು' ಎಂಬುದು ಅಂತರ್ಗತವಾಗಿದೆ, ಅದನ್ನು ಸಾಮಾಜೀಕರಣ ಮಾಡಿದಾಕ್ಷಣ ಉದ್ಯಮಗಳಿಂದಾಗಿ ಅನಿವಾರ್ಯವಾಗಿ ಉಂಟಾಗುವ ಕೆಟ್ಟ ಪರಿಣಾಮಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂದು ಗಾಂಧೀಜಿ ಹೇಳುತ್ತಿದ್ದರು. ಬಂಡವಾಳಶಾಹಿಗಳು ಬೃಹತ್ ಉದ್ಯಮಗಳಿಗೆ ಕೊಡುವ ಸಮಜಾಯಿಷಿ ಎಂದರೆ ಸಾಮಾಜೀಕರಣದಿಂದ ಎಲ್ಲರಿಗೂ ಸಮಪಾಲು ಎಂಬುದು. ಈ ಮಿಥ್ಯೆಯನ್ನು ಕುರಿತು ಗಾಂಧೀಜಿ ಹೀಗೆ ಹೇಳುತ್ತಾರೆ– "ಪಂಡಿತ

ನೆಹರೂ ಕೈಗಾರಿಕೀಕರಣವನ್ನು ಬಯಸುತ್ತಾರೆ. ಏಕೆಂದರೆ ಇದನ್ನು ಸಾಮಾಜೀಕರಣಗೊಳಿಸಿದರೆ ಬಂಡವಾಳಶಾಹಿ ಕೆಡುಕುಗಳಿಂದ ಇದನ್ನು ಮುಕ್ತವಾಗಿಸಬಹುದು ಎಂದು. ನನ್ನ ಅಭಿಪ್ರಾಯವೇನೆಂದರೆ ಕೈಗಾರಿಕೀಕರಣದಲ್ಲಿ ಕೆಡುಕುಗಳು ಅಂತರ್ಗತವಾಗಿವೆ. ಎಷ್ಟೇ ಸಾಮಾಜೀಕರಣ ಮಾಡಿದರೂ ಕೈಗಾರಿಕೀಕರಣದ ಕೆಡುಕುಗಳನ್ನು ತಪ್ಪಿಸಲಾಗದು".

ಅವರು ಮತ್ತೆ ಹೇಳುತ್ತಾರೆ: "ಮನುಷ್ಯ ತನ್ನ ನಿಜವಾದ ಆವಶ್ಯಕತೆಗಳನ್ನು ಗುರುತಿಸಿ ಅದನ್ನು ಪಡೆದುಕೊಂಡು ತೃಪ್ತನಾಗಿರಬೇಕು. ಈ ನಿಯಂತ್ರಣವನ್ನು ಅವನು ಸಾಧಿಸದೆ ಇದ್ದರೆ ಅವನು ತನ್ನನ್ನೇ ತಾನು ಕಾಪಾಡಿಕೊಳ್ಳಲಾರ." ಗಾಂಧಿಜಿಯವರ ಮತ್ತೊಂದು ಮಾತನ್ನು ನೆನೆದು ಈ ಅಧ್ಯಾಯವನ್ನು ಮುಗಿಸಬಹುದು – "ನಿಮಗೆ ಒಂದು ಸಿದ್ಧಮಂತ್ರವನ್ನು ಕೊಡುತ್ತೇನೆ. ಸಂದಿಗ್ಧ ಪರಿಸ್ಥಿತಿಯಲ್ಲಿ ನಿರ್ಧಾರ ತೆಗೆದುಕೊಳ್ಳುವುದು ಕಷ್ಟಕರವಾದಾಗ ಅಥವಾ 'ನಾನತ್ವ'ವೇ 'ನಾನು' ಎನ್ನುವುದೇ ಹೆಚ್ಚಾಗಿ ನಿಮ್ಮನ್ನು ಆವರಿಸಿಕೊಂಡಿದೆ ಎಂದು ನಿಮಗೆ ಅನಿಸಿದಾಗ ಈ ಕೆಳಗಿನ ಪರೀಕ್ಷೆಗೆ ನಿಮ್ಮನ್ನೇ ನೀವು ಒಡ್ಡಿಕೊಳ್ಳಿ–

ಹಿಂದೆ ನೀವು ಕಂಡ ಅತ್ಯಂತ ಬಡವನ, ದೀನನ ಮುಖವನ್ನು ನೆನೆಯಿರಿ. ಅನಂತರ ನೀವು ತೆಗೆದುಕೊಳ್ಳುತ್ತಿರುವ ನಿರ್ಧಾರ, ಹೊಸ ಹೆಜ್ಜೆ ಈ ಮನುಷ್ಯನಿಗೆ ಉಪಯೋಗಕ್ಕೆ ಬರುತ್ತದೆಯೇ ಎಂದು ಯೋಚಿಸಿ. ಅವನು ಇದರಿಂದ ಏನಾದರೂ ಪಡೆಯುತ್ತಾನೆಯೇ? ತನ್ನ ಬದುಕನ್ನು ತಾನೇ ನಿಯಂತ್ರಿಸಿಕೊಳ್ಳಬಲ್ಲನೆ, ಬದುಕನ್ನು ಬದಲಿಸಿಕೊಳ್ಳಬಲ್ಲನೇ ಎಂದು ಯೋಚಿಸಿ. ಒಟ್ಟಿನಲ್ಲಿ ಹೇಳಬೇಕೆಂದರೆ ಇದು ಹಸಿದವನಿಗೆ ಅಥವಾ ಆಧ್ಯಾತ್ಮಿಕ ಬಡತನದಲ್ಲಿ ನರಳುತ್ತಿರುವ ಲಕ್ಷಾಂತರ ಜನಕ್ಕೆ ಸ್ವರಾಜ್ಯ ದೊರಕಿಸಿ ಕೊಡುತ್ತಿದೆಯೇ ಎಂದು ಆಲೋಚಿಸಿ. ಆಗ ನಿಮ್ಮನ್ನು ಕಾಡುವ ಅನುಮಾನಗಳು ಮಾಯವಾಗುತ್ತವೆ. ಅತಿಯಾಗಿ ನಿಮ್ಮನ್ನು ಆವರಿಸಿಕೊಂಡಿದ್ದ ನಾನು, ನನ್ನದು ಎಂಬ ಭಾವನೆ ಕರಗಿ ಹೋಗುತ್ತದೆ."

# ೮. ಭೂಮ – ಅಲ್ಪಗಳು ಹಾಗೂ ನಮ್ಮ ಪರೀಕ್ಷಾ ಕೇಂದ್ರಿತ ಶಿಕ್ಷಣ

**ಭೂಮ ಚಿಂತನೆ**

ಗುರು : ಯಾವುದು ಭೂಮವೊ ಅದೇ ಸುಖ, ಅಲ್ಪದಲ್ಲಿ ಸುಖವಿಲ್ಲ. ಭೂಮವೊಂದೇ ನಿಜವಾದ ಸುಖ.

ಶಿಷ್ಯ : ಭೂಮ ಎಂದರೆ ಏನು?

ಗುರು : ಎಲ್ಲಿ ಇನ್ನೊಂದನ್ನು ಕಾಣುವುದಿಲ್ಲವೋ, ಇನ್ನೊಂದು ಅರಿವಿಗೆ ಬರುವುದಿಲ್ಲವೋ ಅದು ಭೂಮ.

-ತೈತ್ತಿರೀಯ ಉಪನಿಷತ್ತು

'ಭೂಮ' ಎಂಬುದು ವಸ್ತುಗಳ ಜಗತ್ತಿಗೆ ಹೊರತಾದ, ತತ್ತ್ವನಿಷ್ಠ ಬದುಕಿಗೆ ಸಂಬಂಧಪಟ್ಟ ವಿಷಯ. ವಸ್ತುಲಾಭವೊಂದೇ ಜೀವನದ ಚರಮಗುರಿಯಲ್ಲ, ಅದರಾಚೆಗೂ ಮನುಷ್ಯ ಜೀವನಕ್ಕೆ ಒಂದು ಗುರಿಯಿದೆ ಎಂಬ ವಿವೇಕವನ್ನು ಭೂಮಚಿಂತನೆ ನೀಡುತ್ತದೆ. ಪರೀಕ್ಷೆಗಳಲ್ಲಿ ಗಳಿಸುವ ಅಂಕಗಳೇ ಶಿಕ್ಷಣದ ಅಂತಿಮ ಉದ್ದೇಶ ಎಂದು ನಮ್ಮ ಇಡೀ ವ್ಯವಸ್ಥೆ ಪರಿಭಾವಿಸುತ್ತಿರುವಾಗ ಮಗು ತನ್ನ ಇತರ ಸುಪ್ತ ಸಾಮರ್ಥ್ಯಗಳನ್ನು ಸಂಪೂರ್ಣವಾಗಿ ಬೆಳೆಸಿಕೊಳ್ಳಲು ಸಾಧ್ಯವೇ? ಸೃಜನಶೀಲತೆ ಸಹಜವಾಗಿ ಅರಳಲು, ವಿಕಾಸಗೊಳ್ಳಲು ನಮ್ಮ ಶಿಕ್ಷಣ ಸಹಕರಿಸುತ್ತದೆಯೇ? ನಿಜ ಹೇಳಬೇಕೆಂದರೆ ಪ್ರತಿಯೊಂದು ಮಗುವೂ ಅದಮ್ಯ ಸಾಧ್ಯತೆಯೊಡನೆ ಜನ್ಮ ತಾಳಿದರೂ ಈ ಸಾಧ್ಯತೆಗಳ ಒಂದು ಮಿಂಚು ನೋಟವೂ ಸಹ ಅದಕ್ಕೆ ಹೊಳೆಯದಂತೆ ತಡೆಯುವುದರಲ್ಲಿ ಶಿಕ್ಷಣ ಯಶಸ್ವಿಯಾಗಿದೆ. E=mc2 ಸೂತ್ರ ಆಗಬಹುದು ಅಥವಾ ಕನ್ನಡದ ಒಂದು ಮಹಾಕಾವ್ಯವಾಗಬಹುದು, ಇವೆಲ್ಲ ಬದುಕಿಗೆ ಸಂಬಂಧಪಡುವುದಿಲ್ಲ ಎಂಬ ಆಳವಾದ ಸಂದೇಶವನ್ನು ನಮ್ಮ ಇಂದಿನ ಪರೀಕ್ಷಾಕೇಂದ್ರಿತ ಶಿಕ್ಷಣ ಮಕ್ಕಳ ಮನಸ್ಸಿನಲ್ಲಿ ಬಿತ್ತುತ್ತಿದೆ. ಭೂಮ ಚಿಂತನೆ ಮನುಷ್ಯನ ಬದುಕನ್ನು, ಜೀವನ ಸಾಫಲ್ಯವನ್ನು ಸಮಷ್ಟಿ ಪ್ರಜ್ಞೆಗೆ ಏರಿಸುತ್ತದೆ. 'ನಾನು–ನನ್ನದು' ಎಂಬ ಸಣ್ಣ ವರ್ತುಲಗಳಲ್ಲೇ ಜೀವನ ಸ್ಥಗಿತವಾಗುವುದಿಲ್ಲ. ಆದರೆ ಭೂಮಪ್ರಜ್ಞೆ ಇಲ್ಲದ ಬದುಕು ಸ್ವಾರ್ಥಮಯವಾಗುತ್ತದೆ. ಬದುಕು ಎಂದರೆ

ಕಾರು ಬಂಗಲೆಗಳನ್ನು ಸಂಪಾದಿಸಿ ತನ್ನ ಪಾಡಿಗೆ ತಾನು ಬದುಕುವುದು ಎಂಬ ನಂಬಿಕೆಯನ್ನು ಧೃಢಪಡಿಸುತ್ತದೆ. ಸಂಘಜೀವನದ ಜವಾಬ್ದಾರಿಗಳೇನಿದ್ದರೂ ಕಾನೂನಿನಂತೆ ನಿರ್ವಹಿಸಬೇಕಾದ ಜವಾಬ್ದಾರಿಗಳು. ಕಾನೂನಿನ ಹೊರತಾಗಿಯೂ ವ್ಯವಸ್ಥೆಗೆ ಸ್ಪಂದಿಸುವ ಜೀವಂತಿಕೆಕೂಡ ಇದರ ಪ್ರಕಾರ ಬದುಕಿಗೆ ನೇರವಾಗಿ ಸಂಬಂಧಪಡುವುದಿಲ್ಲ ಅಥವಾ ಅನಿವಾರ್ಯವೂ ಅಲ್ಲ. $E=MC^2$ ಅಥವಾ ಮಹಾಕಾವ್ಯದ ಹಾಗೆ ಅನಿವಾರ್ಯವಲ್ಲದ್ದನ್ನು ಕುರಿತು ಚಿಂತಿಸುವ ಅಥವಾ ಅದಕ್ಕೆ ಸ್ಪಂದಿಸುವ ಗೊಡವೆ ತಾನೇ ಏಕೆ? ಈ ಬಗೆಯ ಗ್ರಹಿಕೆಯಿಂದಾಗಿ ನಮ್ಮ ವಿಶ್ವವಿದ್ಯಾಲಯಗಳ ಶೈಕ್ಷಣಿಕ ಪರಿಸರವೂ ಎಲ್ಲಬಗೆಯ ಭೂಮಚಿಂತನೆಗಳಿಂದ ದೂರವಾಗೇ ಉಳಿಯುತ್ತಿದೆ. ಇದರ ಪರಿಣಾಮವಾಗಿ ಇಂದು ಮೂಲವಿಜ್ಞಾನ – ಗಣಿತಗಳು ಮೂಲೆಗುಂಪಾಗಿವೆ. ಮಾನವಿಕ ಶಾಖೆಗಳು ಕೇಳುವವರಿಲ್ಲದಂತಾಗಿವೆ. 'ಅನ್ವಯಿಕ' ಶಾಖೆಗಳಾದ ಇಂಜಿನಿಯರಿಂಗ್, ಬಯೋಟೆಕ್ನಾಲಜಿ, ವೈದ್ಯಕೀಯ ಶಾಖೆಗಳಿಗೆ ಮಾತ್ರ ಬೇಡಿಕೆ ಹೆಚ್ಚಾಗುತ್ತಿದೆ.

ಭೂಮ ಚಿಂತನೆಗೂ ಸಾಮಾಜಿಕ ಪ್ರಜ್ಞೆಗೂ ಗಾಢವಾದ ಸಂಬಂಧಗಳಿವೆ. ಪ್ರಯೋಜನ ದೃಷ್ಟಿಯನ್ನಷ್ಟೇ ಬದುಕಿನ ಸಾರವಾಗಿ ಪರಿಗಣಿಸುವ ಈ ಮಂದಿ ಕಣ್ಣಿದ್ದೂ ಕುರುಡರಂತೆ, ತಮ್ಮ ಸಮಾಜದ ಸಾಮಾಜಿಕ, ರಾಜಕೀಯ, ಆರ್ಥಿಕ ಪರಿಸ್ಥಿತಿಗಳನ್ನು ನೋಡಿಯೂ ನೋಡದಂತೆ ತಮ್ಮ ಪಾಡಿಗೆ ತಾವು ಬದುಕುತ್ತಾರೆ. ಹೀಗೆ ಕಣ್ಣಿದ್ದೂ ಕುರುಡರಾಗಿರುವುದಕ್ಕೆ ಇವರು ತಮ್ಮ ಆತ್ಮಸಾಕ್ಷಿಗೆ ಕೊಡುವ ಸುಲಭ ಉತ್ತರ ಎಂದರೆ 'ಸರ್ಕಾರ ಇದೆಯಲ್ಲ! ' ಎನ್ನುವುದು. ಹಸಿದ ಹೊಟ್ಟೆಗಳ ಬಗ್ಗೆ ಚಿಂತಿಸಲು, ಮನೆ ಇಲ್ಲದವರಿಗೆ ಸೂರು ಒದಗಿಸಲು, ಕೆಲಸವಿಲ್ಲದವರಿಗೆ ಕೆಲಸ ಕೊಡಲು – ಹೀಗೆ ಎಲ್ಲಕ್ಕೂ ಸರ್ಕಾರ ಇದೆ. ನಾವು ಕಟ್ಟುವ ತೆರಿಗೆಯಲ್ಲಿ ಸರ್ಕಾರ ಇದನ್ನೆಲ್ಲ ಮಾಡಲಿ – ಇದು ನಮ್ಮ ಮಧ್ಯಮವರ್ಗ ಚಿಂತಿಸುವ ಬಗೆ. ಮೇಲ್ವರ್ಗಕ್ಕೆ ಇದಾವುದನ್ನೂ ಚಿಂತಿಸಲು ಬಿಡುವೇ ಇಲ್ಲ. ಅವರು ಇನ್ನೂ ಎತ್ತರದ ಮೆಟ್ಟಿಲುಗಳನ್ನು ಹತ್ತುವುದರಲ್ಲೇ ನಿರತರಾಗಿದ್ದಾರೆ. ಈ ಚಿಂತನೆಯ ಧಾಟಿಗೆ ಅನುಕೂಲವಾಗಿ ನಮ್ಮ ಶಿಕ್ಷಣದ ಆಶಯವೂ ಇದೆ. ಏಕೆಂದರೆ ಇಂದಿನ ಶಿಕ್ಷಣ ಎಂಬುದು ಬೇಡಿಕೆಗೆ ಅನುಗುಣವಾಗಿ ಮಾರ್ಕೆಟಿಂಗ್ ಮಾಡುವಂತಹ ಒಂದು ಮಾರುಕಟ್ಟೆಯ ಸರಕು. ಮಧ್ಯಮವರ್ಗ ಮತ್ತು ಮೇಲ್ವರ್ಗಗಳಿಗೆ ಈ ವಿಷಮ ಸನ್ನಿವೇಶ ನೇರವಾಗಿ ಅನುಭವಕ್ಕೆ ಬಂದರೂ ಕಾನೂನಿನ ಹೊರತಾಗಿ ಸ್ಪಂದಿಸಬೇಕಾದ ಅನಿವಾರ್ಯತೆಯನ್ನು ಮನಗಾಣುವುದಿಲ್ಲ. ಏಕೆಂದರೆ ಹೀಗೆ ಸ್ಪಂದಿಸುವ ಮೂಲಕ ಇಡಬೇಕಾದ ಮುಂದಿನ ಹೆಜ್ಜೆಗಳು ಅಷ್ಟೇನೂ ಲಾಭದಾಯಕವಾಗಿ ಇರುವುದಿಲ್ಲ. ಕೆಳವರ್ಗದವರು ತಮ್ಮ ವಸ್ತುಸ್ಥಿತಿಗೆ ಸ್ಪಂದಿಸುವ ಬಗೆಯೇ ಬೇರೆ. ಅವರಿಗೂ ಸಹ ತಮ್ಮ ಕಣ್ಣೆದುರಿಗೆ ಇರುವ ಮಧ್ಯಮ ವರ್ಗವೇ ಯಶಸ್ವಿ ಅನುಸರಣೀಯ ಮಾದರಿ. ಅದು ಹೇಗೆ ತನ್ನ ಸ್ವಹಿತರಕ್ಷಣೆ ಮಾಡಿಕೊಳ್ಳುತ್ತಿದೆಯೋ ಹಾಗೇ ಇವರೂ ಅದೇ ಮೆಟ್ಟಿಲುಗಳನ್ನು ಏರಿ ಅದೇ ಗುರಿ ತಲುಪಲು ಹೆಣಗುತ್ತಿರುತ್ತಾರೆ. ಇದರ ಲಾಭವನ್ನು

ನಮ್ಮ ಶಿಕ್ಷಣ ವ್ಯವಸ್ಥೆ, ಅದರಲ್ಲೂ ಖಾಸಗಿ ಶಿಕ್ಷಣ ಸಂಸ್ಥೆಗಳು ಚೆನ್ನಾಗಿ ಮಾಡಿಕೊಳ್ಳುತ್ತಿವೆ. ಇಂದು ಗ್ರಾಮೀಣ ಪ್ರದೇಶಗಳಲ್ಲೂ ತಲೆ ಎತ್ತುತ್ತಿರುವ ಇಂಗ್ಲಿಷ್ ಮಾಧ್ಯಮ ಕಾನ್ವೆಂಟ್‌ಗಳೇ ಇದಕ್ಕೆ ಸಾಕ್ಷಿ. ವಿವೇಕಾನಂದ ಕಾನ್ವೆಂಟ್‌ಗಳಿವೆ, ಭೈರವೇಶ್ವರ ಕಾನ್ವೆಂಟ್‌ಗಳೂ ಇವೆ. ಒಟ್ಟಿನಲ್ಲಿ ಇನ್ನೂ ಜನಗಳ ಮೇಲೆ ಪ್ರಭಾವ ಬೀರುತ್ತ ಅಲ್ಪಸ್ವಲ್ಪವಾಗಿ ಉಳಿದುಕೊಂಡಿರುವ ಸ್ಥಳೀಯ ಸಂಸ್ಕೃತಿನಾಮಗಳ ಜೊತೆ 'ಕಾನ್ವೆಂಟ್' ಎಂಬ ಹೊಸ ಭ್ರಮೆಯ ಹೆಸರನ್ನು ತಳುಕು ಹಾಕಿಬಿಟ್ಟರೆ ಸಾಕು, ಅದು ಮಧ್ಯಮವರ್ಗ ಸಾಮ್ರಾಜ್ಯದ ಹೆಬ್ಬಾಗಿಲು. ಇಂಗ್ಲಿಷ್, ಕಂಪ್ಯೂಟರ್ ಜೊತೆಗೆ ತನ್ನ ಸ್ವಾರ್ಥಮೂಲದ ಬಯಕೆಯನ್ನು ಸ್ವಲ್ಪವೂ ನಾಚಿಕೆಯಿಲ್ಲದೆ, ಅಪರಾಧಿ ಪ್ರಜ್ಞೆಯಿಲ್ಲದೆ ಹೇಳುವ, ಹೇಳುತ್ತ ಅದನ್ನೇ ಸಾಧಿಸುವ 'ಆತ್ಮವಿಶ್ವಾಸ' ವನ್ನು ಗಳಿಸುವುದೇ ಈ ಹೆಬ್ಬಾಗಿಲಿಗೆ ಇರುವ ಪ್ರವೇಶಾನುಮತಿ. ಈ ದೇಶದ ಶೇಕಡ ಅರವತ್ತರಷ್ಟು ಮಕ್ಕಳು ಹತ್ತನೆಯ ತರಗತಿಯನ್ನು ಪ್ರವೇಶಿಸುವ ಮುನ್ನವೇ ಶಾಲೆಯನ್ನು ತೊರೆಯುತ್ತಾರಾದರೂ ಅದರ ಬಗ್ಗೆ, ಆ ಮಕ್ಕಳ ಆವಶ್ಯಕತೆಗಳ ಬಗ್ಗೆ ತಲೆಕೆಡಿಸಿಕೊಳ್ಳದೆ ಸರ್ಕಾರವೂ ಈ ಮಧ್ಯಮವರ್ಗದ ಹೆಬ್ಬಾಗಿಲನ್ನು ಅಲಂಕಾರ ಮಾಡುತ್ತಲೇ ಕಾಲಕಳೆಯಿತ್ತಿದೆ.

## ಅಲ್ಪಮನಸ್ಸುಗಳ ಅಭಿರುಚಿ

ಅಲ್ಪಮನಸ್ಸುಗಳು ಸೃಷ್ಟಿಸುವ ಅಭಿರುಚಿ ಸಮಾಜದ ಸರಾಸರಿ ಧೋರಣೆಯಾಗಿ ಪರಿಣಮಿಸುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ $E=MC^2$ ಅಥವಾ ಒಂದು ಮಹಾಕಾವ್ಯ ಜೀವನಕ್ಕೆ ಸಂಬಂಧಪಟ್ಟೀತು ಹೇಗೆ? ಪ್ರಶ್ನೆ ಏನೆಂದರೆ ಈ ಬಗೆಯ ಮಧ್ಯಮವರ್ಗದ ಜೀವನಮಾದರಿ, ಮನೋಧರ್ಮ ಮತ್ತು ಇದರಿಂದ ಹುಟ್ಟುವ ಜೀವನಸಾಫಲ್ಯಗಳು ಸುಸ್ಥಿರ ಸಮಾಜದ ನಿರ್ಮಾಣಕ್ಕೆ ಪೂರಕವಾಗಬಲ್ಲವೆ ಎನ್ನುವುದು. ಅದರಲ್ಲೂ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಜಾಗತೀಕರಣ–ಉದಾರೀಕರಣ ನೀತಿಗಳ ನಡುವೆ ನಾವು ಕಟ್ಟುವ ಸಮಾಜ ಹಾಗೂ ಅದರ ಪರಿಣಾಮಗಳನ್ನು ಕುರಿತು ಚಿಂತಿಸಿದರೆ ಈ ಮನೋಧರ್ಮದಿಂದ ಸುಸ್ಥಿರ ಸಮಾಜ ಸಾಧ್ಯವಿಲ್ಲ ಎಂಬುದು ಮೇಲ್ನೋಟಕ್ಕೇ ಕಾಣುತ್ತದೆ. ಮೊದಲನೆಯದಾಗಿ ಸಂವೇದನಾಶೀಲತೆಯೇ ಇರದ ಮಧ್ಯಮವರ್ಗವು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಭ್ರಷ್ಟಾಚಾರಕ್ಕೆ ಪೂರಕವಾಗಿ ಕೆಲಸ ಮಾಡುತ್ತದೆ. ಇದರ ಜೊತೆಗೆ ಮಧ್ಯಮವರ್ಗ ಸಮಾಜದ ಎಲ್ಲ ಸೌಕರ್ಯಗಳನ್ನು ಪಡೆದುಕೊಂಡು ವ್ಯವಸ್ಥೆಯ ಏರುಪೇರುಗಳ ಬಗ್ಗೆ ತಟಸ್ಥ ನಿಲುವು ತಳೆಯುವ ಸ್ವಾರ್ಥದಿಂದ ಕೂಡಿದೆ. ಇದು ದನಿಯೆತ್ತುವುದು ತನಗೆ ಸವಲತ್ತುಗಳು ಸಿಗದಾಗ ಮಾತ್ರ. ತನ್ನ ನೆರೆಹೊರೆಯವರಿಗೇ ಘೋರ ಅನ್ಯಾಯವಾದರೂ ಅದಕ್ಕೆ ಸ್ಪಂದಿಸದಷ್ಟು ಸ್ವಾರ್ಥಿಯಾಗಿರುತ್ತದೆ.

ಇದು ಕುಬ್ಜ ಮನಸ್ಸಿನ ಎಂದರೆ ಅಲ್ಪಮನಸ್ಸಿನ ಜೀವನದೃಷ್ಟಿ. ಭೂಮಚಿಂತನೆಯಲ್ಲಿ ಅಭಿರುಚಿ ಬೆಳೆಸಿಕೊಂಡ ಮನಸ್ಸಿಗೆ ತನ್ನ ಅಸ್ತಿತ್ವವನ್ನು ಸಮಷ್ಟಿಯ ಅಸ್ತಿತ್ವದೊಡನೆ, ಸಮಷ್ಟಿಯ ಏರಿಳಿತಗಳೊಡನೆ ಹೊಂದಿಸಿಕೊಳ್ಳುವ, ಕನಿಷ್ಟ ಪಕ್ಷ ಚಿಂತನೆಯಲ್ಲಾದರೂ ಸ್ಪಂದಿಸುವ ಮನಸ್ಸು ಹುಟ್ಟುತ್ತದೆ. ಆದರೆ ಕುಬ್ಜ ಮನಸ್ಸು ಕೇವಲ ಸ್ವಾರ್ಥ ವರ್ತುಲಗಳಲ್ಲಿ ಮಾತ್ರ ಗಿರಕಿ ಹೊಡೆಯುತ್ತದೆ. ಇದು ವ್ಯವಸ್ಥೆಯ ವಿರುದ್ಧ ಎಂದೂ ಸೆಟೆದು ನಿಂತು ವಿರೋಧ ಕಟ್ಟಿಕೊಳ್ಳುವುದಿಲ್ಲ. ಮೂರಕ್ಕೆ ಕಡಿಮೆ ಇಲ್ಲದ ಆರಕ್ಕೆ ಹೆಚ್ಚಿಲ್ಲದ ಪ್ರಾಕ್ಟಿಕಲ್ ಜೀವನ ನಡೆಸುವ ಮಧ್ಯಮ ವರ್ಗಕ್ಕೆ ಈ ಭೂಮಚಿಂತನೆ ವಸ್ತುವಾಗಲಾರದು.

## ಶರಣಧರ್ಮ ಮತ್ತು ಪ್ರಕೃತಿ

ಮನಸ್ಸಿನ ವಿದ್ಯಮಾನಗಳು ಅಲ್ಪದ ಸೀಮೆಯನ್ನೆಂದೂ ದಾಟದಿದ್ದರೆ, ಭೂಮದ ಕನಸನ್ನಾದರೂ ಕಾಣದಿದ್ದರೆ ಸುಸ್ಥಿರ ಸಮಾಜ ಸಾಧ್ಯವಿಲ್ಲ. ಶರಣಧರ್ಮ – ಎಂದರೆ ನನಗಿಂತ ದೊಡ್ಡದೊಂದಿದೆ ಎಂದು ತಿಳಿದು ಅದಕ್ಕೆ ತಲೆಬಾಗಿ ನಡೆಯುವ ಧರ್ಮ – ಸುಸ್ಥಿರ ಸಮಾಜದ ಬುನಾದಿ. ಒಂದು ವೇಳೆ ನಾನು ಆಧುನಿಕ ಚಿಂತಕನಾಗಿದ್ದು ನನಗೆ ಧರ್ಮವೆಂಬ ಪದವೇ ಮುಜುಗರವನ್ನುಂಟುಮಾಡುತ್ತದೆ ಎಂದು ಭಾವಿಸುವುದಾದರೂ ನನ್ನ ಚಿಂತನಶೀಲತೆಯ ಹಿಂದಿರುವ ಪ್ರಾಮಾಣಿಕತೆಯೇ ಮನುಷ್ಯನಾಗಿ ನನ್ನ ಪರಿಮಿತಿಗಳನ್ನು ಎತ್ತಿ ತೋರುತ್ತದೆ, ತೋರಲೇಬೇಕು. ಇದೇ ಭೂಮಚಿಂತನೆಯ ಫಲ. ಸಮಗ್ರ ಪ್ರಕೃತಿ–ವಿಶ್ವಗಳ ರಹಸ್ಯದ ಒಂದು ಭಾಗವೂ ನನಗೆ ತಿಳಿದಿಲ್ಲ ಎಂಬ ಸತ್ಯವನ್ನು ಅಂಗೀಕರಿಸುವ ನಿರಹಂಕಾರ ಮನೋಧರ್ಮ ನನಗೆ ಮೂಡುತ್ತದೆ. ಇದು ನಿಜವಾದ ವಸ್ತುನಿಷ್ಠ ಚಿಂತನೆ. ನನ್ನ ಅರಿವಿಗೆ ಬಂದಿರುವುದಷ್ಟೇ ವಾಸ್ತವ, ಅದಕ್ಕೆ ಮಿಗಿಲಾದದ್ದು ಯಾವುದೂ ಇಲ್ಲ ಎಂದು ಭಾವಿಸಿದಾಗ ಗರ್ವ ಹುಟ್ಟುತ್ತದೆ. ಈ ಗರ್ವದ ಪರಿಣಾಮ – ನಾನು ಇಡೀ ಸೃಷ್ಟಿಯ ಸಕಲ ವಿದ್ಯಮಾನಗಳನ್ನೂ ನನ್ನ ಹಿಡಿತಕ್ಕೆ ಎಟುಕುವ ಸೂತ್ರಗಳಿಂದ ಕಟ್ಟಿ ಗೊಂಬೆಯಂತೆ ಕುಣಿಸುತ್ತೇನೆ ಎಂಬ ಹುಂಬತನ. ಇದೇ ಅಲ್ಪ ಚಿಂತನೆ. ಜಾಗತೀಕರಣದ ಮೂಲಬಂಡವಾಳವೂ ಇದೇ. ಇದೇ ನಿಜವಾದ ಅಧರ್ಮ. ಎಲ್ಲ ಅಧರ್ಮಗಳ ಮೂಲ. ಜಾಗತೀಕರಣದ ಅಲೆ ಈ ನಂಬಿಕೆಯನ್ನೇ ಪ್ರಚಾರ ಮಾಡುತ್ತ, ಅದನ್ನೇ ಬಂಡವಾಳಮಾಡಿಕೊಂಡು ಒಂದು ಮಿಥ್ಯಾ ಭರವಸೆಯನ್ನು ಹುಟ್ಟಿಸಿದೆ. ಇದನ್ನೇ ನಂಬುತ್ತಿರುವ ಮನುಜಕುಲ ಪ್ರಕೃತಿಯ ಬೇರುಗಳಿಗೇ ಕೈಹಾಕಿದೆ. ಈ ಅಧರ್ಮ ವಿನಾಶಕ್ಕೆ ಕಾರಣವಾಗುತ್ತದೆ. ಪರಿಸರವಿನಾಶದ ಮೂಲವೂ ಇದೇ. ಹಿರಣ್ಯಕಶಿಪುವಿನ ಗರ್ವವೂ ಇದೇ ಮೂಲದ್ದು. ವರವನ್ನು ಪಡೆಯುವುದೂ ತಂತ್ರಜ್ಞಾನವನ್ನು ಕೈವಶ ಮಾಡಿಕೊಳ್ಳುವುದೂ ಎರಡೂ ಒಂದೆ. ಸೃಷ್ಟಿಯ ಸಕಲವೂ ನನ್ನ ಆಳ್ವಿಕೆಯಲ್ಲಿದೆ, ನಾನು ಸಕಲ ಚರಾಚರಗಳನ್ನು ನಿಯಂತ್ರಿಸುವ ಸ್ವಾಮಿ ಎಂದು ಭಾವಿಸಿದಾಗ ಸೃಷ್ಟಿಕರ್ತ ಬಹಳ ಕಾಲ ಕಾದು ಕೊನೆಗೆ ಅವನನ್ನು

ಕೊಂದುಹಾಕಿದ. ಮಹಿಷಾಸುರನೂ ಹೀಗೆ. ಹೆಣ್ಣು ಏನು ತಾನೆ ಮಾಡೀತು ಎಂದು ಭಾವಿಸಿದ. ಸೃಷ್ಟಿಯಲ್ಲಿ ಯಾವುದೂ ಸಣ್ಣದಲ್ಲ ಎಂಬ ಭಾವನೆ ಹುಟ್ಟಲು ಭೂಮ ಚಿಂತನೆ ಅಗತ್ಯ. ಈ ಕಾರಣದಿಂದ ನಮ್ರತೆ – ವಿನಯಗಳು ಕೇವಲ ನೀತಿಕತೆಗಳಲ್ಲಿ ಕಂಡುಬರುವ ನೀತಿಪಾಠಗಳಷ್ಟೇ ಅಲ್ಲ. ಇವು ಮನುಕುಲ ಬದುಕುಳಿಯಲು ಅಗತ್ಯವಾದ ಮನೋಧರ್ಮಗಳು. ಈ ಮನೋಧರ್ಮಗಳು ಹುಟ್ಟಲು ನಮ್ಮ ನಡುವೆ ಭೂಮದ ಚಿಂತನೆ ಸಾಧ್ಯವಾಗಬೇಕು. ಪಂಪನ ಕಾವ್ಯಮಯವಾದ ಭೂಮ ಮನಸ್ಸು ತಾನು ಮರಿದುಂಬಿಯಾಗಿಯಾದರೂ ಪ್ರಕೃತಿಯೊಡನೆ ಒಂದಾಗಿರಲು ಬಯಸುತ್ತದೆ. ಅದು ಪ್ರಕೃತಿಯ ಅಧಿಪತಿಯಾಗಬೇಕೆಂದು ಬಯಸುವುದಿಲ್ಲ. ಈ 'ಆಧಿಪತ್ಯ'ದ ವಿಲಕ್ಷಣ ಆಸೆಗಳು ಅಲ್ಪ ಮನಸ್ಸಿಗೆ ಮಾತ್ರ ಸಾಧ್ಯ.

ಅಧ್ಯಾತ್ಮಿಕ ದೃಷ್ಟಿಯಿಂದ ಹೇಳುವುದಾದರೆ ಅಲ್ಪದ ಅವಲಂಬನೆಯಿಂದ ಬಿಡುಗಡೆಯಾಗುವುದಕ್ಕೆ ಭೂಮ ಚಿಂತನೆ ಬೇಕು. ನಿರಾವಲಂಬನ ಮನಸ್ಸಿನ ಭೂಮವು ಪ್ರತಿಯೊಂದರಲ್ಲೂ ಭೂಮವನ್ನೇ ನೋಡುತ್ತದೆ. ಆ ಒಂದು ಸ್ಥಿತಿಯಲ್ಲಿ ಅಲ್ಪವೆನ್ನುವುದೇ ಇರುವುದಿಲ್ಲ. ತೈತ್ತಿರೀಯ ಉಪನಿಷತ್ತಿನ ಮಾತಿನಂತೆ ಹೇಳುವುದಾದರೆ ಎಲ್ಲವೂ ಭೂಮಮಯವಾಗಿ ಕಾಣುತ್ತದೆ. ಹಾಗಾಗಿ ಭೂಮಚಿಂತನೆ ನಿರಾಕರಣೆಯಲ್ಲ, ಅದು ಎಲ್ಲವನ್ನೂ ಒಳಗೊಳ್ಳುವ ಮನೋಧರ್ಮ.

### ನಗರಸಂಸ್ಕೃತಿ ಮತ್ತು ಪ್ರಕೃತಿ

ನಗರಸಂಸ್ಕೃತಿ ಹೆಚ್ಚಾದಂತೆಲ್ಲ ಮನುಷ್ಯ ಮತ್ತು ಪ್ರಕೃತಿಯ ಸಂಬಂಧದಲ್ಲಿ ದೊಡ್ಡದೊಂದು ಬಿರುಕು ಹುಟ್ಟುತ್ತಿದೆ. ದಿನಕಳೆದಂತೆ ಈ ಬಿರುಕು ದೊಡ್ಡದಾಗುತ್ತ ಹೋಗುತ್ತಿದೆ. ರುದ್ರರಮಣೀಯವಾದ ಕಾಡುಗಳನ್ನು ಪ್ರಕೃತಿ ಮಾತೆಯ ಮಡಿಲು ಎಂದು ಭಾವಿಸುವುದಕ್ಕಿಂತ ಜನ ಇವುಗಳನ್ನು ಅಪಾಯದ ಸ್ಥಳಗಳಾಗಿ ಗುರುತಿಸುತ್ತಾರೆ. ಮನೆಯ ಹಿತ್ತಲಲ್ಲಿ ಬೆಳೆದ ದೊಡ್ಡ ಬೇವಿನ ಅಥವಾ ಹುಣಸೆಯ ಮರ ದೆವ್ವಗಳ ತಾಣವಾಗಿ ಭಾಸವಾಗತೊಡಗುತ್ತದೆ. ಆದರೆ ಕಾಡಿನ ಮಧ್ಯದಲ್ಲೇ ವಾಸಿಸುವ ಗಿರಿಜನರಿಗೆ ಕಾಡು ರಕ್ಷಣೆ ನೀಡುವ ದೇವರ ತಾಣವಾಗಿ ಕಾಣುತ್ತದೆ. ಅವರು ಮರಗಳಲ್ಲಿ ದೇವರನ್ನು ಕಾಣುತ್ತಾರೆಯೇ ಹೊರತು ದೆವ್ವಗಳನ್ನು ಕಾಣುವುದಿಲ್ಲ. ನಗರದ ಜನಗಳಿಗೆ ವನದೇವತೆ ಎಂಬುದು ಜಾನಪದ ಕಥಾಭಾಗವೇ ಹೊರತು ದಿನನಿತ್ಯದ ಬದುಕಿನ ಭಾಗವಲ್ಲ. ಹೀಗೆ ಪ್ರಕೃತಿ–ಮನುಷ್ಯರ ನಡುವಿನ ಬಿರುಕು ನಿರಂತರವಾಗಿ ವಿಸ್ತರಿಸುತ್ತಾ ಕೊನೆಗೆ ಕಾಡುಗಳನ್ನು ಗೆಲ್ಲುವುದೇ ಮನುಷ್ಯ ಜೀವನದ ಪರಮಗುರಿ ಎನ್ನುವ ನಿಲುವಿಗೆ ಮನುಷ್ಯ ಬರುತ್ತಾನೆ. ಅದ್ಭುತವಾದ ಮಳೆಯ ಕಾಡುಗಳನ್ನುಳ್ಳ ಬ್ರೆಜಿಲ್ ದೇಶದ ಅಧ್ಯಕ್ಷನ ಮಾತನ್ನೇ ಗಮನಿಸಿ. ಆತ ಹೇಳುತ್ತಾನೆ: 'ಅಮೇಜಾನ್ ಕಾಡುಗಳನ್ನು ಮಣಿಸುವ, ನದಿಯ ನೀರನ್ನು ಪಳಗಿಸುವ, ಈ ಭೂಮಿಯನ್ನು ಗೆಲ್ಲುವ ನಮ್ಮ ಯುವಜನರ

ಸಾಹಸಮಯ ಬದುಕಿನ ಕನಸು ನನಸಾಗುವ ಪ್ರಯತ್ನ ಸಫಲವಾಗಿದೆ; ಶತಮಾನಗಳ ಈ ಕದನದಲ್ಲಿ ನಾವು ಗೆಲುವುಗಳ ಮೇಲೆ ಗೆಲುವುಗಳನ್ನು ಸಾಧಿಸಿದ್ದೇವೆ', ಕಾಡುಗಳನ್ನು ಕಡಿದು ಕಡಿದು ತೆರವುಗೊಳಿಸಿದ ಈ ಅಧ್ಯಕ್ಷ ಮಹಾಶಯನಿಗೆ ಪ್ರಕೃತಿಯನ್ನು ಪಳಗಿಸುವ, ಗೆಲ್ಲುವ ಗೀಳು ಹಿಡಿದಿದೆ. ಇದನ್ನು ಇವನು ರಾಷ್ಟ್ರೀಯ ಸಾಹಸಗಾಥೆ ಎಂಬುದಾಗಿ ಬಣ್ಣಿಸುತ್ತಿದ್ದಾನೆ. ಗಿರಿಜನ ಮನಸ್ಸಿಗೂ ನಗರಸಂಸ್ಕೃತಿ ರೂಪಿಸುವ ಈ ಪ್ರಕೃತಿ ವಿಧ್ವಂಸಕ ಮನಸ್ಸಿಗೂ ಎಂತಹ ವ್ಯತ್ಯಾಸ! ಪ್ರಕೃತಿಯೊಡನೆ ನಮ್ಮನ್ನು ಒಂದಾಗಿಸುವ ಭಾವನಾಸರಣಿಗಳು ನಮ್ಮ ಮನಸ್ಸಿನ ಆರೋಗ್ಯವನ್ನು ಕಾಪಾಡುತ್ತಾ ಭೂಮಚಿಂತನೆಗೆ ಎಡೆಮಾಡಿಕೊಡುತ್ತವೆ. ಆದರೆ ಯಾವಾಗ ಪ್ರಕೃತಿಯೊಂದಿಗಿನ - ನಮ್ಮ ಸಂಬಂಧ ವಿಕೃತ ರೂಪ ತಾಳುತ್ತದೆಯೋ ಆಗ ಮನಸ್ಸುಗಳು ಕೂಡ ವಿಕೃತವಾಗುತ್ತ ಹೋಗುತ್ತದೆ. ಈ ಸಂದರ್ಭದಲ್ಲಿ ಸ್ವೀಡನ್ ದೇಶದಲ್ಲಿ ನಡೆಸಲಾದ ಒಂದು ಸಂಶೋಧನೆ ನೆನಪಿಗೆ ಬರುತ್ತದೆ. ಅಲ್ಲಿಯ ಆಸ್ಪತ್ರೆಯ ಮುಂಭಾಗದ ವಾರ್ಡ್‌ಗಳು ರಸ್ತೆಗಳಿಗೆ, ಕಟ್ಟಡಗಳಿಗೆ ಎದುರಾಗಿದ್ದವು. ಹಿಂಭಾಗದ ವಾರ್ಡ್‌ಗಳು ದಟ್ಟವಾದ ಕಾಡಿನಂತೆ ಬೆಳೆದಿದ್ದ ಮರಗಳ ಗುಂಪಿನೆಡೆಗೆ ಮುಖಮಾಡಿತ್ತು. ಆಸ್ಪತ್ರೆಯ ಅಂಕಿಅಂಶಗಳ ಪ್ರಕಾರ ಮರಗಳ ಗುಂಪಿಗೆ ಮುಖಮಾಡಿದ್ದ ವಾರ್ಡ್‌ಗಳಲ್ಲಿ ದಾಖಲಾದ ರೋಗಿಗಳು ರಸ್ತೆಗೆ ಮುಖಮಾಡಿದ್ದ ವಾರ್ಡ್‌ಗಳ ರೋಗಿಗಳಿಗಿಂತ ಬೇಗ ಗುಣಮುಖರಾಗುತ್ತಿದ್ದರು. ಪ್ರಕೃತಿಯನ್ನು ಆಸ್ವಾದಿಸುವ ನಮ್ಮ ಮೂಲಗುಣವನ್ನು ನಾವು ಜೀವಂತವಾಗಿಟ್ಟುಕೊಂಡರೆ ನಮ್ಮ ದೈಹಿಕ-ಮಾನಸಿಕ ಆರೋಗ್ಯ ವೃದ್ಧಿಸುತ್ತದೆ. ಆರೋಗ್ಯವಾದ ಮನಸ್ಸುಳ್ಳವರಿಗೆ ದುರಾಸೆಗಳ ಕುರಿತು ಚಿಂತಿಸಲೂ ಬಿಡುವಿರುವುದಿಲ್ಲ! ಅರೋಗ್ಯವಾದ ಮನಸ್ಸಿಗೆ ಭೂಮಚಿಂತನೆ ಸಾಧ್ಯ. ವಿಕೃತ ಮನಸ್ಸಿಗೆ ಸಾಧ್ಯವಾಗುವುದೆಲ್ಲಾ ಅಲ್ಪಚಿಂತನೆ ಮಾತ್ರ.

ಬಹುಶಃ ಪ್ರಾಣಿಗಳಂತೆ ಮನುಷ್ಯನೂ ಸ್ವಾಭಾವಿಕವಾಗಿ ಬದುಕಿದ್ದರೆ ಪ್ರಕೃತಿಯ ಬಗ್ಗೆ ಮನುಷ್ಯ ಉದ್ದೇಶಪೂರ್ವಕವಾಗಿ ವಿನಯ ನಮ್ರತೆಗಳನ್ನು ತಾಳಬೇಕಾಗಿರಲಿಲ್ಲ. ಪ್ರಾಣಿಗಳಂತೆ ಅವನೂ ಸಹ ಸಹಜ ಪರಿಮಿತಗಳಲ್ಲಿ ಬದುಕಿ ಸಾಯುತ್ತಿದ್ದ. ಆದರೆ ತಂತ್ರಜ್ಞಾನ ಸಾಧ್ಯವಾಗಿರುವುದರಿಂದ ಸೃಷ್ಟಿಯ ಒಂದು ಭಾಗವನ್ನು ಮಾತ್ರ ಅರಿತು ಅದನ್ನು ನಿಯಂತ್ರಿಸುವ ಕೆಲಸಕ್ಕೆ ಕೈಹಾಕುತ್ತಿದ್ದಾನೆ. ಸೃಷ್ಟಿಯನ್ನು ನಮ್ಮ ಮನಸ್ಸು ಎಷ್ಟು ಅರಿಯಬಹುದಿತ್ತೋ ಅಷ್ಟನ್ನೂ ಪ್ರಾಮಾಣಿಕವಾಗಿ ಅರಿತರೆ ಬಹುಶಃ ಮನಸ್ಸು ಯಾವುದನ್ನೂ ನಿಯಂತ್ರಿಸಲು ಪ್ರಯತ್ನಪಡುತ್ತಲೇ ಇರಲಿಲ್ಲ. ಯಾವ ಭ್ರಮೆಗಳೂ ಇಲ್ಲದ ಅವನಿಗೆ ಸಹಜ ಬದುಕೇ ಬೇಕಾದಷ್ಟು ಮುದನೀಡುತ್ತಿತ್ತು. ಅಲ್ಪ ಅರಿವಿನ ಮನಸ್ಸಿಗೆ ಬದುಕಿನ ಅಸಹಜ ಆಯಾಮಗಳ ಕನಸು ಒಂದು ಬಗೆಯ 'ಕಿಕ್' ಕೊಡುತ್ತದೆ. ಈ ಕಿಕ್‌ಅನ್ನು ಅವನು ಅನೇಕ ಬಗೆಯ ಜೀವವಿರೋಧಿ ಸಾಹಸಗಳಲ್ಲಿ ಹುಡುಕುತ್ತಾ ಹೋಗುತ್ತಾನೆ. ಆಲ್ಕೋಹಾಲ್‌ನಿಂದ ಹಿಡಿದು ಹಿಂಸಾಪ್ರಧಾನವಾದ ಎಲ್ಲ ಕ್ರಿಯೆಗಳಿಂದಲೂ ಪಡೆಯುತ್ತಾನೆ. ಹಿಂಸಾಮೂಲದ ಕ್ರಿಯೆಗಳಲ್ಲಿ ತಾನು ಮಾತ್ರ ಗೆಲ್ಲುವ ಇತರರು

ಸೋಲುವ ಸಮೀಕರಣ ಹುಟ್ಟುತ್ತದೆ. ಹೀಗಾಗಿ ಹಿಂಸಾಮೂಲದ ಮನೋರಂಜನೆಯ ಗೀಳು ಸಿನಿಮಾ ನಾಟಕಗಳ ಮನೋರಂಜನೆಗಳಿಂದ ಹಿಡಿದು ನಿಜವಾದ ಅಂತಾರಾಷ್ಟ್ರೀಯ ಯುದ್ಧಗಳಾಗಿ ಪರ್ಯವಸಾನವಾಗುತ್ತವೆ. ಎರಡು ದೇಶಗಳ ನಡುವೆ ಯುದ್ಧ, ಮಾಧ್ಯಮದ ತಾಂತ್ರಿಕ ಸಾಧ್ಯತೆಯಿಂದಾಗಿ ಸುರಕ್ಷಿತವಾಗಿ ನೆಲೆಸಿರುವ ಮೂರನೇ ದೇಶದ ಜನರಿಗೆ ಅದ್ಭುತ ಮನೋರಂಜನೆಯಾಗುತ್ತದೆ. ಇಲ್ಲಿ ನೊಂದು ಬೆಂದವರ ಬಗ್ಗೆ ಸಹಾನುಭೂತಿಯ ಆಟಗಳು, ನೊಂದವರಿಗೆ ಆರ್ಥಿಕ ಸಹಾಯಹಸ್ತ ಚಾಚುವ ನಾಟಕಗಳು ನಡೆಯುತ್ತವೆ. ಇದು ಇಡೀ ಮನುಕುಲಕ್ಕೆ ಸಂಬಂಧಪಟ್ಟ ಸಮಸ್ಯೆ ಎಂಬ ಅರಿವು ಒಂದು ದೇಶದ ಜನರಿಗೆ ಮೂಡಿದೊಡನೆ ಅವರು ಮಾಡುವ ಮೊದಲ ಕೆಲಸ ಎಂದರೆ ತಮ್ಮ ಹಿಂಸಾಮೂಲದ ಮನೋರಂಜನೆಯ ಆಟವನ್ನು ಮೊದಲು ತಿರಸ್ಕರಿಸುತ್ತಾರೆ. ತಮ್ಮ ಜೀವನಶೈಲಿಯನ್ನು ಬದಲಿಸಿಕೊಳ್ಳುತ್ತಾರೆ. ನಾನು ಬದುಕುವ ಪರಿ ಇತರರ ಜೀವನಕ್ಕೆ ಮಾರಕವಾಗದ ಹಾಗೆ ಇರಬೇಕೆಂದು ಭಾವಿಸಿ ತಮ್ಮನ್ನೇ ತಾವು ಬದಲಿಸಿಕೊಳ್ಳುತ್ತಾರೆ. ಆದರೆ ಸಮಸ್ಯೆ ಬೇರೊಬ್ಬರಿಗೆ ಸೇರಿದೆ ಎಂದಾದರೆ ಅಥವಾ ಬೇರೊಬ್ಬರಿಗೆ ಸೀಮಿತವಾಗುವಂತೆ ಚದುರಂಗದಾಟ ಆಡಬಹುದು ಎಂದಾದರೆ ಈ ಜನ ಬದಲಾಗುವುದು ಅನಿವಾರ್ಯವಲ್ಲ. ಇಲ್ಲಿ ಪ್ರಶ್ನೆ ಏನೆಂದರೆ ಅಲ್ಪಮನಸ್ಸು ಅಲ್ಪ ಮನೋರಂಜನೆಯಲ್ಲಿ ಮಗ್ನವಾಗುತ್ತದೆ. ಭೂಮಚಿಂತನೆ ಸಾಧ್ಯವಾಗುವ ಮನಸ್ಸು ಸ್ವಲ್ಪವಾದರೂ ಬದಲಾಗಲು ಪ್ರಯತ್ನಿಸುತ್ತದೆ. ಭೂಮಚಿಂತನೆ ಸಾಧ್ಯವಾಗುವಂತೆ ಮಾಡಬೇಕಾದರೆ ಶಿಕ್ಷಣದಲ್ಲಿರಬೇಕಾದ ಅಂಶಗಳು ಯಾವುವು? ಯಾವ ಶೈಕ್ಷಣಿಕ ಅಂಶಗಳಿಗೆ ನಾವು ಆದ್ಯತೆ ಕೊಟ್ಟರೆ ಭೂಮ ಚಂತನೆ ತಾನೇತಾನಾಗಿ ಮೂಡುತ್ತದೆ? ಈ ಕುರಿತು ಚರ್ಚೆ, ಚಿಂತನೆಗಳಾಗಬೇಕಾಗಿದೆ.

## ಭಾವನಾತ್ಮಕ ಪಲ್ಲಟಕ್ಕೆ ವೈಚಾರಿಕತೆಯ ಸಹಾಯ

ಇಂದು ಮನುಕುಲಕ್ಕೆ ಅದ್ಭುತವಾದ ವಿಚಾರಶೀಲತೆ ಸಾಧ್ಯವಾಗಿದೆ. ವೈಚಾರಿಕತೆಯಿಂದ ಸಾಧ್ಯವಾಗುವ ಎಲ್ಲ ಸ್ಪಷ್ಟತೆಗಳನ್ನು ಮನುಕುಲ ಪಡೆದಿದೆ. ಆದರೂ ಯಾರೂ ಬದಲಾಗಿಲ್ಲ. ವಿಚಾರಪ್ರಧಾನವಾದ ಬೌದ್ಧಿಕಚಿಂತನೆ ವ್ಯಕ್ತಿಗಳ ಕ್ರಿಯೆಯಲ್ಲಿ ತತ್ಸಮಾನವಾದ ಬದಲಾವಣೆ ತರುತ್ತದೆ ಎಂದು ಭಾವಿಸಲಾಗದು. ಇದು ಅಂತರಂಗದ ಬದಲಾವಣೆಗೆ ಅಗತ್ಯವಾದ ಸಲಕರಣೆಯಾಗಬಹುದು ಅಷ್ಟೆ. ಹೇಗೆ ವ್ಯವಸಾಯ ಮಾಡಲು ಸಲಕರಣೆಗಳು ಅಗತ್ಯವೊ ಹಾಗೆ ಆಂತರ್ಯದ ಬದಲಾವಣೆಗೆ ಬೌದ್ಧಿಕ ಸಲಕರಣೆ ಉಪಯೋಗಕ್ಕೆ ಬರಬಹುದು. ಹಾಗೆ ನೋಡಿದರೆ ಕೇವಲ ವಿಚಾರ ಮಾಡಿ ಮನುಷ್ಯ ಆಮೂಲಾಗ್ರವಾಗಿ ಬದಲಾಗಲಾರ ಎಂಬ ಸತ್ಯ ನಮಗೆ ತಿಳಿದುಹೋಗಿದೆ. ಮನುಷ್ಯ ಬದಲಾಗುವುದಾದರೆ ಅದು ಅವನಲ್ಲಿ ಉಂಟಾಗುವ ಭಾವನಾತ್ಮಕ ಪಲ್ಲಟದಿಂದ ಮಾತ್ರ. ಆದರೆ ವಿಚಾರಪ್ರಧಾನವಾದ ನಮ್ಮ ಶಿಕ್ಷಣ ಈ ಭಾವನಾತ್ಮಕ ಬದಲಾವಣೆಗಳ ಕುರಿತು ಮಾತನಾಡುವುದಿಲ್ಲ. ಏಕೆಂದರೆ

ಮನುಷ್ಯನ ಭಾವನಾತ್ಮಕ ಸ್ತರ ಶತಮಾನಗಳ ಅವೈಜ್ಞಾನಿಕ ಚಿಂತನೆಗಳ ಫಲವಾಗಿ ಕಂದಾಚಾರವಾಗಿ ಮೂಢನಂಬಿಕೆಯಾಗಿ ಕೆಟ್ಟ ಹೆಸರು ಪಡೆದಿದೆ. ಭಾವನಾತ್ಮಕತೆ ಎಂಬುದು ಕೇವಲ ಈ ನೇತ್ಯಾತ್ಮಕ ಅಂಶಗಳಿಗೆ ಸೇರಿದ್ದು ಎಂಬ ಹಣೆಪಟ್ಟಿ ಅದಕ್ಕೆ ಇರುವುದರಿಂದ ಅದನ್ನು ವಿಚಾರವಂತರು ಸಾರಾಸಗಟಾಗಿ ತಿರಸ್ಕರಿಸಿದ್ದಾರೆ. ಆದರೆ ಮನಸ್ಸು ಮೂಲಭೂತವಾಗಿ ಬದಲಾಗುವ ಸಾಧ್ಯತೆ ಇದ್ದರೆ ಅದು ಈ ಭಾವನಾತ್ಮಕ ಪಲ್ಲಟಗಳಿಂದ ಮಾತ್ರ ಸಾಧ್ಯ. ಈ ಸಾಧ್ಯತೆಯನ್ನು ನಮ್ಮ ಶಿಕ್ಷಣ ಆದಷ್ಟು ವೈಜ್ಞಾನಿಕವಾಗಿ ಅರಿತು ಬೈಬಲ್‌ನ 'ಗುಡ್ ಸಮರಿಟನ್' ಭಾವನೆಗಳು ಮಕ್ಕಳಿಗೆ ಬರುವಂತೆ ಹೊಸ ವಿಧಾನಗಳನ್ನು ಕಂಡುಹಿಡಿಯಬೇಕು. ಮುಖ್ಯವಾಗಿ ಭಾವನಾತ್ಮಕ ಪಲ್ಲಟಗಳಿಗೆ ಬೌದ್ಧಿಕ ಚಿಂತನೆಯನ್ನು ಆಧಾರವಾಗಿ ಜೋಡಿಸುವುದು ಹೇಗೆ ಎಂದು ಸಂಶೋಧನೆಗಳು ನಡೆಯಬೇಕು.

ಭೂಮಚಿಂತನೆ ಭಾವನಾತ್ಮಕ ಪಲ್ಲಟಗಳಿಗೆ ಎಡೆಮಾಡಿಕೊಡುತ್ತದೆ. ಈ ಭೂಮದ ಮೂಲಕ ವಿನೀತಭಾವವನ್ನು ನಾವು ಪಡೆಯಬೇಕು. ಹಿರಣ್ಯಕಶಿಪು–ಮಹಿಷಾಸುರರು ಬ್ರಹ್ಮನ ವರದಿಂದ ಕೊಬ್ಬಿಹೋಗದಿದ್ದರೆ ಅವರಿಗೆ ಭೂಮವನ್ನು ಅಂಗೀಕರಿಸಬೇಕಾದ ಅನಿವಾರ್ಯವೂ ಇರುತ್ತಿರಲಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ತಂತ್ರಜ್ಞಾನ ಪ್ರಗತಿ ಸಾಧಿಸುವುದರ ಜೊತೆಗೆ ಶರಣಧರ್ಮವನ್ನು, ಭೂಮ ಕುರಿತಾದ ಚಿಂತನೆಯನ್ನು ಮನುಕುಲ ಉಳಿಸಿಕೊಳ್ಳಬೇಕಾಗುತ್ತದೆ. ತಂತ್ರಜ್ಞಾನಪ್ರಗತಿಯ ನೇತ್ಯಾತ್ಮಕ ಪರಿಣಾಮಗಳಿಂದ ಮನುಕುಲ ತನ್ನನ್ನೇತಾನು ಕಾಪಾಡಿಕೊಳ್ಳಬೇಕಾದರೆ ಅದು ಭಾವ ಪರಿವರ್ತನೆಯನ್ನು ತರುವ ಭೂಮಚಿಂತನೆಯಿಂದಮಾತ್ರ ಸಾಧ್ಯ. ಸಹಜವಾದ ವಾತಾವರಣದಲ್ಲಿ ಭೂಮಚಿಂತನೆ ಒಂದು ತೃಪ್ತಿಯನ್ನು ಸಾರ್ಥಕತೆಯ ಭಾವನೆಯನ್ನು ತಂದುಕೊಡುತ್ತದೆ. ಆದರೆ ಅಸಹಜ ಮನೋರಂಜನೆಗಳು ವಾತಾವರಣವನ್ನು ಕಲುಷಿತಗೊಳಿಸುವಾಗ ಮನಸ್ಸು ಈ ಕೀಳು ಮನರಂಜನೆಯಲ್ಲೇ ಮೈಮರೆತು ಭೂಮಸಾಧ್ಯತೆಯನ್ನು ಕಲ್ಪಿಸಿಕೊಳ್ಳಲಾರದು. ಜೊತೆಗೆ ಅನ್ನಚಿಂತನೆಯೆ ಪ್ರಧಾನವಾಗಿರುವ ಪರಿಸರದಲ್ಲಿ ಭೂಮಚಿಂತನೆ ಸಾಧ್ಯವಿಲ್ಲ.

## ಮಿಥ್ಯಾ ಕಲ್ಪನೆಗಳು ಮತ್ತು ಅಸಮಾನತೆಗಳು

ಇಂದು ಎಲ್ಲ ಬಗೆಯ ಅಸಮಾನತೆಗಳು ತಾಂಡವವಾಡುತ್ತಿರುವುದನ್ನು ನಾವು ಅಧರ್ಮ ಎಂದು ಗುರುತಿಸಬೇಕು. ಆರ್ಥಿಕ ಅಸಮಾನತೆ, ಅವಕಾಶಗಳ ಅಸಮಾನತೆ, ಸಂಪನ್ಮೂಲಗಳ ಮೇಲಿನ ಸ್ವಾಮ್ಯದಲ್ಲಿ ಅಸಮಾನತೆ, ಸಾಕ್ಷರತೆಯಲ್ಲಿ ಅಸಮಾನತೆ, ಜಾತಿಯ ಕಾರಣದಿಂದ ಅಸಮಾನತೆ – ಹೀಗೆ ಈ ಅಸಮಾನತೆಗೆ ಉತ್ತರ ಎಲ್ಲ ಬಗೆಯ ಸಂಪತ್ತಿನ ಸಮಾನ ಹಂಚಿಕೆಯುಲ್ಲ. ಸಂಪತ್ತಿನ ಸಮಾನ ಹಂಚಿಕೆಯಿಂದಾಗಿ ಶ್ರೀಮಂತಿಕೆಯಲ್ಲಿ ಮೆರೆಯುತ್ತಿರುವ ಕೆಲವರನ್ನು ಕೆಳಗೆಳೆಯಬಹುದೇ ಹೊರತು ಇದು

ಸುಸ್ಥಿರ ಸಮಾಜಕ್ಕೆ ನಾಂದಿಯಾಗುವುದಿಲ್ಲ. ಇಡೀ ಮನುಕುಲ ತನ್ನ ಜೀವನಶೈಲಿಯನ್ನು ಬದಲಿಸಿ ಜನಸಂಖ್ಯೆಯನ್ನು ನಿಯಂತ್ರಿಸಿದರೆ ಮಾತ್ರ ಇಂದು ಸುಸ್ಥಿರ ಸಮಾಜ ಸಾಧ್ಯವಾದೀತು. ಆರ್ಥಿಕ ಅಸಮಾನತೆಯ ಬಗ್ಗೆ ನಾವು ಚಿಂತಿಸಿದಾಗ ಹಣ ಎಂಬ ಮಿಥ್ಯೆಯ ಮೇಲೆ ನಿರ್ಮಾಣವಾದ ಈ ಅಸಮಾನತೆಯ ಬಗ್ಗೆ, ಎಂದರೆ ಈ ಮಿಥ್ಯಾ ಕಲ್ಪನೆಗಳ ಬಗ್ಗೆ, ಚಿಂತಿಸುವ ವಿವೇಕವನ್ನು ನಮಗೆ ನಮ್ಮ ಶಿಕ್ಷಣ ಕೊಡಬೇಕು. ಈ ಮಿಥ್ಯೆಯನ್ನು ಅರಿಯುವ ಮೂಲಕ ಮಾತ್ರ ನಾವು ನಿಜವಾದ ಸಮಾನತೆಯನ್ನು ಸಾಧಿಸಬಹುದು. ಹಾಗೆ ನೋಡಿದರೆ ಎಲ್ಲ ಬಗೆಯ ಅಸಮಾನತೆಗಳು ಹುಟ್ಟುವುದು ಒಂದು ಮಿಥ್ಯಾಕಲ್ಪನೆಯಿಂದ. ಈ ಅಸಹಜ ನಂಬಿಕೆಗಳೇ ಪ್ರಕೃತಿಗೆ, ಮನುಕುಲಕ್ಕೆ ಮಾರಕ. 'ಎಲ್ಲರ ಅಗತ್ಯಗಳನ್ನು ಪೂರೈಸಬಲ್ಲಷ್ಟು ಸಂಪತ್ತು ಈ ಭೂಮಿಯಲ್ಲಿದೆ; ಆದರೆ ದುರಾಸೆಗಳನ್ನಲ್ಲ' ಎಂದು ಗಾಂಧೀಜಿ ಹೇಳಿದ್ದು ಈ ಸಂದರ್ಭದಲ್ಲಿ ಹೆಚ್ಚು ಅರ್ಥಕೊಡುತ್ತದೆ. ಅಲ್ಲತೆಗೆ ಸೀಮಿತವಾದ ಜೀವನಶೈಲಿ ದುರಂತಮಯ ಸನ್ನಿವೇಶದ ಸೃಷ್ಟಿಗೆ ಕಾರಣವಾಗುತ್ತದೆ.

## ಕಾಯಕ ತತ್ತ್ವ ಮತ್ತು ಸಮಾನತೆ

ಶ್ರಮಕ್ಕೆ ಸಮನಾದ ಒಂದು ಗುಣಮಟ್ಟ ಅದರಿಂದ ಉತ್ಪತ್ತಿಯಾದ ವಸ್ತುವಿಗೆ ಇದ್ದೇ ಇರುತ್ತದೆ. ಈ ವಸ್ತುವಿಗೆ ಸಿಗುವ ಪ್ರತಿಫಲ ಮನುಷ್ಯನ ಶ್ರಮಕ್ಕೆ ಸಮನಾಗಿರಬೇಕು. ಶ್ರಮಕ್ಕೆ ಮೀರಿದ ಪ್ರತಿಫಲವನ್ನು ಯಾವುದೋ ಕಪಟ ಭಾವನೆ ಮೂಡಿಸಿ ನಾವು ಪಡೆದರೆ ಆರ್ಥಿಕ ವ್ಯವಸ್ಥೆ ಏರುಪೇರಾಗುತ್ತದೆ. ಇಂದಿನ ಜಾಗತೀಕರಣದ ಮುಖ್ಯ ಸಮಸ್ಯೆ ಇದೇ. ವಸ್ತುವಿಗೆ ಅದರ ಹಿಂದೆ ಇರುವ ಮನುಷ್ಯನ ಶ್ರಮಕ್ಕಿಂತ ಹೆಚ್ಚಿನ ಬೆಲೆಯನ್ನು ನಾವು ನೀಡಿ ಇಡೀ ವ್ಯವಸ್ಥೆಯನ್ನು ಕೆಡಿಸುತ್ತಿದ್ದೇವೆ. ಚಿನ್ನ ಹೀಗೆ ಬೆಲೆಯುಳ್ಳದ್ದು. ಚಿನ್ನಕ್ಕೆ ನಾವು ಹೆಚ್ಚು ಬೆಲೆ ಕಟ್ಟಿದ್ದೇವೆ. ಅದರ ಹಿಂದೆ ಮನುಷ್ಯನ ಶ್ರಮದ ಪ್ರಶ್ನೆ ಇಲ್ಲ; ಬದಲಿಗೆ ಅದೃಷ್ಟದ ಪ್ರಶ್ನೆ ಇದೆ. ಹಾಗಾಗಿ ಅದು ಕೆಲವೇ ಅದೃಷ್ಟವಂತರಿಗೆ ಸೀಮಿತವಾದ ವಿಷಯ. ಸಮಾಜದಲ್ಲಿ ನಾವೆಲ್ಲರೂ ಪಡೆಯುವ ಪ್ರತಿಫಲದ ಹಿಂದೆ ಶ್ರಮ ಇರಬೇಕೆಂಬುದೇ ಕಾಯಕತತ್ತ್ವ. ಒಬ್ಬ ರೈತ ವರ್ಷವಿಡೀ ಉತ್ತು ಬಿತ್ತು ನೂರು ಮೂಟೆ ರಾಗಿ ಬೆಳೆದು ಮಾರಿ ಬಂದ ದುಡ್ಡಿನಲ್ಲಿ ಮಗಳ ಮದುವೆಗೆಂದು ಚಿನ್ನವನ್ನು ಕೊಂಡ. ಚಿನ್ನದ ವ್ಯಾಪಾರಿ ಈ ಚಿನ್ನವನ್ನು ಸಂಪಾದಿಸಲು ಪಟ್ಟ ಶ್ರಮ ಯಾವುದು? ರೈತನ ರಾಗಿಯನ್ನು ತಿನ್ನಬಹುದು–ಬದುಕಬಹುದು. ಚಿನ್ನವನ್ನು ಧರಿಸಬಹುದೇ ಹೊರತು ಅದನ್ನೇ ತಿಂದು ಬದುಕಲು ಸಾಧ್ಯವೆ? ಈ ವ್ಯಾಪಾರದಲ್ಲಿ ಶ್ರಮದ ಬೆಲೆಗೆ ಸಿಗುವ ಪ್ರತಿಫಲದ ಅಸಮತೋಲನವನ್ನು ಗಮನಿಸಿ. ರೈತನ ಶ್ರಮಕ್ಕೆ ಚಿನ್ನದ ಹಿಂದಿರುವ ವ್ಯಾಪಾರಿಯ ಶ್ರಮ ಸಮವೆ? ಜೊತೆಗೆ ಚಿನ್ನದ ವ್ಯಾಪಾರಿಯ ದರ್ಪ, ರೈತನ ದೈನ್ಯತೆಗಳು ಶ್ರಮಕ್ಕೆ ಸಿಗಬಹುದಾದ ಮರ್ಯಾದೆಯನ್ನು

ಸೂಚಿಸುತ್ತವೆಯಲ್ಲವೆ? ರೈತನಿಗೆ ನಿಜವಾಗಿಯೂ ತನ್ನ ದುಡಿಮೆಯ ಬಗ್ಗೆ ಹೆಮ್ಮೆ ಇರಬೇಕಾಗಿತ್ತು. ಚಿನ್ನದ ವ್ಯಾಪಾರಿಗೆ ಅಪರಾಧಿ ಪ್ರಜ್ಞೆ ಬರಬೇಕಾಗಿತ್ತು. ಈ ಎರಡನ್ನೂ ತಿರುಗು ಮುರುಗು ಮಾಡಿದ ಭ್ರಮೆ ಯಾವುದು? ಈ ದೌರ್ಬಲ್ಯವೇ ಮನುಕುಲದ ಎಲ್ಲಾ ಅಸಮಾನತೆಗಳ ಮೂಲ. ಜಾಗತೀಕರಣದ ಯಶಸ್ಸಿಗೆ ಈ ಭ್ರಮೆಯೇ ಬಂಡವಾಳ. ಪ್ರಕೃತಿ ಇದನ್ನು ತತ್ಕಾಲಕ್ಕೆ ಭರಿಸಿದರೂ ಹೆಚ್ಚು ಸಮಯ ಇದನ್ನು ಪೋಷಿಸಲಾರದು.

ಈ ಚರ್ಚೆಯ ಹಿನ್ನಲೆಯಲ್ಲಿ ನಾವು ಬಯಸುವ ವಿವೇಕ ಶಿಕ್ಷಣದ ವ್ಯಾಪ್ತಿಗೆ ಬರಲಾರದೇನೋ ಎಂದು ಮೇಲ್ನೋಟಕ್ಕೆ ಅನಿಸುತ್ತದೆ. ಇದಕ್ಕೆ ಇರಬಹುದಾದ ಒಂದೇ ಒಂದು ಕಾರಣ ಎಂದರೆ ನಮ್ಮ ಇಂದಿನ ಪರಿಸರ ಈ ವಿವೇಕದ ವಿರುದ್ಧ ಸೆಟೆದು ನಿಂತಿದೆ. ವಿವೇಕ ನಮ್ಮ ಬಹಳಷ್ಟು ಪೋಷಕರ ನಿರೀಕ್ಷೆಯಾಗಿಲ್ಲ. ಸಮಾಜದ ಸರಾಸರಿ ಬೇಡಿಕೆಗೆ ಪೂರಕವಾದ ಶಿಕ್ಷಣವನ್ನು ನಮ್ಮ ಶಿಕ್ಷಣ ಮಾರುಕಟ್ಟೆ ಮಕ್ಕಳಿಗೆ ಒದಗಿಸುತ್ತಿದೆ. ಪಡೆಯುವವರು-ಕೊಡುವವರು ಒಂದಾದ ಮೇಲೆ ಈ ನಡುವೆ ಯಾರಿಗೂ ಬೇಡದ ವಿವೇಕವನ್ನು ಶಿಕ್ಷಣದ ಭಾಗವಾಗಿ ತರುವುದಾದರೂ ಹೇಗೆ? ಪ್ರಶ್ನೆ ಏನೆಂದರೆ ಕೆಟ್ಟ ಮೇಲೆ ಬುದ್ಧಿ ಬಂದು ಆಗ ವಿವೇಕಕ್ಕೆ ಬೇಡಿಕೆ ಬಂದಾಗ ನಾವು ಕಾರ್ಯ ಪ್ರವೃತ್ತರಾಗಬೇಕೋ ಅಥವಾ ಈಗಲೇ ಇಂತಹ ವಿವೇಕವನ್ನು ಪ್ರಯತ್ನಪೂರ್ವಕವಾಗಿ ಅಳವಡಿಸಲು ನೋಡಬೇಕೋ? ಒಂದು ವೇಳೆ ನಮ್ಮ ಪರಿಸರ, ಸಮಾಜ ಸರಿಪಡಿಸಲಾಗದಷ್ಟು ಕೆಟ್ಟುಹೋದರೆ ಆಗ ವಿವೇಕವಂತರಾಗುವುದರಿಂದ ಏನು ಪ್ರಯೋಜನ? ಅಲ್ಲದೆ ಡೆಮಾಕ್ರಸಿಯಲ್ಲಿ ನನಗೆ ತಿಳಿದಿರುವುದೇ ವಿವೇಕ ಎಂದು ಸಾಧಿಸುವುದಾದರೂ ಹೇಗೆ?

ಈ ಕಾರಣಗಳಿಂದ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಶಿಕ್ಷಣದ ಪಾತ್ರ ದೊಡ್ಡದಾಗುತ್ತ ಹೋಗುತ್ತದೆ. ಶಿಕ್ಷಣ ಮಾಡಬಹುದಾದ ಒಂದೇ ಕೆಲಸವೆಂದರೆ ಅದು ಎಲ್ಲ ಬಗೆಯ ಮಿಥ್ಯಾಕಲ್ಪನೆಗಳ ಅಸಹಜತೆಯನ್ನು ವಿಚಾರಗಳ ಆಧಾರದ ಮೇಲೆ ಬಯಲು ಮಾಡುವುದು. ಅಂಕಿಅಂಶಗಳ ಸಹಿತ ಆಧಾರಗಳ ಸಹಿತ ಪರಿಸರ ಕುರಿತಾದ ಅಥವಾ ಆರ್ಥಿಕ ಅಸಮಾನತೆಯ ಕುರಿತಾದ ಪರಿಣಾಮಗಳನ್ನು ಮಕ್ಕಳ ಹಂತದಿಂದಲೇ ಮನವರಿಕೆ ಮಾಡಿಕೊಡುವುದು. ಜನಸಂಖ್ಯೆ, ಪರಿಸರನಾಶದ ಕುರಿತು ಈಗಾಗಲೇ ನಮ್ಮ ಕೈಯಲ್ಲಿರುವ ಅಂಕಿಅಂಶಗಳ ಕುರಿತು ಮಕ್ಕಳ ನಡುವೆ ಚರ್ಚೆ ನಡೆಯಬೇಕು. ಅವರೂ ಈ ವಿಷಯಗಳಲ್ಲಿ ಸ್ವತಂತ್ರ ಅಭಿಪ್ರಾಯಗಳನ್ನು ತಳೆಯುವಂತಾಗಬೇಕು. ಮುಂದಿನ ಜೀವನದ ಎಡರು ತೊಡರುಗಳನ್ನು ಮುಂದಿನ ಪೀಳಿಗೆಯೇ ಎದುರಿಸಬೇಕಗಿರುವುದರಿಂದ ಇದಕ್ಕೆ ಅಗತ್ಯವಾದ ಜವಾಬ್ದಾರಿಯನ್ನು ಅವರೇ ಕಂಡುಕೊಳ್ಳುವಂತಹ ಶಿಕ್ಷಣ ಅವರಿಗೆ ದೊರೆಯಬೇಕು. ತಂತ್ರಜ್ಞಾನ ಪ್ರಧಾನವಾದ, ತಂತ್ರಜೀವನದ ಮಿಥ್ಯೆ ಬಯಲಾಗುವ ಶಿಕ್ಷಣ ನಮ್ಮ ಮಕ್ಕಳಿಗೆ ಬೇಕು.

## ಸಮದರ್ಶನವೇ ಪಾಂಡಿತ್ಯ

ನಿಜವಾದ ಭೂಮಕಲ್ಪನೆ ಯಾವಾಗಲೂ ಸಮದರ್ಶನಕ್ಕೆ ಸಂಬಂಧಪಟ್ಟಿರುತ್ತದೆ. ಪಂಚೀಕರಣ ಗ್ರಂಥ ಹೇಳುತ್ತದೆ– "ಸಮದರ್ಶನವೇ ಪಾಂಡಿತ್ಯ" ಎಂದು. ಬಸವಣ್ಣನವರ ಇಡೀ ಜೀವನಸಂದೇಶವೇ ಈ ಸಮದರ್ಶನ. ಹಾಗಾಗಿ ಅವರು ಉಳಿದೆಲ್ಲ ವಚನಕಾರರಿಗಿಂತಲೂ ವಿಶಿಷ್ಟವಾಗಿ ಎಲ್ಲ ಕಾಲದಲ್ಲೂ ಎಲ್ಲರಿಗೂ ಸಲ್ಲುವಂತೆ ಕಂಡುಬರುತ್ತಾರೆ. ಮನಸ್ಸು ಪಕ್ವವಾಗಿರುವ ಕುರುಹು ಸಮದರ್ಶನ. ಅದು ಈ ಸ್ಥಿತಿಯನ್ನು ಸಾಧಿಸಿದೆ ಎಂದಾದರೆ ಅದರ ದೃಷ್ಟಿಯಲ್ಲಿ ಪಂಡಿತ–ಪಾಮರ, ರಾಜ–ಶ್ರೀಸಾಮಾನ್ಯ ಎಲ್ಲರೂ ಒಂದೇ ಆಗಿ ಕಾಣುತ್ತಾರೆ. ಇದು ನಿಜವಾದ ಭೂಮಚಿಂತನೆ; ಮನಸ್ಸು ಪಕ್ವವಾಗುವ ಬಗೆ. ಆದರೆ ಹಣವನ್ನಷ್ಟೇ ಕೇಂದ್ರವಾಗಿಟ್ಟುಕೊಂಡಾಗ ಹುಟ್ಟುವ ಹಿರಿತನ ತನ್ನದೇ ಸಿದ್ಧಾಂತಗಳ ಆಧಾರಗಳ ಮೇಲೆ ತಾರತಮ್ಯವನ್ನು ಬಯಸುತ್ತದೆ. ಇದೇ ಪುರೋಹಿತಶಾಹಿ ಮನಸ್ಸು. ಇದು ಪ್ರಪಂಚದಾದ್ಯಂತ ನಡೆಯುತ್ತಿರುವ ವಿದ್ಯಮಾನ. ದುರ್ಬಲರನ್ನು ಅಂಚಿಗೆ ತಳ್ಳುವ ಕ್ರಿಯೆ ಅಮೆರಿಕಾ, ಜಪಾನ್, ಫ್ರಾನ್ಸ್ ನಂತಹ ದೇಶಗಳಲ್ಲೂ ನಡೆಯುತ್ತಿದೆ. ಅಮೆರಿಕಾ ಫ್ರಾನ್ಸ್‌ಗಳಲ್ಲಿ ಆರ್ಥಿಕವಾಗಿ ದುರ್ಬಲರಾಗಿರುವ ವೃದ್ಧರ ಪರಿಸ್ಥಿತಿ ಶೋಚನೀಯವಾಗಿದೆ. ಭಾರತ ಮೂಲದ ಪ್ರಸಿದ್ಧ ವಿಜ್ಞಾನಿಯೊಬ್ಬರು ಅಮೆರಿಕಾದಲ್ಲಿ ನೆಲೆಸಿದ್ದಾರೆ. ಆದರೆ ಇಂದು ಅವರು ಅಮೆರಿಕಾದ ವೃದ್ಧಾಶ್ರಮವೊಂದರಲ್ಲಿ ಆಶ್ರಯ ಪಡೆದಿದ್ದಾರಂತೆ. ಇದಕ್ಕೆ ಕಾರಣ ಏನೇ ಇದ್ದರೂ ಒಂದು ಸಮಾಜ ಹಣವನ್ನಷ್ಟೇ ತನ್ನ ಕೇಂದ್ರವಾಗಿಟ್ಟುಕೊಂಡಾಗ ಮನುಷ್ಯ ಸಂಬಂಧಗಳು ಶಿಥಿಲವಾಗುವ ಬಗೆಯನ್ನು ಸೂಚಿಸುತ್ತದೆ. ಈ ಸಂದರ್ಭದಲ್ಲಿ ಮದರ್ ತೆರೇಸಾ ಲಾಸ್‌ಏಂಜಲೀಸ್‌ಗೆ ಭೇಟಿಕೊಟ್ಟ ಸಂದರ್ಭದಲ್ಲಿ ನಡೆದ ಮಾತುಕತೆ ನೆನಪಿಗೆ ಬರುತ್ತದೆ. ಲಾಸ್ ಏಂಜಲೀಸ್‌ನ ಜನ ಹೇಳುತ್ತಾರೆ "ಮದರ್ ನಮ್ಮದು ಪ್ರಪಂಚದಲ್ಲೇ ಅತ್ಯಂತ ಶ್ರೀಮಂತ ರಾಜ್ಯ. ಇದೇನೂ ಕಲ್ಕತ್ತಾ ಅಲ್ಲ. ಇಲ್ಲಿ ನೀವು ಏನನ್ನು ತಾನೆ ಕೊಡಲು ಸಾಧ್ಯ? " ಆಗ ಮದರ್ ತೆರೇಸಾ ಹೇಳಿದರಂತೆ "ಇಲ್ಲೂ ಕೂಡ ಬಡತನವಿದೆ! ಪ್ರೀತಿಯ ಬಡತನ, ಮನುಷ್ಯ ಸಂಬಂಧಗಳ ಬಡತನ, ಮನುಷ್ಯತ್ವದ ಬಡತನ. ಈ ಬಡತನಗಳು ಹಣದ ಬಡತನಕ್ಕಿಂತ ದೊಡ್ಡ ಬಡತನಗಳಲ್ಲವೇ?" ಬಹುಶಃ ಲಾಸ್ ಏಂಜಲೀಸ್‌ನ ಜನರಿಗೆ ಈ ಮಾತುಗಳನ್ನು ನಿರಾಕರಿಸಲಾಗಲಿಲ್ಲ ಎಂದು ಕಾಣುತ್ತದೆ. ಆರ್ಥಿಕ ಸಾರ್ವಭೌಮತ್ವವು ಪ್ರೀತಿಯ ಅಥವ ಸಂಬಂಧಗಳ ಬಡತನವನ್ನು ಕೇಳದೆಯೇ ದಯಪಾಲಿಸುತ್ತದೆ. ಇಲ್ಲದಿದ್ದರೆ ಶ್ರೇಷ್ಠ ವಿಜ್ಞಾನಿಯೊಬ್ಬ ತನ್ನ ಕೊನೆಯ ದಿನಗಳನ್ನು ವೃದ್ಧಾಶ್ರಮದಲ್ಲಿ ಕಳೆಯಬೇಕೇಕೆ?

ಭೂಮಚಿಂತನೆ ಮನುಷ್ಯ ಸಂಬಂಧಗಳನ್ನು ಕಟ್ಟಿಕೊಡುತ್ತದೆ. ಭೂಮಚಿಂತನೆಗೆ ಒಂದು ವಾತಾವರಣ ಬೇಕು; ಕೆಲವು ಜೀವಂತಮಾದರಿಗಳಾದರೂ ಬೇಕು. ಶಿಕ್ಷಣದ ಮೂಲಕ ಇಂತಹ ಒಂದು ವಾತಾವರಣವನ್ನು ಸೃಷ್ಟಿಸಲಾಗದಿದ್ದರೆ ಕ್ರಮೇಣ ಮನುಕುಲ ದುರಂತಗಳ ಹಾದಿಯಲ್ಲಿ ಮುನ್ನಡೆಯುವುದು ಖಚಿತ.

**ಅತಿಯಾದ ಯಾಂತ್ರೀಕರಣ ಮತ್ತು ಕಂಪ್ಯೂಟರ್**

ಅತಿಯಾದ ಯಾಂತ್ರೀಕರಣವನ್ನು ವಿರೋಧಿಸುವ ನಾವು ಕಂಪ್ಯೂಟರ್‌ಗಳನ್ನು ಸ್ವಲ್ಪವೂ ಅವಲಂಬಿಸಿಲ್ಲವೇ? ಈ ಪ್ರಶ್ನೆಯನ್ನು ನಾವು ಸರಿಯಾಗಿ ಉತ್ತರಿಸಲೇಬೇಕು. ಇಂದು ಕಂಪ್ಯೂಟರ್‌ಗಳು ಅನಗತ್ಯ ಎಂದು ಹೇಳುವ ಸ್ಥಿತಿಯಲ್ಲಿ ನಾವಿಲ್ಲ. ಜನಸಂಖ್ಯೆ ಹೆಚ್ಚುತ್ತಿರುವ ಈ ಕಾಲದಲ್ಲಿ, ಅಪರಾಧಗಳು ಹದ್ದುಮೀರುತ್ತಿವೆ, ಸಮಾಜಘಾತಕರು ಹೆಚ್ಚುತ್ತಿದ್ದಾರೆ. ಇಂತಹ ಪರಿಸ್ಥಿಯಲ್ಲಿ ಅಪರಾಧಗಳನ್ನು ತಡೆಗಟ್ಟಲು ಕಂಪ್ಯೂಟರ್ ತಂತ್ರಜ್ಞಾನ ಉಪಯುಕ್ತವಾಗಿದೆ. ಜನಸಂಖ್ಯೆ ಕಡಿಮೆಯಿದ್ದ ಸಂದರ್ಭದಲ್ಲಿ ಈ ಸಮಾಜಘಾತಕರು ಸುಲಭವಾಗಿ ಸಿಕ್ಕಿಕೊಳ್ಳಬಹುದೆಂಬ ಹೆದರಿಕೆಯಿಂದಾಗಿ ಕನಿಷ್ಠ ಪ್ರಮಾಣದಲ್ಲಿರುತ್ತಾರೆ. ಯಾವಾಗ ಬೃಹತ್ ಜನಸಾಗರವೇ ಉಂಟಾಗುವುದೋ ಆಗ ಸಮಾಜಘಾತಕರ ಸಂಖ್ಯೆಯೂ ಹೆಚ್ಚಾಗುತ್ತದೆ. ಕಡಿಮೆ ಜನಸಂಖ್ಯೆ ಇದ್ದಾಗ ಶೇಕಡ ಹತ್ತು ಸಮಾಜಘಾತಕರಿದ್ದಾರೆ ಎಂದು ಭಾವಿಸುವುದಾದರೆ ಜನಸಂಖ್ಯೆ ಅಂಕೆ ಮೀರಿ ಬೆಳೆದಾಗ ಶೇಕಡ ಇಪ್ಪತ್ತು ಸಮಾಜಘಾತಕರು ತಯಾರಾಗುತ್ತಾರೆ ಎಂದು ನಾವು ಸುಲಭವಾಗಿ ಊಹಿಸಬಹುದು. ಹಾಗೆಯೇ ಕಡಿಮೆ ಜನಸಂಖ್ಯೆ ಇದ್ದಾಗ ಶೇಕಡ ಹತ್ತು ಆದರ್ಶಪ್ರಾಯ ವ್ಯಕ್ತಿಗಳಿದ್ದಾರೆ ಎನ್ನುವುದಾದರೆ ಜನಸಂಖ್ಯೆ ವಿಪರೀತ ಹೆಚ್ಚಿದಾಗ ಇಂತಹ ಆದರ್ಶಪ್ರಾಯ ವ್ಯಕ್ತಿಗಳ ಸಂಖ್ಯೆ ಶೇಕಡ ಐದಕ್ಕೆ ಇಳಿಯುತ್ತದೆ ಎಂದು ಊಹಿಸಬಹುದು. ಈ ಅನುಭವದಿಂದಾಗಿ ಕಾಲ ಕೆಟ್ಟು ಹೋಯಿತು ಎಂಬಂತಹ ಉದ್ಗಾರಗಳು ಹುಟ್ಟುತ್ತವೆ. ಇದಕ್ಕೆ ಮುಖ್ಯ ಕಾರಣವೆಂದರೆ ಜನಸಂಖ್ಯೆ ಕಡಿಮೆ ಇದ್ದಾಗ ವ್ಯಕ್ತಿಗಳ ಗುರುತನ್ನು ಸಮೂಹ ಮನಸ್ಸು ನೆನಪಿಟ್ಟುಕೊಳ್ಳುತ್ತದೆ. ಹಾಗಾಗಿ ದುಷ್ಟ ಕೆಲಸಗಳನ್ನು ಮಾಡಲು ಎಲ್ಲರೂ ಹೆದರುತ್ತಾರೆ. ಪರಿಣಾಮವಾಗಿ ಸಮಾಜಘಾತಕರ ಸಂಖ್ಯೆ ಮಿತವಾಗಿರುತ್ತದೆ. ದೊಡ್ಡ ಜನಸಾಗರದಲ್ಲಿ ಪರಕೀಯತಾ ಭಾವನೆ (Alienation) ಹುಟ್ಟುತ್ತದೆ. ಜೊತೆಗೆ ದುಷ್ಕರ್ಮಿಯೊಬ್ಬ ತನ್ನ ಗುರುತು ಸಿಗದಂತೆ ಸುಲಭವಾಗಿ ತಪ್ಪಿಸಿಕೊಳ್ಳಲು ಸಾಧ್ಯವಿರುವುದರಿಂದ ದುಷ್ಕೃತ್ಯದಲ್ಲಿ ತೊಡಗುವವರ ಸಂಖ್ಯೆಯೂ ಹೆಚ್ಚಾಗುತ್ತದೆ. ಇಂತಹ ಸಂದರ್ಭದಲ್ಲಿ ಕಂಪ್ಯೂಟರ್‌ನಂತಹ ತಂತ್ರಜ್ಞಾನವನ್ನು ಬಳಸಿ ಪ್ರತಿಯೊಬ್ಬರ ಗುರುತು ಇಟ್ಟುಕೊಳ್ಳುವುದಾದರೆ ದುಷ್ಟಶಕ್ತಿಗಳನ್ನು ದಮನ ಮಾಡಬಹುದು. ಇದು ತಂತ್ರಜ್ಞಾನದಿಂದ ಸಾಧ್ಯವಾಗುವ ಅದ್ಭುತ. ಭ್ರಷ್ಟಾಚಾರ ನಿಯಂತ್ರಣದಲ್ಲಿ ಬಹುಶಃ ಕಂಪ್ಯೂಟರ್ ಸಂಬಂಧಿ ತಾಂತ್ರಿಕತೆಗಳು ಮನುಷ್ಯ ಸುಳ್ಳು ಹೇಳಿ ನುಣುಚಿಕೊಳ್ಳದಂತೆ ತಡೆಯುವಲ್ಲಿ ಯಶಸ್ವಿಯಾಗಿವೆ.

ರೈಲ್ವೆ ರಿಸರ್ವೇಷನ್‌ನಂತಹ ಒಂದು ಕ್ಲಿಷ್ಟ ಪರಿಸ್ಥಿತಿಯನ್ನು ನಿರ್ವಹಿಸಲು ಕಂಪ್ಯೂಟರ್ ಇಲ್ಲದೆ ಸಾಧ್ಯವೇ ಇಲ್ಲ. ಇವು ಕೆಲವು ಉದಾಹರಣೆಗಳಷ್ಟೆ. ಇಂತಹ ಹಲವಾರು ಕಾರಣಗಳಿಗಾಗಿ ನಾವು ಕಂಪ್ಯೂಟರ್‌ಗಳನ್ನು ಸಾರಾಸಗಟಾಗಿ ತಿರಸ್ಕರಿಸಲು ಸಾಧ್ಯವೇ ಇಲ್ಲ. ಆದರೆ ಕಂಪ್ಯೂಟರ್‌ಗಳನ್ನು ಹೀಗೆ ಅವಲಂಬಿಸಿದ್ದೇವೆ ಎಂದ ಮಾತ್ರಕ್ಕೆ ನಾವು

ಇಂದು ಯಾವುದೆಲ್ಲಕ್ಕೂ ಕಂಪ್ಯೂಟರ್‌ಗಳನ್ನು ಬಳಸುತ್ತಿದ್ದೇವೆಯೋ ಅವೆಲ್ಲವೂ ಸಮರ್ಥನೀಯ ಎಂದೂ ಭಾವಿಸಲು ಸಾಧ್ಯವಿಲ್ಲ. ಅಥವಾ ಈ ಬಳಕೆ ವಿವೇಕಯುತವಾದದ್ದು ಎಂದೂ ಭಾವಿಸಲಾಗುವುದಿಲ್ಲ. ಕಂಪ್ಯೂಟರ್‌ಗಳು ಮೊದಲನೆಯದಾಗಿ ಬದುಕಿನ ಸಹಜಶೀಲತೆಯನ್ನು ಮೊಟಕುಗೊಳಿಸುತ್ತವೆ. ಸಹಜವಾಗಿ ಮಾಡಬಹುದಾದದ್ದನ್ನು ಕಂಪ್ಯೂಟರ್ ಇದೆಯಲ್ಲ ಎಂದು ಕಂಪ್ಯೂಟರ್ ಮುಖಾಂತರ ಮಾಡುತ್ತೇವೆ. ಅತಿಥಿಗಳು ಬಂದಾಗ ಯಾವ ಅಡಿಗೆ ಮಾಡಬಹುದು ಎಂದು ಕಂಪ್ಯೂಟರ್‌ನಲ್ಲಿ ಪಟ್ಟಿ ತಯಾರು ಮಾಡಿಟ್ಟುಕೊಳ್ಳುವುದನ್ನು ಇಂದು ಅನೇಕರು ಸಮರ್ಥಿಸಬಹುದು. ಚಿಕ್ಕಪುಟ್ಟ ಕೂಡುವ ಕಳೆಯುವ ಲೆಕ್ಕಗಳಿಗೂ ಕಂಪ್ಯೂಟರ್ ಬಳಕೆ ಮಾಡುವುದು ಒಂದು ಆಧುನಿಕ ಕಾಯಿಲೆ ಎನ್ನಬಹುದೇನೊ?

**ಬೀಜ ಮೊಳಕೆಗೂ ಕಂಪ್ಯೂಟರ್!**

ಒಮ್ಮೆ ಒಂದು ಶಾಲೆಗೆ ಹೋಗಿದ್ದೆ. ಅಲ್ಲಿಯ ಅಧ್ಯಾಪಕರು ಕಂಪ್ಯೂಟರ್ ಬಳಸುತ್ತಿದ್ದ ರೀತಿಯನ್ನು ನೋಡಿ ನಗು ಬಂತು. ಅವರು ಯಾವುದೋ ಸಾಫ್ಟ್‌ವೇರ್ ಒಂದನ್ನು ಇತ್ತೀಚೆಗೆ ಪಡೆದಿದ್ದರು. ಒಂದು ಬೀಜವನ್ನು ಗಾಜಿನ ಪಾತ್ರೆಯಲ್ಲಿಟ್ಟು ನೀರು ಹಾಕಿದರೆ ಆ ಬೀಜ ಹೇಗೆ ಮೊಳಕೆಯೊಡೆದು ಬೇರು ಮತ್ತು ಕಾಂಡಗಳನ್ನು ಬೆಳೆಸಿಕೊಳ್ಳುತ್ತದೆ ಎಂಬ ಅನಿಮೇಷನ್ ಚಿತ್ರವನ್ನು ಕಂಪ್ಯೂಟರ್ ಮೂಲಕ ತೋರಿಸುತ್ತಿದ್ದರು. ಈ ಚಿತ್ರ ತೋರಿಸುವುದರಿಂದ ಮಗುವಿನ ಕಲಿಕೆ ಹೆಚ್ಚಿಗೆ ಆಗುತ್ತದೆ ಎಂಬುದು ಅವರ ವಾದ. ನಾನು ಅವರನ್ನು ಕೇಳಿದೆ – 'ನೀವು ಬೀಜ ಮೊಳಕೆ ಬರುವುದನ್ನು ಅನಿಮೇಷನ್ ಮೂಲಕ ಏಕೆ ತೋರಿಸುತ್ತಿದ್ದೀರಿ? ಒಂದು ಹುರುಳಿಕಾಯಿಯ ಬೀಜವನ್ನು ತಂದು ನೀರಿನಲ್ಲಿ ನೆನೆಸಿದರೆ ನಿಜವಾಗಿಯೂ ಬೀಜ ಮೊಳಕೆಯೊಡೆಯುವುದನ್ನು ನೋಡಬಹುದಲ್ಲವೇ?' ಆದರೆ ಆ ಸರ್ಕಾರಿ ಶಾಲೆಯ ಅಧ್ಯಾಪಕರು ಇದಕ್ಕೆ ತಮ್ಮದೇ ಸಮರ್ಥನೆ ನೀಡಿದರು. ಅವರ ಪ್ರಕಾರ ಕಂಪ್ಯೂಟರ್ ಕೈಯಲ್ಲಿರುವಾಗ ಬೀಜಕ್ಕೆ ನೀರು ಹಾಕಿ ಕಾಯಬೇಕು ಏಕೆ? ಕಂಪ್ಯೂಟರ್‌ನಲ್ಲಿ ತಕ್ಷಣ ಮೊಳಕೆ ಬರುವುದನ್ನು, ತಕ್ಷಣ ಬೇರು ಕಾಂಡಗಳು ಬೆಳೆಯುವುದನ್ನು ನೋಡಬಹುದಲ್ಲ! ಈ ಅಧ್ಯಾಪಕರಿಗೆ ಸಹಜ ಕ್ರಿಯೆಯನ್ನು ಗಮನಿಸುವುದು ಕೀಳು ಎಂಬ ಭಾವನೆಯಿದ್ದಂತೆ ಕಂಡಿತು. ಅಲ್ಲದೆ ಮಕ್ಕಳು ಹೀಗೆ ಬೀಜ ಮೊಳಕೆ ಬರುವುದನ್ನು ಮನೆಗಳಲ್ಲೂ ನೋಡಿರುತ್ತಾರೆ. ಅದರಲ್ಲಿ ಏನು ತಾನೆ ವಿಶೇಷವಿದೆ ಎನ್ನುವಂತೆ ಮಾತನಾಡಿದರು. ಇಲ್ಲಿ ಪ್ರಶ್ನೆ ಏನೆಂದರೆ ಒಂದು ವೇಳೆ ಅನಿಮೇಷನ್ ಚಿತ್ರ ಇಲ್ಲದಿದ್ದರೆ ಬಹುಶಃ ಈ ಅಧ್ಯಾಪಕರು ನಿಜವಾದ ಬೀಜ ಮೊಳಕೆ ಬರುವುದನ್ನೇ ತೋರಿಸುತ್ತಿದ್ದರೋ ಏನೋ. ಅಥವಾ ಗೋಡೆಯ ಮೇಲೆ ಚಿತ್ರ ಬರೆದು ತೋರಿಸಿಬಿಡುತ್ತಿದ್ದರೋ ಏನೋ. ಕಂಪ್ಯೂಟರ್ ತಂತ್ರಜ್ಞಾನದ ಚಮತ್ಕಾರಗಳು ಈ ಅಧ್ಯಾಪಕರನ್ನು ಬಹಳ ಬೇಗ ಮುಗ್ಧರನ್ನಾಗಿ ಮಾಡಿದ್ದವು.

ಅಲ್ಲದೆ ಸರ್ಕಾರಿ ಶಾಲೆಯೊಂದಕ್ಕೆ ಉಚಿತವಾಗಿ ಒಂದು ಕಂಪ್ಯೂಟರನ್ನು ದೊರಕಿಸಿಕೊಂಡಿರುವಾಗ ಅದನ್ನು ಸಮರ್ಥವಾಗಿ ಬಳಸಿ ಉಳಿಸಿಕೊಳ್ಳಬೇಕಲ್ಲವೆ? ಹಾಗಾಗಿ ಪರಿಣತನೊಬ್ಬ ಸಿದ್ಧಪಡಿಸಿದ 'ಬೀಜ ಮೊಳಕೆ ಅನಿಮೇಷನ್' ಚಿತ್ರವನ್ನು ಈ ಅಧ್ಯಾಪಕರು ಬಳಸುತ್ತಿದ್ದರು.

ಇಲ್ಲಿ ಮತ್ತೊಂದು ಅಂಶವನ್ನು ನಾವು ಗಮನಿಸಬೇಕು. ಏನೆಂದರೆ ಕೆಲವು ಸಜೀವ ಕ್ರಿಯೆಗಳನ್ನು ನಾವು ನೇರವಾಗಿ ನೋಡಲಾಗುವುದಿಲ್ಲ. ಉದಾಹರಣೆಗೆ ರಕ್ತ ಪರಿಚಲನೆ, ಹೃದಯ ಕೆಲಸ ಮಾಡುವ ಬಗೆ ಅಥವಾ ಶ್ವಾಸಕೋಶಗಳು ಕೆಲಸ ಮಾಡುವ ಬಗೆ. ಇಂತಹ ಸಂದರ್ಭದಲ್ಲಿ ಕಂಪ್ಯೂಟರ್ ಅನಿಮೇಷನ್ ಮೂಲಕ ಈ ಕ್ರಿಯೆಗಳನ್ನು ತೋರಿಸಲೇಬೇಕಾಗುತ್ತವೆ. ಇಂತಹ ಅನಿಮೇಷನ್ ಚಿತ್ರಗಳು ಮಕ್ಕಳ ಕಲಿಕೆಯನ್ನು ಖಂಡಿತವಾಗಿಯೂ ಹೆಚ್ಚಿಸುತ್ತವೆ. ಹಾಗಾಗಿ ಅಧ್ಯಾಪಕರು ಯಾವುದಕ್ಕಾಗಿ ಕಂಪ್ಯೂಟರ್ ಬಳಸಬೇಕು, ಯಾವ ಸಂದರ್ಭದಲ್ಲಿ ಕ್ಯಾಲ್ಕುಲೇಟರ್‌ಗಳನ್ನು ಬಳಸಬೇಕು ಇತ್ಯಾದಿಯಾಗಿ ತಮ್ಮದೇ ನಿಷ್ಕರ್ಷೆಯನ್ನು ಪಡೆಯುವಷ್ಟು ಸ್ವತಂತ್ರಾಲೋಚನೆ ಉಳ್ಳವರಾಗಿರಬೇಕು. ಎಂದರೆ ಅವರಿಗೆ ವಿವೇಕ ಇರಬೇಕು.

**ಒಬಾಮಾನ ಶಹಬಾಶ್‌ಗಿರಿ**

ಬರಾಕ್ ಒಬಾಮಾ ಅಮೆರಿಕಾದ ಯುವಕರಿಗೆ 'ನೀವೆಲ್ಲ ಬೆಂಗಳೂರಿನ ಯುವಕರಂತಾಗಬೇಕು' ಎಂದು ಹೇಳಿದನಂತೆ. ಇದು ನಮ್ಮ ಬೌದ್ಧಿಕ ವಲಯದಲ್ಲಿ ಸಂಚಲನವನ್ನುಂಟುಮಾಡಿತು. ನಮ್ಮ ಬೆಂಗಳೂರಿನ ಸಾಫ್ಟ್‌ವೇರ್ ಜನಗಳನ್ನು ಒಬಾಮಾ ಹೊಗಳುವುದರಲ್ಲಿ ಮೆಚ್ಚುಗೆಗಿಂತ ಅಮೆರಿಕಾಕ್ಕೆ ಆರ್ಥಿಕ ಲಾಭವೇ ಪ್ರಧಾನವಾಗಿದೆ. ಕಡಿಮೆ ಬೆಲೆಗೆ ಅದ್ಭುತವಾದ ಮೆದುಳಿನಶಕ್ತಿಯನ್ನು ಕೊಳ್ಳುವ ಅವಕಾಶವನ್ನು ಕಾಯ್ದುಕೊಳ್ಳಲು ಕಾಸೂ ಖರ್ಚಿಲ್ಲದೆ ಹೊಗಳಿದರೆ ಸಾಕಲ್ಲವೆ? ಹೀಗೆ ಆರ್ಥಿಕ ಲಾಭವಾಗುತ್ತಿರುವಾಗ ಯಾರು ತಾನೆ ಹೊಗಳುವುದಿಲ್ಲ? ಆದರೆ ಒಂದು ವಿಷಯ ಗಮನಿಸಿ– ಬರಾಕ್ ಒಬಾಮಾನಿಂದ ಶಹಬಾಸ್‌ಗಿರಿ ಪಡೆಯುವ ನಮ್ಮ ಭಾರತೀಯ ಸಾಫ್ಟ್‌ವೇರ್ ಕಂಪನಿಯ ಜಾಣಾಕ್ಷರೆಲ್ಲ ತಾವು ಮಾಡುತ್ತಿರುವ ಸಾಫ್ಟ್‌ವೇರ್ ಬೇರೆ ದೇಶದ ಜನರ ಜೀವನದ ಗುಣಮಟ್ಟವನ್ನು ಹೆಚ್ಚಿಸಲು ಹೇಗೆ ಕೆಲಸ ಮಾಡುತ್ತಿದೆ ಎಂದು ತಮ್ಮನ್ನೇ ತಾವು ಪ್ರಶ್ನಿಸಿಕೊಳ್ಳುತ್ತಾರೆಯೆ? ದುಡ್ಡು ಕೊಡುವ 'ಗ್ರಾಹಕ ದೇವರುಗಳು' ಕೇಳಿದ ಸಾಫ್ಟ್‌ವೇರ್ ಮಾಡಿಕೊಡುವುದಷ್ಟೇ ಇವರ ಕೆಲಸ. ಇವರು ಮಾಡಿಕೊಡುವ ಸಾಫ್ಟ್‌ವೇರ್ ಬಳಸಿ ಆ ಪಾಶ್ಚಾತ್ಯರು ತಮಗೆ ಹೊಸ ಅನುಕೂಲತೆಗಳು ದೊರೆಯುತ್ತಿವೆ ಎಂದು ಭ್ರಮಿಸುತ್ತಿರಬಹುದು. ಅಥವಾ ಯಥೇಚ್ಛವಾಗಿ ಹಣ ಇದೆ. ಅದ್ದರಿಂದ ಮತ್ತೂ ಹೆಚ್ಚು ಹೆಚ್ಚು ಅನುಕೂಲಗಳನ್ನು ಪಡೆಯುವ ಭ್ರಮೆಯಿಂದ ಕಾಸು ಬಿಸಾಡಿ ಸಾಫ್ಟ್‌ವೇರ್ ಪಡೆಯುತ್ತಿರಬಹುದು. ಇವರಿಗಾಗಿ ಕೆಲಸ ಮಾಡುವ ನಮ್ಮ ಜನ ಇವರು ಹಣ ಕೊಡುತ್ತಾರೆ ಎಂಬ ಒಂದೇ ಕಾರಣಕ್ಕಾಗಿ

ಅವರು ಕೇಳಿದ್ದನ್ನೆಲ್ಲಾ ಮಾಡಿಕೊಡುವ ಪಾಡು ಪಡುವುದೇಕೆ? ತಮ್ಮ ಅಮೂಲ್ಯ ಕಾಲವನ್ನು ಹರಣ ಮಾಡುವುದೇತಕ್ಕೆ ? ತಮ್ಮದೇ ದೇಶದ ಜನಗಳ ಹಸಿವು ನೀಗಿಸಲು ಇವರಿಗೇಕೆ ಮನಸ್ಸು ಬರುತ್ತಿಲ್ಲ? ಅಥವಾ ನಮ್ಮ ದೇಶದ ವ್ಯವಸ್ಥೆ ಸರಿಪಡಿಸಲು ಇವರು ಸ್ವಯಂಸ್ಫೂರ್ತಿಯಿಂದ ಏಕೆ ಕಾರ್ಯಪ್ರವೃತ್ತರಾಗುತ್ತಿಲ್ಲ? ಅನಗತ್ಯ ಉತ್ಪಾದನೆಗಳು ಜೀವನದ ಗುಣಮಟ್ಟವನ್ನು ಹೇಗೆ ತಾನೆ ಹೆಚ್ಚಿಸುತ್ತವೆ? ಇವು ಮನಸ್ಸನ್ನು ·ಮತ್ತಷ್ಟು ರೋಗಗ್ರಸ್ತವನ್ನಾಗಿಡುತ್ತವೆ ಅಷ್ಟೆ..

ಅನಗತ್ಯ ಸಾಫ್ಟವೇರ್‌ಗಳು ಬದುಕಿನ ಸಹಜಶೀಲತೆಯನ್ನು ಕಸಿಯುವ ಪಾಪದ ಕೆಲಸ. ಈ ಸಾಫ್ಟವೇರ್‌ಗಳು ಶಕ್ತಿಯ ದುಂದುವೆಚ್ಚಕ್ಕೂ ಕಾರಣವಾಗುತ್ತದೆ. ಗ್ರಾಹಕರ ಜೀವನಮಟ್ಟ ಹೆಚ್ಚಿಸುವುದು ಎಂದರೆ ಏನು ಅರ್ಥ? ಇಂದು ಅಮೇರಿಕಾ ಯೂರೋಪ್ ದೇಶಗಳು ತಾವು ಅತಿ ಹೆಚ್ಚು ಬೆಳೆದಿರುವುದನ್ನು ಅರಿತು ಇನ್ನು ಬೆಳೆಯುವುದನ್ನು ನಿಲ್ಲಿಸಬೇಕು ಎಂದು ಚಿಂತಿಸುವ ವಿವೇಕವನ್ನು ಪಡೆದಿದ್ದಾರೆಯೇ? ಹೀಗೆ ಹೆಚ್ಚು, ಮತ್ತೂ ಹೆಚ್ಚು ಬೆಳೆಯುವುದಕ್ಕೆ ಕೊನೆ ಎಂಬುದಿದೆಯೇ? ಇದೊಂದು ವ್ಯಾಧಿಗ್ರಸ್ತ ಮನಸ್ಸು ಎಂದು ಅನ್ನಿಸುವುದಿಲ್ಲವೆ? ಈ ರೋಗಗ್ರಸ್ತ ಮನಸ್ಸುಗಳನ್ನು ತೃಪ್ತಿಪಡಿಸಲು ನಮ್ಮ ದೇಶದ ನೆಲ, ಜಲ, ಯುವಶಕ್ತಿಗಳು ವ್ಯಯವಾಗುವುದು ಬದುಕಿನ ಯಾವ ಗುಣಾತ್ಮಕ ಹೆಚ್ಚಳಕ್ಕೆ ಸಂಬಂಧಪಡುತ್ತದೆ? ಬಡ ಭಾರತೀಯರು ಅತಿ ಕಡಿಮೆ ಬೆಲೆಗೆ ತಮ್ಮ ದುಬಾರಿ ಮೆದುಳಿನ ಶಕ್ತಿಯನ್ನು ಮಾರುತ್ತಾರೆ ಎಂಬುದನ್ನು ಅರಿತೇ ಒಬಾಮಾ ಭಾರತದ ಸಾಫ್ಟ್‌ವೇರ್ ಕಂಪನಿಗಳನ್ನು ಹೊಗಳುತ್ತಾನೆ. ಅವನ ಹೊಗಳಿಕೆಗೆ ಉಬ್ಬಿಹೋಗಿ ನಮ್ಮ ಯುವಕರು ಹಗಲಿರುಳು ಎನ್ನದೆ ಕಷ್ಟಪಟ್ಟು ಸಾಫ್ಟ್‌ವೇರ್ ತಯಾರಿಸಿ ಆ ದೇಶದ ಜನರ ವಿರಾಮ ಹೆಚ್ಚಿಸುವ ಕಾಯಕದಲ್ಲಿ ಏಕೆ ತೊಡಗಬೇಕು? ಇಷ್ಟಾಗಿ ಈ ಆರ್ಥಿಕ ಅಭಿವೃದ್ಧಿಯಿಂದ ನಮ್ಮ ಬಡಜನರಿಗಾದ ಲಾಭವೇನು? ಆದರೆ ಸಮಸ್ಯೆ ಏನೆಂದರೆ ಈ ಕಂಪ್ಯೂಟರ್ ತಾಂತ್ರಿಕತೆಯ ಹುಚ್ಚು ಇಡೀ ದೇಶವನ್ನೇ ಆವರಿಸುತ್ತಿದೆ. ನಮ್ಮ ಶಿಕ್ಷಣ ಇದಕ್ಕೆ ಪೂರಕವಾಗಿದೆ.

### ಕಂಪ್ಯೂಟರ್ ಟೆಕ್ನಾಲಜಿ ಮತ್ತು ದೇಶಕಟ್ಟುವ ಕೆಲಸ

ಕಾರ್ಪೋರೇಟ್ ಸಂಸ್ಥೆಗಳಲ್ಲಿ ಕೆಲಸಮಾಡುವ ನಮ್ಮ ಭಾರತೀಯರು ಅಸಾಧಾರಣ ಬುದ್ಧಿಶಾಲಿಗಳು. ಇವರು ಗಳಿಸಿರುವ ವಿದ್ಯೆ, ಬುದ್ಧಿ ಮತ್ತು ಅಗಾಧವಾದ ಕೌಶಲಗಳು ದೇಶ ಕಟ್ಟಲು ಬಳಕೆಯಾದರೆ ಹಿಂದೆಂದೂ ಕಾಣದಂತ ಅದ್ಭುತವಾದ ಬದಲಾವಣೆ ಸಾಧ್ಯ. ಮುಖ್ಯವಾಗಿ ಸರ್ಕಾರಿ ವ್ಯವಸ್ಥೆಯ ಕುಂದುಕೊರತೆಗಳನ್ನು ಈ ಸಂಸ್ಥೆಗಳಲ್ಲಿರುವ ಮಹಾನ್ ಬುದ್ಧಿಶಾಲಿಗಳು ಸರಿಪಡಿಸಲು ನೆರವು ನೀಡಬಹುದು. ಒಂದು ವ್ಯವಸ್ಥೆಯ ಅಡಿಯಲ್ಲಿ ನಡೆಯುವ ಒಪ್ಪಂದಗಳು, ಕರಾರುಗಳು ಹಾಗೂ ಪಾಲಿಸಿ ನಿರ್ಧಾರಗಳು ಇಡೀ ವ್ಯವಸ್ಥೆಯ ಆರೋಗ್ಯಕ್ಕೆ ಪೂರಕವಾಗಿವೆ. ಆದರೆ ಭ್ರಷ್ಟಚಾರ ತಾಂಡವವಾಡುತ್ತಿರುವ

ನಮ್ಮ ವ್ಯವಸ್ಥೆಯಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಈ ಎಲ್ಲ ಕರಾರುಗಳು ರೂಪುಗೊಳ್ಳುವ ಮೂಲದಲ್ಲೇ ತಾನು ಕೊಳ್ಳೆಹೊಡೆಯಲು ಬೇಕಾದ ಎಲ್ಲ ಅನುಕೂಲಗಳನ್ನು ಅವಕಾಶಗಳನ್ನು ಕಲ್ಪಿಸಿಕೊಳ್ಳುತ್ತವೆ. ಉದಾಹರಣೆಗೆ ನ್ಯಾಶನಲ್ ಮಿನೆರಲ್ ಪಾಲಿಸಿಯನ್ನೆ ತೆಗೆದುಕೊಳ್ಳಿ. ಪುನರ್ನವೀಕರಿಸಲು ಸಾಧ್ಯವಿಲ್ಲದ ಈ ನೈಸರ್ಗಿಕ ಸಂಪತ್ತನ್ನು ಬಳಸಿಕೊಳ್ಳುವ ಪಾಲಿಸಿ ಹೇಗಿರಬೇಕು? ಭಾರತ ಸರ್ಕಾರದ ಗಣಿ ಸಚಿವಾಲಯ "ನ್ಯಾಷನಲ್ ಮಿನರಲ್ ಪಾಲಿಸಿ 1993" ಪ್ರಕಟಿಸಿದೆ. ಇದರ ಪ್ರಕಾರ ಭಾರತ ತನ್ನ ಖನಿಜ ಸಂಪತ್ತಿನ ಬಗ್ಗೆ ವೈಜ್ಞಾನಿಕ ಮಾಹಿತಿ ಸಂಗ್ರಹಿಸಬೇಕು ಮತ್ತು ವೈಜ್ಞಾನಿಕವಾಗಿ ಗಣಿಗಾರಿಕೆ ಮಾಡಬೇಕು. ಖನಿಜ ಸಂಪತ್ತು ಪುನರ್‌ನವೀಕರಿಸಲಾಗದ ಸಂಪತ್ತು ಎಂದು ಈ ಕಾರ್ಯನೀತಿ ಮೊದಲೇ ಹೇಳುತ್ತದೆ. ಆದರೆ ಈ ಖನಿಜಗಳನ್ನು ಬುದ್ಧಿಪೂರ್ವಕವಾಗಿ ಬಳಸುವುದು ಎಂದರೆ 'ಮುಂದಿನ ಉಪಯೋಗಕ್ಕೆ ಬೇಕೆಂದು ಉಳಿಸುವುದು ಎಂಬ ಸಂಕುಚಿತ ಅರ್ಥದಲ್ಲಿ ಅಲ್ಲ' ಎಂದು ವಿವರಣೆ ನೀಡುತ್ತದೆ. ಪುನರ್‌ನವೀಕರಿಸಲಾಗದ ಅಮೂಲ್ಯ ಖನಿಜಗಳನ್ನು ಮುಂದಿನ ಬಳಕೆಗಾಗಿ ಉಳಿಸಿಕೊಳ್ಳುವುದು ಸಂಕುಚಿತ ಅರ್ಥ ಹೇಗಾದೀತು? ಈ ವಿವರಣೆಯಲ್ಲಿ ಕೊಳ್ಳೆಹೊಡೆಯುವ ಹುನ್ನಾರ ಇರುವುದು ಸ್ಪಷ್ಟವಾಗುವುದಿಲ್ಲವೆ? ಇದು ಬೇಲಿಯೆ ಎದ್ದು ಹೊಲ ಮೇಯ್ದಂತೆ. ಮುಂದಿನ ಪೀಳಿಗೆಗೆ ಈ ಅಮೂಲ್ಯ ಖನಿಜ ಸಂಪತ್ತು ಉಳಿಸಬೇಕು ಎಂಬುದು "ಸಂಕುಚಿತ ಅರ್ಥ" ಎಂಬ ವ್ಯಾಖ್ಯಾನದ ಹಿಂದಿರುವ ಉದ್ದೇಶವಾದರೂ ಏನು? ಇಂತಹ ಒಂದು ಪಾಲಿಸಿ ರಚಿಸಬೇಕಾದರೆ ಈ ವ್ಯವಹಾರಗಳಿಗೆ ನೇರ ಸಂಬಂಧವಿರದ ತಟಸ್ಥವಲಯದ ಬುದ್ಧಿವಂತನೊಬ್ಬ ಪಾಲ್ಗೊಂಡರೆ ಇಂತಹ ವಂಚನೆಯನ್ನಾದರೂ ತಡೆಗಟ್ಟಬಹುದು. ಅಲ್ಲದೆ ಬೃಹತ್ ಆರ್ಥಿಕ ವ್ಯವಹಾರಗಳು ಸರ್ಕಾರ ಮತ್ತು ಗುತ್ತಿಗೆದಾರರ ನಡುವೆ ಎಲ್ಲೆಲ್ಲಿ ನಡೆಯುತ್ತದೆಯೋ ಅ ಎಲ್ಲ ಕರಾರು ಪತ್ರಗಳನ್ನು ಕಾರ್ಪೋರೇಟ್ ಸಂಸ್ಥೆಗಳ ಬುದ್ಧಿಶಾಲಿ ಜನರಿಂದ ಲೋಪವಿಲ್ಲದಂತೆ ಮಾಡಿಸಲು ಸಾಧ್ಯವಿದೆ. ಇದನ್ನು ಸರ್ಕಾರ ಒಪ್ಪಬೇಕು ಮತ್ತು ಈ ಕೆಲಸವನ್ನು ಬಹಳ ಗಂಭೀರವಾಗಿ ಕಾರ್ಪೋರೇಟ್ ಸಂಸ್ಥೆಗಳು ತೆಗೆದುಕೊಂಡು ಈ ಕೆಲಸಕ್ಕಾಗಿಯೇ ಒಂದು ದೊಡ್ಡ ಶಾಖೆಯನ್ನು ತೆರೆದು ಹೊಸದಾಗಿ ಇಡೀ ದೇಶವನ್ನು ಕಟ್ಟುವ ಕೆಲಸ ಪ್ರಾರಂಭವಾಗಬೇಕು. ತಂತ್ರಜ್ಞಾನವನ್ನು ಭ್ರಷ್ಟಚಾರ ನಿರ್ಮೂಲನೆಗೆ ನಾವು ಯಶಸ್ವಿಯಾಗಿ ಬಳಸಿಕೊಂಡಿಲ್ಲ. ಇದಕ್ಕೆ ಒಪ್ಪುವಂತೆ ಸರ್ಕಾರದ ಮೇಲೆ ನಾವು ಒತ್ತಾಯ ಹಾಕಬೇಕು. ಜೊತೆಗೆ ಈ ಕೆಲಸದಲ್ಲಿ ನೆರವಾಗಲು ಮಾಹಿತಿ ತಂತ್ರಜ್ಞಾನದ ಕಾರ್ಪೋರೇಟ್ ವಲಯಗಳು ಸ್ವಯಂಸ್ಫೂರ್ತಿಯಿಂದ ಮುಂದಾಗಬೇಕು.

ಅಜೀಮ್ ಪ್ರೇಮ್‌ಜಿಯಂತಹ ಸಾಫ್ಟ್‌ವೇರ್ ದಿಗ್ಗಜರು ಶಿಕ್ಷಣದ ಮೂಲಕ ಅಭಿವೃದ್ಧಿಗಾಗಿ ಈಗಾಗಲೇ ಶ್ರಮಿಸುತ್ತಿರುವುದು ಸ್ತುತ್ಯರ್ಹ. ಹೈದ್ರಾಬಾದ್-ಕರ್ನಾಟಕದ ಸ್ಥಿತಿಯನ್ನು ಕಂಡು ಅವರು ಮಮ್ಮಲ ಮರುಗಿದರು. ಇದು ನನಗೆ ಅಪರಾಧಿ ಪ್ರಜ್ಞೆಯಾಗಿ ಕಾಡುತ್ತಿದೆ ಎಂದರು. ಆದರೆ ಆ ಪ್ರದೇಶದಿಂದಲೇ ಗೆದ್ದುಬಂದ ನಮ್ಮ ಜನಪ್ರತಿನಿಧಿಗಳಿಗೆ

ಹೀಗೇನೂ ಅನ್ನಿಸಲೇ ಇಲ್ಲ. ಮೇಲಾಗಿ ಬಡತನ, ಅನಕ್ಷರತೆ ಮತ್ತು ದೌರ್ಬಲ್ಯಗಳೇ ಇವರ ಗೆಲುವಿಗೆ ಬಂಡವಾಳವಾಯಿತು. ಭ್ರಷ್ಟಗೊಂಡಿರುವ ನಮ್ಮ ಸರ್ಕಾರೀ ವ್ಯವಸ್ಥೆಯೊಳಗೆ ಅಸಹ್ಯಪಡದೆ  ನುಗ್ಗಿ ಅದನ್ನು ಸರಿಪಡಿಸಲು ಪ್ರಯತ್ನಿಸುವವರು ಇನ್ನೂ ಯಾರೂ ಕಾಣುತ್ತಿಲ್ಲ. ಹಾಗೆಯೇ ಕನ್ನಡದ ತಂತ್ರಾಂಶದಂತಹ ಸಮಸ್ಯೆಯನ್ನೇ ತೆಗೆದುಕೊಳ್ಳಿ. ನಮ್ಮ ಸಾಫ್ಟ್‌ವೇರ್ ದಿಗ್ಗಜರು ಇದನ್ನು ಸುಲಭವಾಗಿ ಮಾಡಿ ಮುಗಿಸಬಹುದಾಗಿತ್ತು. ಆದರೆ ಇದು ತಮ್ಮ ಬೃಹತ್ ಸಂಸ್ಥೆಗೆ ತೀರಾ ಸಣ್ಣ ಕೆಲಸವೆಂದೂ, ಇದನ್ನು ಯಾರಾದರೂ ಸಣ್ಣವರು ಮಾಡಬಹುದೆಂದೂ ಹೇಳುತ್ತ ತಮ್ಮ ಹಿರಿತನವನ್ನು ಮೆರೆವ ದಿಗ್ಗಜರಿದ್ದಾರೆಯೇ ಹೊರತು ಅಹಂಕಾರವನ್ನು ಬದಿಗಿಟ್ಟು ತಮ್ಮದೇ ನೆಲಜಲದ ಭಾಷೆಗೆ ಕಿಂಚಿತ್ ಕೊಡುಗೆ ಕೊಡಬೇಕೆಂದು ಇವರಿಗೆ ಅನ್ನಿಸುತ್ತಲೇ ಇಲ್ಲ. ಇಂತಹ 'ಯಶಸ್ವೀ' ದಿಗ್ಗಜರು ನಮ್ಮ ಶಿಕ್ಷಣದ ರೂಪುರೇಖೆಗಳ ಬಗೆಗೆ ಸಲಹೆನೀಡುತ್ತಾರೆ!

# ೯. ಶಿಶುಕೇಂದ್ರಿತ ಶಿಕ್ಷಣ

## ಮುಗ್ಧ ಮನಸ್ಸಿನ ಅಖಂಡತೆ ಮತ್ತು ಶಿಶುಕೇಂದ್ರಿತ ಶಿಕ್ಷಣ

ಇಡೀ ಜಗತ್ತಿನ ಅಸ್ತಿತ್ವದ ಕೇಂದ್ರವೇ ತಾನೆಂದು ಭಾವಿಸುವ ಮೂಲಕ ಮಗುವಿನ ಜೀವನ ಪ್ರಾರಂಭವಾಗುತ್ತದೆ. ಹಾಗಾಗಿ ಮಗು ಸಹಜವಾಗಿ ಜಡ-ಚೈತನ್ಯ, ಪ್ರಾಣಿ-ಸಸ್ಯ ಎಂಬ ಭೇದವಿಲ್ಲದೆ ಇಡೀ ಅಸ್ತಿತ್ವದ ಜೊತೆ ಒಂದು ಭಾವನಾತ್ಮಕ ತಾದಾತ್ಮ್ಯವನ್ನು ಸಾಧಿಸುತ್ತದೆ. ಅದಕ್ಕೆ ಈ ಅಸ್ತಿತ್ವದಲ್ಲಿ ಜಡವೆನ್ನುವುದು ಯಾವುದೂ ಇರುವುದಿಲ್ಲ. ಇದು ಒಂದು ಅದ್ಭುತವಾದ ಮನಃಸ್ಥಿತಿ. ಆದ್ದರಿಂದಲೇ ಮಗುವಿನ ಕಲಿಕೆಯ ಸಾಮರ್ಥ್ಯವೂ ಅಸಾಧಾರಣವಾಗಿರುತ್ತದೆ.

ಒಂದು ವೇಳೆ ಮಗುವಿನ ಈ ಭರವಸೆಯ ಬದುಕಿಗೆ ಸಂಚಕಾರ ಬಂದರೆ? ತಾನು ಇಡೀ ಅಸ್ತಿತ್ವವೇ ಆಗಿದ್ದೇನೆ ಎಂದು ಗುರುತಿಸಿಕೊಳ್ಳುವ ಸಂದರ್ಭದಲ್ಲೆಲ್ಲ ಮಗುವಿನ ಈ ಅಖಂಡತೆಯ ತಾದಾತ್ಮ್ಯವನ್ನು ಮುರಿದು 'ನೀನು ಕೇವಲ ಒಂದು ಬಿಡಿ ಭಾಗ' ಎಂದು ನಾವು ಅದರ ಗ್ರಹಿಕೆಯನ್ನು ಮೊಟಕುಗೊಳಿಸಿದರೆ? ಅದನ್ನು ಶಿಕ್ಷಣ ಎನ್ನಬೇಕೆ? ನಮ್ಮ ಶಿಕ್ಷಣ, 'ನೀನು ಅಖಂಡವಲ್ಲ, ಕೇವಲ ಒಂದು ಬಿಡಿಭಾಗ; ಹಾಗಾಗಿ ಬಿಡಿ ಭಾಗಗಳಿಗೆ ಇರಬೇಕಾದ ಜವಾಬ್ದಾರಿಗಳ ಹೊರೆ ನಿನ್ನ ಮೇಲಿದೆ; ನೀನು ಚರಿತ್ರೆ ಕಲಿಯಬೇಕು, ಭೂಗೋಳ ಕಲಿಯಬೇಕು, ವಿಜ್ಞಾನ ಕಲಿಯಬೇಕು, ಎಲ್ಲಕ್ಕಿಂತ ಮಿಗಿಲಾಗಿ ಇಂಗ್ಲಿಷ್-ಗಣಿತ ಕಲಿಯಬೇಕು' ಎಂದು ಒತ್ತಡ ಹೇರುತ್ತದೆ. ಹೀಗೆ ಶಿಕ್ಷಣ ಎಂಬುದು ಅಖಂಡವಾದುದನ್ನು ಮುರಿದು ಭಾಗಗಳಾಗಿ ವಿಂಗಡಿಸಿ ಮತ್ತೆ ಜೋಡಿಸುವ ಆಟವಾಗಿ ಪರಿಣಮಿಸುತ್ತದೆ.

ಈ ಒಂದು ಅನಿವಾರ್ಯ ವಿದ್ಯಮಾನವನ್ನು ಶಿಶುಕೇಂದ್ರಿತ ಶಿಕ್ಷಣ ಸ್ವಲ್ಪವಾದರೂ ಕಡಿಮೆ ಮಾಡಬಹುದು. ನಮ್ಮ ಶಾಲಾ ವಾತಾವರಣ ಮಗುವಿಗೆ ಹೊರೆಯಾಗುತ್ತದೆಂಬ ಕಾರಣದಿಂದ ಈ ಹೊರೆಯನ್ನು ಕಡಿಮೆ ಮಾಡಿ ಕಲಿಕೆ ಸಂತೋಷದಾಯವಾಗಿರಲು ಏನೆಲ್ಲಾ ಬದಲಾವಣೆಗಳನ್ನು ಮಾಡಬಹುದೋ ಅದನ್ನೆಲ್ಲಾ ಮಾಡುವ ಪ್ರಯತ್ನ ಇತ್ತೀಚಿನ ದಿನಗಳಲ್ಲಿ ನಡೆಯುತ್ತಿದೆ. 'ಶಿಶುಕೇಂದ್ರಿತ ಶಿಕ್ಷಣ'ದ ಪ್ರಯತ್ನ ಇವುಗಳಲ್ಲಿ ಅತಿಮುಖ್ಯ. ಅದರಲ್ಲೂ ಒಂದು-ಎರಡನೇ ತರಗತಿಯಲ್ಲಿರುವ ಮಕ್ಕಳಿಗೆ ಇದು ಬಹಳ

ಮುಖ್ಯವಾದೀತು. ಅದರ ನಂತರವೂ ಮಗುವೇ ತರಗತಿಯ ಕೇಂದ್ರಬಿಂದುವಾಗಿ ಉಳಿಯುವುದು ಬಹಳ ಮುಖ್ಯ. ಮಕ್ಕಳನ್ನು ಗುಡ್ಡೆ ಹಾಕಿಕೊಂಡು ಕಪ್ಪುಹಲಗೆಯ ಬಳಿಯೇ ನಿಲ್ಲುವ ಅಧ್ಯಾಪಕ ಜೋರುದನಿಯಲ್ಲಿ ಸಹಜವಾಗಿ ಹೇಳಬಹುದಾದದ್ದನ್ನೆಲ್ಲಾ ಅಸಹಜವಾಗಿ, ಪುಸ್ತಕೀಯವಾಗಿ ಹೇಳುತ್ತಾ ಹೋಗುತ್ತಾನೆ. ಅವನು ಮಕ್ಕಳನ್ನು ಉದ್ದೇಶಿಸಿ ಮಾತನಾಡುವುದು 'ಗಲಾಟೆ ಮಾಡಬೇಡಿ' ಎಂದು ಕೂಗಿಕೊಳ್ಳುವಾಗ ಮಾತ್ರ. ಉಳಿದ ವೇಳೆಯಲ್ಲಿ ಪಾಠ ಸ್ವಗತವಾಗಿರುತ್ತದೆ. ಸಂವಹನದ ಕಿರು ಸಂಕಲ್ಪವನ್ನಾದರೂ ಈ ಅಧ್ಯಾಪಕರು ಮಾಡಿಕೊಂಡರೆ ಇವರು ತಮ್ಮ ಪ್ರವಚನ ಶೈಲಿಯನ್ನು ಬಿಟ್ಟು ಮಕ್ಕಳ ನಡುವೆ ಹೋಗಿ ಕುಳಿತುಕೊಳ್ಳುತ್ತಾರೆ. ಮಕ್ಕಳ ಜೊತೆ ನಿಜವಾಗಿಯೂ ಮಾತನಾಡುತ್ತಾರೆ. ಕಲಿಕೆಯಲ್ಲಿ ಮಕ್ಕಳು–ಅಧ್ಯಾಪಕ ಇಬ್ಬರೂ ಒಂದಾಗಿ ತಮ್ಮನ್ನು ತಾವೇ ಮರೆಯುತ್ತಾರೆ. ಇಂತಹ ಕಲಿಕೆಯ ಪ್ರಕ್ರಿಯೆಯಲ್ಲಿ ಮಕ್ಕಳ ಅಭಿವ್ಯಕ್ತಿಗೂ ಅವಕಾಶವಿರುತ್ತದೆ. ಅಧ್ಯಾಪಕನಾದವನು ಸಾಧ್ಯವಾದಷ್ಟು ತಟಸ್ಥನಾಗಿ ಮಗುವಿನ ಹುಡುಕಾಟಕ್ಕೆ ನೆರವಾಗುತ್ತಾನೆ. ಮಗುವಿನ ಸ್ವತಂತ್ರ ಅಭಿಪ್ರಾಯಗಳು ತರಗತಿಯಲ್ಲಿ ಎದ್ದುಕೇಳುವಂತೆ ತನ್ನ ಧ್ವನಿಯನ್ನು ಕಡಿಮೆ ಮಾಡಿ ಸಂಯಮದಿಂದ ವರ್ತಿಸುತ್ತಾನೆ. 'ತರು ತಳೆದ ಪುಷ್ಪದಂತೆ' ಮಗು ಸಹಜವಾಗಿ ಕಲಿಯುತ್ತದೆ. ಮಗು ಮತ್ತು ಅದು ಸಂಪಾದಿಸಿದ ಜ್ಞಾನ ಹೂವಾಗಿ, ಕಾಯಾಗಿ, ಹಣ್ಣಾಗುವ ತನಕ ಸಹಜಕ್ರಿಯೆಯ ಸರಣಿಯಲ್ಲಿ, ನಿಜಜೀವನ ಪ್ರಸಂಗದಲ್ಲಿ ಒದಗಿಬರುತ್ತದೆ. ಜ್ಞಾನ ತರು ತಳೆದ ಪುಷ್ಪವಾಗಬೇಕು. ಕೃತಕವಾಗಿ ಅಂಟಿಸಿಕೊಂಡ ಹೂವಾಗಬಾರದು. ಎಂದರೆ ಜ್ಞಾನದ ಜೊತೆ ಒಂದು ಸಾವಯವ ಸಂಬಂಧ ಸಾಧ್ಯವಾಗಬೇಕು. ದಂಡೆದಂಡೆ ಹೂವನ್ನು ತಲೆಗೆ ಮುಡಿದುಕೊಂಡರೆ ಮರುದಿನವೇ ಒಣಗಿಹೋಗುತ್ತದೆ. ತರಗತಿಯ ಸಂದರ್ಭದಲ್ಲಿ ಹೇಳಬೇಕೆಂದರೆ, ಪರೀಕ್ಷೆ ಮುಗಿದ ಕೂಡಲೇ ಮರೆತುಹೋಗುತ್ತದೆ. ಐನ್‌ಸ್ಟೈನ್ ಹೇಳುತ್ತಾರೆ: "ಶಾಲೆಯಲ್ಲಿ ಕಲಿತದ್ದನ್ನೆಲ್ಲಾ ಮರೆತ ಮೇಲೆ ಏನು ಉಳಿದುಕೊಳ್ಳುವುದೋ ಅದೇ ಶಿಕ್ಷಣ" ಅಂದರೆ ಮಗುವಿಗೆ ಯಾವ ಕಲಿಕೆ ಗಾಢ ಅನುಭವವನ್ನು ಉಂಟು ಮಾಡುತ್ತದೋ ಅದು ಶಾಲಾ ಶಿಕ್ಷಣದ ನಂತರವೂ ಉಳಿದುಕೊಳ್ಳುತ್ತದೆ. ಶಿಕ್ಷಣ ಎಂಬುದು ಕೇವಲ ನೆನಪಿನಾಟ ಮಾತ್ರವಾದಾಗ ಮರೆತುಹೋಗುತ್ತದೆ. ಮೇಲೆ ಹೇಳಿದ ಹೋಲಿಕೆಯಿರುವ' ಮಂಕುತಿಮ್ಮನ 'ಮಂಕುತಿಮ್ಮನ ಕಗ್ಗ'ದ ಪದ್ಯದ ಪೂರ್ಣ ಪಾಠ ಹೀಗಿದೆ:

**ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣೆ ।**
**ಚಿತ್ತದೊಳು ಬೆಳೆದರಿವು ತರು ತಳೆದ ಪುಷ್ಪ ॥**
**ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ ।**
**ಶಾಸ್ತ್ರತನದಿಂದಲ್ಲ – ಮಂಕುತಿಮ್ಮ ॥** (ಪದ್ಯ. ೬೫)

## ನೆನಪಲ್ಲ, ಅನುಭವವೇ ಶಿಕ್ಷಣ

ಶಿಶುಕೇಂದ್ರಿತ ಶಿಕ್ಷಣದ ಉದ್ದೇಶ ಮಗುವಿಗೆ ಅನುಭವ ಜ್ಞಾನವನ್ನು ಕೊಡುವುದು. ಇದೇ ನಿಜವಾದ ಕಲಿಕೆ. ಒಂದು ನಿರ್ದಿಷ್ಟ ಜೀವನದೃಷ್ಟಿಯನ್ನು ಹೊಂದಿರುವ ಅಧ್ಯಾಪಕ ಮಾತ್ರ ಶಿಶುಕೇಂದ್ರಿತ ತರಗತಿಯನ್ನು, ಎಂದರೆ ಶಿಶುಕೇಂದ್ರಿತವಾದ ಕಲಿಕೆಯ ವಾತಾವರಣವನ್ನು ನಿರ್ಮಿಸಬಲ್ಲ. ಅವನ ಶಿಕ್ಷಣದ ನಿರೀಕ್ಷೆಗಳು ಸಾಂಪ್ರದಾಯಿಕ ಪರೀಕ್ಷಾಪದ್ಧತಿಯ ನಿರೀಕ್ಷೆಗಳಿಗಿಂತ ಬೇರೆಯೇ ಆಗಿರುತ್ತವೆ. ಇವನು ಭಾವಿಸುತ್ತಾನೆ– ಚರಿತ್ರೆ, ಭೂಗೋಳ, ವಿಜ್ಞಾನ, ಗಣಿತ, ನ್ಯಾಯ – ಇವೆಲ್ಲಾ ಮಗುವಿಗಾಗಿ ಇವೆಯೇ ಹೊರತು ಮಗು ಹುಟ್ಟಿದ್ದು ಇದನ್ನು ಕಲಿಯಬೇಕು ಎಂಬ ಉದ್ದೇಶದಿಂದ ಅಲ್ಲ. ಈ ವಿಷಯಗಳನ್ನು ಕಲಿಯುವ ಮಗು ಮುಖ್ಯವೇ ಹೊರತು ಮಗು ಕಲಿಯಬೇಕಾದ ಈ ವಿಷಯಗಳಲ್ಲ. ತೀವ್ರ ಅಪರಾಧಿಪ್ರಜ್ಞೆಯಲ್ಲಿ ಬಳಲುವ ಜನ ಅಧ್ಯಾಪಕರಾದರೆ ಅವರು ಈ ಎಲ್ಲ ವಿಷಯಗಳನ್ನು ಮಗು ಕಲಿಯಲೇಬೇಕೆಂಬ ಒಂದು ಜವಾಬ್ದಾರಿಯ ಹೊರೆಯನ್ನು ಮಗುವಿನ ಮೇಲೆ ಹೊರಿಸುತ್ತಾರೆ. ಹೀಗೆ ಜವಾಬ್ದಾರಿಯ ಹೊರೆಯನ್ನು ಹೊರಿಸುವ ಮೂಲಕ ತರಗತಿಯನ್ನು ಮಕ್ಕಳ ಮಟ್ಟಿಗೆ ಒಂದು ಆತಂಕದ ಗೂಡನ್ನಾಗಿ ಮಾಡಿಬಿಡುತ್ತಾರೆ. ಇಂತಹ ಅಧ್ಯಾಪಕರು ಕೋಲು ಝಳಪಿಸುತ್ತ ಮಕ್ಕಳನ್ನು ಆತಂಕಕ್ಕೆ ಗುರಿಮಾಡುವುದರಿಂದ ಈ ಶಿಕ್ಷಣ ಎಂಬ ಹಿಂಸೆಯಿಂದ ತಪ್ಪಿಸಿಕೊಂಡರೆ ಸಾಕಪ್ಪ ಎಂದು ಮಕ್ಕಳು ಭಾವಿಸುವಂತಾಗುತ್ತದೆ. ಇಂತಹ ವಾತಾವರಣದಲ್ಲಿ ಮಕ್ಕಳು ತಮಗಿದ್ದ ಕಲಿಕೆಯ ಸಾಮರ್ಥ್ಯವನ್ನು ಕಳೆದುಕೊಂಡು ಅಧ್ಯಾಪಕರನ್ನು ತೃಪ್ತಿಗೊಳಿಸುವ ಬಾಯಿಪಾಠದಲ್ಲಿ ತೊಡಗುತ್ತಾರೆ. ಕೊನೆಗೆ ಜೀವನವಿಡೀ ತಮ್ಮ ಕಲಿಯುವ ಕೌತುಕವನ್ನೇ ಕಳೆದುಕೊಳ್ಳುತ್ತಾರೆ.

ಇಂತಹ ಅಧ್ಯಾಪಕರ ಜೀವನದೃಷ್ಟಿಯಾದರೂ ಎಂತಹುದು? ಇವರು ಮಕ್ಕಳಿಂದ ಶೈಕ್ಷಣಿಕವಾಗಿ ನಿರೀಕ್ಷಿಸುವುದಾದರೂ ಏನನ್ನು? ಉಸಿರು ಕಟ್ಟಿಸುವ ಇಕ್ಕಟ್ಟಾದ ಜೀವನದೃಷ್ಟಿಗೆ ಹೊಂದಿಕೊಂಡಿರುವ ಇವರ ಜೀವನಸಿದ್ಧಾಂತ ಮಕ್ಕಳನ್ನು ಗಂಭೀರವಾಗಿ ಪರಿಗಣಿಸಲು ಅವಕಾಶ ನೀಡುತ್ತದೆಯೇ? ನಿಜವಾದ ಶಿಕ್ಷಣ ತರಗತಿಯಲ್ಲಿ ಸಾಧ್ಯವಾಗಬೇಕಾದರೆ ನಮ್ಮ ಅಧ್ಯಾಪಕರು ತಮ್ಮ ಜೀವನದೃಷ್ಟಿಯನ್ನು ವಿಸ್ತರಿಸಿಕೊಳ್ಳಲು ನೆರವಾಗುವ ತರಬೇತಿಗಳು, ಚರ್ಚೆಗಳು ನಡೆಯಬೇಕು. ದೇಶದ ಬೇರೆ ಬೇರೆ ಭಾಗಗಳಲ್ಲಿ ಆಗುತ್ತಿರುವ ಸೃಜನಶೀಲ ಶೈಕ್ಷಣಿಕ ಪ್ರಯೋಗಗಳನ್ನು ಅಧ್ಯಾಪಕರು ಹೋಗಿ ನೋಡಬೇಕು. ಇದರಲ್ಲಿ ತೊಡಗಿಸಿಕೊಂಡಿರುವ ಅಸಾಧಾರಣ ವ್ಯಕ್ತಿಗಳೊಡನೆ ಮಾತನಾಡಿ ಅವರನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬೇಕು. ಜೊತೆಗೆ ತಾವೂ ಈ ನಿಟ್ಟಿನಲ್ಲಿ ಸ್ವತಂತ್ರ ಕೊಡುಗೆಗಳನ್ನು ಕೊಡಬಹುದೇ ಎಂದು ತಮ್ಮದೇ ಸಾಧ್ಯತೆಗಳನ್ನು ಕಂಡುಕೊಳ್ಳಬೇಕು.

ನಮ್ಮ ಅಧ್ಯಾಪಕರು ಪ್ರತಿಯೊಂದನ್ನೂ ಮಕ್ಕಳಿಗೆ ತಾವೇ ಕಲಿಸಬೇಕೆಂಬ ವೃತ್ತಿನಿಷ್ಠೆಯನ್ನು ಮೈಗೂಡಿಸಿಕೊಂಡಿರುವಂತೆ ಕಾಣುತ್ತದೆ. ಮಗು ಒಂದು ವಿಷಯವನ್ನು ಗ್ರಹಿಸಲು ಪ್ರಯತ್ನ ಪಡುವುದಕ್ಕೂ ಕಾಲಾವಕಾಶ ನೀಡದೆ ಬಾಯಿಪಾಠ ಮಾಡಿಸಿಬಿಡುತ್ತಾರೆ.

ಹೀಗಾಗಿ ಶಾಲೆಗಳಲ್ಲಿ ಕಲಿಯುವುದು ಎಂದರೆ ಕೆಲವು ಪದಗಳನ್ನು ಬಾಯಿಪಾಠ ಮಾಡಿ ಪುನರುಚ್ಚರಿಸುವುದು ಎಂಬ ತೀರ್ಮಾನಕ್ಕೆ ಮಕ್ಕಳು ಬರಲೇಬೇಕಾಗುತ್ತದೆ. ಶಿಶುಕೇಂದ್ರಿತ ತರಗತಿಯಲ್ಲಿ ಮಕ್ಕಳು ಬಹುಮುಖ್ಯರಾಗುತ್ತಾರೆ. ಆದರೆ ಅಧ್ಯಾಪಕನೇ ತರಗತಿಯ ಕೇಂದ್ರವ್ಯಕ್ತಿಯಾದಾಗ ಮಗುವಿಗಿಂತ ಮಗು ಕಲಿತದ್ದನ್ನು ಪುನರುಚ್ಚರಿಸುವುದೇ ಮುಖ್ಯವಾಗುತ್ತದೆ. ಏಕೆಂದರೆ ಅಧ್ಯಾಪಕನ ಸಾರ್ಥಕತೆ, ತಾನೊಬ್ಬ ಯಶಸ್ವಿ ಅಧ್ಯಾಪಕ ಎಂಬುದು ರುಜುವಾತಾಗುವುದು ಮಗು ಕಲಿತದ್ದನ್ನು ತಡಮಾಡದೆ ಪುನರುಚ್ಚರಿಸಿದಾಗ ಮಾತ್ರ. ಇಲ್ಲಿ ಅಧ್ಯಾಪಕ ತನ್ನ ಯಶಸ್ಸನ್ನೇ ಗುರಿಯಾಗಿಟ್ಟುಕೊಂಡು ಕೆಲಸ ಮಾಡುತ್ತಾನೆ. ಅಧ್ಯಾಪಕನ ಯಶಸ್ಸಿಗೆ ಮಗು ಒಂದು ಸಾಧನವಾಗಿ ಮಾತ್ರ ಉಳಿಯುತ್ತದೆ. ಹಾಗಾಗಿ ಮಗು ಸ್ವತಂತ್ರ ವ್ಯಕ್ತಿತ್ವವಿಲ್ಲದ, ಸ್ವಂತ ಅಭಿಪ್ರಾಯವಿಲ್ಲದ, ಸದಾ 'ದೊಡ್ಡವರನ್ನು' ಓಲೈಸುವ ಅಥವಾ ಗೌರವಿಸುವ ಒಂದು ಮಾದರಿ ವಿದ್ಯಾರ್ಥಿಯಾಗಿ ಬೆಳೆಯುತ್ತದೆ. ತನ್ನ ಎದುರಿಗೆ ಇರುವ ಇದೇ ಬಗೆಯ ಅನುಸರಣೀಯ ಮಾದರಿಗಳ ಎರಡನೇ ದರ್ಜೆಯ ನಕಲಾಗಿ ಈ ಮಕ್ಕಳು ಕೊನೆಗೊಳ್ಳುತ್ತಾರೆ. ಇಂತಹ ಒಂದು ವಾತಾವರಣದಲ್ಲಿ ಮಗು ತನ್ನ ಸ್ವಂತ ಅಭಿರುಚಿಯನ್ನು ಬೆಳೆಸಿಕೊಳ್ಳಲಾರದು. ಇಲ್ಲಿ ಮಗು ದೊಡ್ಡವರ ನಿರೀಕ್ಷೆಗಾಗಿ ತನ್ನ ಸಂತೋಷವನ್ನೇ ಬಲಿಕೊಡುತ್ತದೆ. ಈ ವಿದ್ಯಮಾನವನ್ನು ಅರಿಯಲು ಈ ಮುಂದಿನ ನೈಜಘಟನೆಯನ್ನು ನೋಡೋಣ.

**ವಂದನಾಳ ಸಮಸ್ಯೆ**

ನಮ್ಮ ಐದು ವರ್ಷದ ವಂದನಾ ಬಹಳ ಜಾಣೆ. ನಾಟಕ, ಡ್ಯಾನ್ಸ್, ಹಾಡು ಎಲ್ಲದರಲ್ಲೂ ಭಾಗವಹಿಸುತ್ತಾಳೆ. ಒಂದು ದಿನ ಈಕೆ ತನ್ನ ಬಣ್ಣ ಹಚ್ಚುವ ಪುಸ್ತಕ ಹಿಡಿದು ಆತಂಕದ ದನಿಯಲ್ಲಿ ಕೇಳಿದಳು: 'ಅಣ್ಣ, ನಾನು ಇದಕ್ಕೆ ಬಣ್ಣ ಹಚ್ಚಬೇಕು; ಯಾವ ಬಣ್ಣ ಹಚ್ಚಲಿ?' ಅದೊಂದು ಕೋಳಿ, ಮೀನು ಇತ್ಯಾದಿ ಪ್ರಾಣಿಗಳ ಚಿತ್ರ.

ನನಗೆ ಆಶ್ಚರ್ಯವಾಯಿತು. ನಿನಗೆ ಇಷ್ಟವಾದ ಬಣ್ಣ ಹಾಕು ಎಂದು ಹುರಿದುಂಬಿಸಿದೆ. ಆತಂಕದ ಧ್ವನಿ ಹೆಚ್ಚಾಯಿತು. ಯಾವುದೋ ಬಿಡಿಸಲಾರದ ಸಮಸ್ಯೆ ಕಾಡುತ್ತಿದೆಯೇನೋ ಎಂಬಂತೆ ಧ್ವನಿ ಮಾಡಿ, 'ಇಲ್ಲ ಅಣ್ಣ, ನನಗೆ ಅರ್ಥವಾಗ್ತಾ ಇಲ್ಲ, ಯಾವ ಬಣ್ಣ ಹಚ್ಚಲಿ?' ಎಂದಳು. ಅಲ್ಲೇ ಇವಳಂತೆಯೆ ಇರುವ ಇತರ ಮಕ್ಕಳು ತಮ್ಮ ತಮ್ಮ ಪುಸ್ತಕಕ್ಕೆ ಬಣ್ಣ ಹಚ್ಚುತ್ತಿದ್ದರು. ಬೇಕಾದಷ್ಟು ಬಣ್ಣಬಣ್ಣದ ಕ್ರೇಯಾನ್‌ಗಳು ನೆಲದ ಮೇಲೆಲ್ಲ ಹರಡಿ ಬಿದ್ದಿವೆ. ಆದರೆ ಬಣ್ಣ ಹಚ್ಚಲು ಅರ್ಥವಾಗುತ್ತಿಲ್ಲ!

ಈ ಸಮಸ್ಯೆಯ ಆಳ ಹುಡುಕಿನೋಡಿದೆ. ಮಕ್ಕಳು ತಮ್ಮ ಖುಷಿಗಾಗಿ ಬಣ್ಣ ಹಚ್ಚುತ್ತಾರೆ; ತಮ್ಮ ಖುಷಿಗಾಗಿ ಚಿತ್ರ ಬಿಡಿಸುತ್ತಾರೆ. ಆದರೆ ಇವಳ ಆತಂಕದ ದನಿ ನೋಡಿದಾಗ ಬಣ್ಣ ಹಚ್ಚಿದ್ದರ ಪರಿಣಾಮ ಎದುರಿಸಬೇಕು, ಆದ್ದರಿಂದ ಈ ಕೆಲಸವನ್ನು ಸರಿಯಾಗಿ ಮಾಡಿ ಮುಗಿಸಬೇಕು ಎಂಬ ಕರ್ತವ್ಯ ದೃಷ್ಟಿ ಎದ್ದು ಕಾಣುತ್ತಿತ್ತು.

ಸಹಜವಾಗಿ ನೋಡಿದರೆ ತಮ್ಮ ಖುಷಿಗಾಗಿ ಈ ಎಲ್ಲವನ್ನೂ ಮಡುವ ಮಕ್ಕಳ ತನ್ಮಯತೆಯಲ್ಲಿ ವರ್ತಮಾನ ಮಾತ್ರ ಇರುತ್ತದೆ. ಭೂತ-ಭವಿಷ್ಯತ್ತು ಕಾಲಗಳ ಪಾತ್ರ ಕಡಿಮೆ. ಹೀಗೆ ಖುಷಿಗಾಗಿ ಮಾಡಿದ ಕೆಲಸ ಅಥವಾ ಚೇಷ್ಟೆ – ಇವುಗಳಲ್ಲೇ ನಿಜವಾದ ಕಲಿಕೆ ಸಾಧ್ಯ. ಎಲ್ಲದಕ್ಕೂ ಕಡಿವಾಣ ಹಾಕುವ ದೊಡ್ಡವರ ಹೆದರಿಕೆಯಿಂದಾಗಿ ಮಕ್ಕಳಲ್ಲಿ 'ಬಾಧ್ಯತೆ'ಯ ಪರಿಕಲ್ಪನೆ ಮೂಡುತ್ತದೆ. ಮಗು ತನ್ನ ಸಂತೋಷಕ್ಕಾಗಿ ಮಾಡುವುದಕ್ಕಿಂತ 'ಮಿಸ್' ಅಥವಾ 'ಅಮ್ಮ'ನ ಒಪ್ಪಿಗೆ ಪಡೆಯಲು ಎಲ್ಲವನ್ನೂ ಮಾಡಬೇಕಾಗುತ್ತದೆ. ಇದನ್ನು ಧಿಕ್ಕರಿಸಿ ತನಗೆ ಅನ್ನಿಸಿದ್ದನ್ನು ಅದು ಮಾಡಿದಾಗ ಅದು ಚೇಷ್ಟೆ-ತುಂಟತನವಾಗಿಬಿಡುತ್ತದೆ.

ಹಾಗಾಗಿ ಈ ವಯಸ್ಸಿನ ಮಕ್ಕಳಿಗೆ ಸಿಗುವ ಸಂದೇಶ ಇದು: ಹಿರಿಯರಿಗೆ ಒಪ್ಪಿಗೆಯಾದ ಕೆಲಸ 'ಸರಿ'; ಒಪ್ಪಿಗೆಯಾಗದ ಕೆಲಸ 'ತಪ್ಪು'. ಆದರೆ ಈ ಮಕ್ಕಳು ಸರಿ-ತಪ್ಪುಗಳ ನಡುವೆ ವ್ಯತ್ಯಾಸ ಕಂಡು ಹಿಡಿಯುವುದಾದರೂ ಹೇಗೆ? ಈ ಬಗೆಯ ದಂದ್ವ ಭಾವನೆ ಮೂಡಿದಾಗ ಬಣ್ಣ ಹಚ್ಚುವ ಕೆಲಸವೂ 'ಅರ್ಥವಾಗುವುದಿಲ್ಲ' ಎಂಬ ಸ್ಥಿತಿಗೆ ಬಂದು ನಿಂತುಬಿಡುತ್ತದೆ.

ದೊಡ್ಡವರನ್ನು ಕೇಳಿ ಕೇಳಿ ಮಾಡುವಾಗ ಸಿಕ್ಕುವ ಮನ್ನಣೆ ತಾನೇ ನಿರ್ಧಾರ ತೆಗೆದುಕೊಂಡು ಮಾಡುವುದರಿಂದ ಸಾಧ್ಯವಾಗದಿರಬಹುದು. ದೊಡ್ಡವರ ಸಹಮತಗಳಿಸುವ ಸಲುವಾಗಿಯಾದರೂ ಅವರನ್ನು ಕೇಳಿ ಮಾಡಿಬಿಟ್ಟರೆ ಒಳ್ಳೆಯದಲ್ಲವೆ? ಅಷ್ಟೇ ಅಲ್ಲ, ಕೇಳಿ ಅನುಮತಿಯೊಂದಿಗೆ ಕಾರ್ಯ ನಿರ್ವಹಿಸಿದರೆ ದೊಡ್ಡವರ ಶಹಭಾಶ್‌ಗಿರಿಯ ಲಾಭವೂ ಇದೆ. ಕೇಳದೆ ಮಾಡದೆ ತಪ್ಪು ಮಾಡಿ ಬೈಗಳು ತಿನ್ನುವ ಬಾಲಬಾಲೆಯರೆದುರು ಶಹಭಾಶ್‌ಗಿರಿ ಗಳಿಸಿ ಬಿಗುಮಾನದಿಂದ ಬೀಗಬಹುದು ಕೂಡ! ಇದೆಲ್ಲ ನಾವು ಮಕ್ಕಳ ಮೇಲೆ ಅತಿಯಾಗಿ ಹೇರುವ ನಿಯಂತ್ರಣದ ಪರಿಣಾಮ.

ಈ ಬಗೆಯ ಅತಿಯಾದ ನಿಯಂತ್ರಣದಿಂದ ಮಗು ಎಳೆ ವಯಸ್ಸಿನಲ್ಲೆ ತನ್ನ ಸ್ವಂತಿಕೆಯನ್ನು ಬದಿಗಿಟ್ಟು ಯಾವುದರಿಂದ ಮನ್ನಣೆ ಸಿಗುತ್ತದೆಯೋ ಅದನ್ನು ಮಾಡಲು ಪ್ರಾರಂಭಿಸುತ್ತದೆ. ಹೀಗೆ ಹಲವಾರು ವರ್ಷಗಳ ಅಭ್ಯಾಸದಿಂದ ತನ್ನ 'ಸ್ವಂತಿಕೆ' ಎಂಬುದನ್ನು ಮಗು ಪೂರ್ಣವಾಗಿ ಕಳೆದುಕೊಳ್ಳುತ್ತದೆ. ತಾನು ಏನನ್ನಾದರೂ ಸ್ವತಂತ್ರವಾಗಿ ಸಾಧಿಸಬಲ್ಲೆ ಎಂಬ ಆತ್ಮವಿಶ್ವಾಸದ ವ್ಯಕ್ತಿಚಿತ್ರ ಮೂಡುವುದೇ ಇಲ್ಲ.

ತನಗೆ ಅರ್ಥವಾದರೂ ಅರ್ಥವಾಗಲಿಲ್ಲ ಎಂದು ಮೊದಲೇ ತಪ್ಪೊಪ್ಪಿಕೊಂಡು ಬಿಟ್ಟರೆ ಯಾವ ರಗಳೆಯೂ ಇರುವುದಿಲ್ಲ. ವಂದನಾ ತನಗೆ ಇಷ್ಟವಾದ ಬಣ್ಣ ಹಚ್ಚಿ ಖುಷಿ ಪಡಬಹುದಿತ್ತು. ಆದರೆ ಆತಂಕದ ದನಿಯಲ್ಲಿ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಳ್ಳುತ್ತಿದ್ದಾಳೆ. ಅವಳ ಅನುಭವದಲ್ಲಿ ಮಾಡಿದ ಪ್ರತಿ ತಪ್ಪಿಗೂ ಶಿಕ್ಷೆ ಸಿಕ್ಕಿರಬಹುದು; ಅಥವಾ ತಪ್ಪಾದರೂ ಚಿಂತೆಯಿಲ್ಲ, ನಿನಗೆ ಇಷ್ಟವಾದುದನ್ನು ಮಾಡು ಎಂದು ಹುರಿದುಂಬಿಸುವ ವ್ಯಕ್ತಿಗಳು ಅವಳ ಅನುಭವಕ್ಕೆ ಬರದೆ ಇರಬಹುದು. ಅಥವಾ

ಇವಳಿಗೆ ಅನುಭವ ನೀಡುತ್ತಿರುವ ವಾತಾವರಣದಲ್ಲಿ ಸ್ವಂತಿಕೆ ಕಳೆದುಕೊಂಡ, ಮುನ್ನೆಚ್ಚರಿಕೆ ಕ್ರಮಗಳ ಮೂಲಕ ದೊಡ್ಡವರ ಮನ್ನಣೆ ಪಡೆಯುತ್ತಿರುವ ಇತರ ಮಕ್ಕಳು ಆದರ್ಶಪ್ರಾಯವಾಗಿರಬಹುದು.

ಮಕ್ಕಳು ನಮಗಿಂತ ಭಿನ್ನವಾಗಿರಬಲ್ಲರು; ಅವರಿಗೆ ಅವರದೇ ಆದ ಅಭಿಪ್ರಾಯಗಳಿರಲು ಸಾಧ್ಯ. ಮತ್ತು ಸ್ವಂತ ಅಭಿಪ್ರಾಯ ಹೊಂದಲು ಅವರಿಗೆ ಸ್ವಾತಂತ್ರ್ಯವಿದೆ ಎಂಬ ಅಂಶವನ್ನು ನಾವು ಗೌರವಿಸಬೇಕು. ಮಗು ಏನೇ ಆದರೂ 'ನನ್ನ' ಎರಡನೇ ದರ್ಜೆಯ ನಕಲಾಗಬೇಕೆಂದು ಅಧ್ಯಾಪಕರು(ಹಿರಿಯರು) ಭಾವಿಸುತ್ತಾರೆ. ಅವರ ಸ್ವತಂತ್ರ ನಿಲುವುಗಳನ್ನು ನಾವು ಗೌರವಿಸದೆ ಅದು ನನ್ನ ನಿಲುವಿಗಿಂತ ಬೇರೆಯಾದರೆ ಖಂಡಿತ ತಪ್ಪು ಎಂಬ ತೀರ್ಮಾನಕ್ಕೆ ಬಂದುಬಿಡುತ್ತೇವೆ.

ಸೃಜನಶೀಲತೆಯ ಬಗ್ಗೆ ನೂರಾರು ಲೇಖನಗಳನ್ನು ಓದುವುದಕ್ಕಿಂತ, ಅದರ ಬಗ್ಗೆ ಬಿಸಿಬಿಸಿ ಚರ್ಚೆಗಳನ್ನು ಮಾಡುವುದಕ್ಕಿಂತ ಮಗುವಿನ ಸ್ವತಂತ್ರ ನಿಲುವುಗಳನ್ನು (ಅವು ಸರಿ ಇರಲಿ ಅಥವಾ ತಪ್ಪಿರಲಿ) ಗೌರವಿಸುವಷ್ಟು ಮುಕ್ತ ಮನಸ್ಸನ್ನು ನಾವು ಸಂಪಾದಿಸಿದರೆ ಸಾಕು, ನಮ್ಮ ಶಾಲೆಯ ಮಕ್ಕಳೆಲ್ಲ ಅದ್ಭುತ ಸೃಜನಶೀಲತೆಯನ್ನು ಪಡೆದುಬಿಡುತ್ತಾರೆ.

ಹಾಗಾದರೆ ಮಗು ನಂಬುವ ಭಾವಿಸುವ ಎಲ್ಲ ತಪ್ಪು ಕಲ್ಪನೆಗಳನ್ನೂ ಅಧ್ಯಾಪಕರು ಸರಿ ಎಂದು ಒಪ್ಪಿಕೊಂಡುಬಿಟ್ಟರೆ ಮಗುವಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೆ ಎಂಬ ಪ್ರಶ್ನೆ ಏಳುತ್ತದೆ. ಇದೊಂದು ಮುಖ್ಯವಾದ ಪ್ರಶ್ನೆಯೇ ಸರಿ. ಇಲ್ಲಿ ನಾವು ಒಪ್ಪಬೇಕಾಗಿರುವುದು ಅಭಿಪ್ರಾಯವನ್ನಲ್ಲ. ಮಗುವಿನ ನಿಲುವಿಗೆ ಗೌರವಕೊಟ್ಟು ತನ್ಮೂಲಕ ಅದರ ಆತ್ಮವಿಶ್ವಾಸವನ್ನು ಬೆಂಬಲಿಸುವ ನಡೆನುಡಿಯನ್ನು ನಾವು ರೂಢಿಸಿಕೊಳ್ಳುವುದು ಬಹು ಮುಖ್ಯ. ಮಗುವಿನ ತಪ್ಪು ಅಭಿಪ್ರಾಯವನ್ನು ಏಕಾಏಕಿ ಖಂಡಿಸದೆ ಅದರ ಆತ್ಮಗೌರವಕ್ಕೆ ಧಕ್ಕೆ ಬರದಂತೆ ಮುಕ್ತವಾಗಿ ವಿಷಯವನ್ನು ಬಿಡಿಸುತ್ತಾ ಹೋಗಬಹುದು. ಆಗ ಈ ಪ್ರಕ್ರಿಯೆ ಅಹಂಕಾರಕ್ಕೆ ಸಂಬಂಧಪಡುವುದಿಲ್ಲ; ಈ ಪ್ರಕ್ರಿಯೆ ಒಂದು ವಸ್ತುನಿಷ್ಠ ವಿಶ್ಲೇಷಣೆಗೆ ಸಂಬಂಧಪಟ್ಟಿದ್ದು ಎಂದು ಮಗುವಿಗೆ ವೇದ್ಯವಾಗುತ್ತಾ ಹೋಗುತ್ತದೆ. ಅಹಂಕಾರವೇ ಪ್ರಧಾನವಾದಾಗ ಸೋಲು-ಗೆಲುವಿನ ಪ್ರಶ್ನೆ ಅನಿವಾರ್ಯವಾಗಿ ಎದುರುನಿಲ್ಲುತ್ತದೆ. ಗುರು-ಶಿಷ್ಯರ ನಡುವಿನ ಕಲಿಕಾ ಪ್ರಕ್ರಿಯೆ ಅನ್ವೇಷಣಾ ಪಯಣದಂತಾದರೆ ಚಾರಣಕ್ಕೆ ಹೋದಷ್ಟು ಉಲ್ಲಾಸ, ಉತ್ಸಾಹ, ಸಾಹಸಗಳು ಮೇಳೈಸುತ್ತವೆ. ಈ ತರ್ಕ ಪಯಣದುದ್ದಕ್ಕೂ ಮೈನವಿರೇಳಿಸುವ ಹೊಸ ವಿಷಯಗಳು, ಅದ್ಭುತಗಳು ಮಗುವಿನ ಕಲ್ಪನೆಗಳಿಗೆ ಹೊಸ ಹೊಸ ಗರಿಗಳನ್ನು ನೀಡುತ್ತವೆ. ಚಿಂತನೆಗಳು ಅಹಂಕಾರರಹಿತವಾಗಿ ಪರಸ್ಪರ ಪೂರಕವಾದಾಗ 'ತನ್ನ ನಿಲುವು' 'ಅವನ ನಿಲುವು' ಎಂಬ ಭೇದಗಳಳಿಯುತ್ತವೆ. ಮಗುವಿಗೆ ಅಥವಾ ವಿದ್ಯಾರ್ಥಿಗೆ ಅಧ್ಯಾಪಕನ ಮೇಲೆ ಮೆಚ್ಚುಗೆ, ಗೌರವ, ಜೊತೆಗೆ ಪ್ರೀತಿ ಸಲುಗೆಗಳೂ ಮೂಡುತ್ತವೆ.

ನಮ್ಮ ಶಾಲಾ ಕಲಿಕೆಯಿಂದ ನಾವು ನಿರೀಕ್ಷಿಸಬೇಕಾದ್ದು ಇದನ್ನು. ಆಗ ಬಣ್ಣ ಹಚ್ಚುವುದು ಒಂದು ಸಮಸ್ಯೆಯಾಗುವುದಿಲ್ಲ. ಅಷ್ಟೇ ಏಕೆ $E=MC^2$ ಕೂಡ ಸಮಸ್ಯೆಯಾಗುವುದಿಲ್ಲ.

**ಪಾಕಿಸ್ತಾನದಲ್ಲಿ ಹೀಗೊಂದು ಘಟನೆ**

ಪಾಕಿಸ್ತಾನದ ಕರಾಚಿಯಲ್ಲಿರುವ ಅಧ್ಯಾಪಕರ ಸಂಪನ್ಮೂಲ ಕೇಂದ್ರದಲ್ಲಿ 'ಒಬ್ಬ ಪುಟ್ಟ ಹುಡುಗ' (One Little Boy) ಎಂಬ ಕವಿತೆಯನ್ನು ತಮ್ಮಲ್ಲಿಗೆ ಬರುವವರೆಲ್ಲರಿಗೂ ಓದಿ ಹೇಳುತ್ತಾರೆ. ಈ ಪದ್ಯವನ್ನು ಕೇಳಿಸಿಕೊಂಡವರು ಕವಿತೆಯ ಪರಿಣಾಮದಿಂದ ಹೊರಬರಲು ಕೆಲವು ನಿಮಿಷಗಳನ್ನೇ ತೆಗೆದುಕೊಳ್ಳುತ್ತಾರಂತೆ. ಈ ಕವಿತೆಯ ಸಂಕ್ಷಿಪ್ತ ಸಾರಾಂಶ ಹೀಗಿದೆ.

ಒಮ್ಮೆ ಒಬ್ಬ ಚಿಕ್ಕ ಹುಡುಗ ಶಾಲೆಗೆ ಹೋದ.
ದೊಡ್ಡದಾದ ಶಾಲೆ, ಪಾಪ ಹುಡುಗ ಬಹಳ ಚಿಕ್ಕವನು.
ತರಗತಿಯಲ್ಲಿ ಹೋಗಿ ಕುಳಿತಮೇಲೆ ಶಾಲೆ ಅಷ್ಟು ದೊಡ್ಡದಾಗಿ ಕಾಣಲಿಲ್ಲ.
ಅವನಿಗೆ ಸಂತೋಷವಾಯಿತು.
ಒಂದು ದಿನ ಬೆಳಿಗ್ಗೆ ಮಿಸ್ ಹೇಳಿದರು:
'ಮಕ್ಕಳೇ ಇಂದು ನಾವು ಬಣ್ಣ ಬಣ್ಣದ ಚಿತ್ರ ಬರೆಯೋಣ'.
ಹುಡುಗನಿಗೆ ಆನಂದವೋ ಆನಂದ.
ತಾನು ತಂದ ಬಣ್ಣದ ಕ್ರೆಯಾನ್‌ಗಳನ್ನು ನೆಲದ ಮೇಲೆ ಹರಡಿದ.
ಬಿಳಿ ಹಾಳೆಯನ್ನು ತೆಗೆದು ಹರಡಿದ. ಜೊತೆಗೆ ಹುಲಿ ಸಿಂಹ
ಹಸು ಕೋಳಿಮರಿ ದೋಣಿ ಹಾಯಿ ಹಡಗು
ಹೀಗೆ ಏನೆಲ್ಲ ಚಿತ್ರಗಳು ಮನದ ಹಾಳೆಯ ಮೇಲೆ ಜೀವಂತವಾಗಿ ಹಾರಾಡಿದವು.
ಹುಡುಗ ಇನ್ನೇನು ಬರೆಯಬೇಕೆಂದಿದ್ದ,
ಶಾಲೆಯ ಮೂಲೆಯಿಂದ ಗುದ್ದಿದಂತೆ ಎದ್ದಿತು ಆದೇಶ –
'ಒಂದು ನಿಮಿಷ ತಡೆಯಿರಿ. ನಾನು ಹೇಳುವವರೆಗೂ ಬರೆಯಬೇಡಿ'
ಮತ್ತೆ ಮಿಸ್ ಹೇಳಿದರು 'ಮಕ್ಕಳೇ ನಾವೆಲ್ಲ ಹೂವಿನ ಚಿತ್ರ ಬರೆಯೋಣ'.
'ಹೌದಲ್ಲ'. ಬಾಲಕ ಭಾವಿಸಿಕೊಂಡ. ಒಂದು ಸುಂದರವಾದ ಹೂವು'.
ಬರೆಯಲು ಶುರು ಮಾಡಿಯೇ ಬಿಟ್ಟ
ನಸುಗುಲಾಬಿಯ. ಕಿತ್ತಳೆ ಬಣ್ಣದ. ನೀಲಿ ಬಣ್ಣದ. ಹೀಗೆ ಬಣ್ಣ ಬಣ್ಣದ

ಹೂಗಳನ್ನು ಬರೆದೇಬಿಟ್ಟ.
ಮತ್ತೆ ಅದೇ ಧ್ವನಿ
ಮಿಸ್ ಹೇಳಿದರು – 'ಅವಸರ ಮಾಡಬೇಡಿ, ಸ್ವಲ್ಪ ತಾಳಿ,
ಹೇಗೆ ಬರೆಯಬೇಕೆಂದು ನಾ ಹೇಳಿಕೊಡುತ್ತೇನೆ'.
'ಮಕ್ಕಳೇ, ಇಲ್ಲಿ ನೋಡಿ, ಕೆಂಪು ಗುಲಾಬಿಗೆ ಹಸಿರು ಬಣ್ಣದ ತೊಟ್ಟು ಇರಬೇಕು, ಹೀಗೆ'.
ಬಾಲಕ ತಾನು ಬರೆದ ಚಿತ್ರ ನೋಡಿದ; ಅದು ಚೆನ್ನಾಗಿಯೇ ಇದೆ ಅನಿಸಿತು ಅವನಿಗೆ.
ಆದರೆ ಹಾಗೇನೂ ಅವನು ಹೇಳುವ ಗೋಜಿಗೆ ಹೋಗಲಿಲ್ಲ.
ಹಾಳೆ ತಿರುವಿ ಹಾಕಿ ಮಿಸ್ ತೋರಿಸಿಕೊಟ್ಟಂತೆ ಚಿತ್ರ ಬರೆದ–
ಕರ್ತವ್ಯ ದೃಷ್ಟಿಯಿಂದ.
ಮತ್ತೊಂದು ದಿನ ತರಗತಿಯಲ್ಲಿ ಮಿಸ್ ಹೇಳಿದರು–
'ಮಕ್ಕಳೇ, ಇಂದು ಮಣ್ಣಿನಲ್ಲಿ ನಾವು ಆಟ ಆಡೋಣ, ಏನಾದರೂ ಮಾಡೋಣ'.
ಈ ಪುಟ್ಟ ಹುಡುಗನಿಗೆ ಖುಷಿಯೋ ಖುಷಿ.
ಇದಕ್ಕಿಂತ ಅದ್ಭುತವಾದದ್ದು ಏನು ತಾನೆ ಇದೆ?
ಹಾವು ಮಾಡಬಹುದು, ಆನೆ ಮಾಡಬಹುದು, ಇಲಿ ಮಾಡಬಹುದು,
ಕಾರು ಬಸ್ಸುಗಳನ್ನು ಮಾಡಬಹುದೆಂದು ಭಾವಿಸುತ್ತಿದ್ದ.
ಆದರೆ ಅದೇ ಧ್ವನಿ
ಮಿಸ್ ಹೇಳಿದರು – 'ಮಕ್ಕಳೇ, ಸ್ವಲ್ಪ ತಡೆಯಿರಿ, ಇಂದು ನಾವು ಮಣ್ಣಿನಿಂದ ಪಾತ್ರೆ ಮಾಡೋಣ'.
ಬಾಲಕ ಭಾವಿಸಿದ– 'ಹೌದಲ್ಲ, ನಾನು ನಮ್ಮ ಮನೆಯಲ್ಲಿರುವ ಆ ಬೋಗಣಿ – ಅದನ್ನು ಮಾಡುತ್ತೇನೆ,
ಚಮಚ ಮಾಡುತ್ತೇನೆ, ಹೂಜಿ ಮಾಡುತ್ತೇನೆ'
ಬೇಗಬೇಗನೆ ಮಾಡಿಯೇ ಬಿಟ್ಟ
ಆದರೆ ಅದೇ ಧ್ವನಿ
'ತಡೆಯಿರಿ, ಪಾತ್ರೆ ಹೇಗೆ ಮಾಡಬೇಕೆಂದು ನಾನು ಮಾಡಿತೋರಿಸುತ್ತೇನೆ'.
ಮಿಸ್ ಉದ್ದನಾದ ಒಂದು ಕೊಳಗದಂತಹ ಪಾತ್ರೆ ಮಾಡಿತೋರಿಸಿದರು.
ಬಾಲಕ ತಾನು ಮಾಡಿದ್ದ ಪಾತ್ರೆಯನ್ನೂ ಮಿಸ್ ಮಾಡಿದ್ದ ಪಾತ್ರೆಯನ್ನೂ ನೋಡಿದ.

ಅವನಿಗೆ ತಾನು ಮಾಡಿದ ಪಾತ್ರೆ ಇಷ್ಟವಾಯಿತು.
ಆದರೆ ಅದನ್ನು ಮಿಸ್‌ಗೆ ಹೇಳಲಿಲ್ಲ;
ಮಿಸ್ ಮಾಡಿ ತೋರಿಸಿದ ಪಾತ್ರೆಯನ್ನೇ ಮಾಡಿದ.
ಹೀಗೆ
ಈ ಪುಟ್ಟ ಹುಡುಗ ಕಾಯುವುದನ್ನು, ಮಿಸ್ ಮಾಡಿದ್ದನ್ನೇ ನೋಡುವುದನ್ನು,
ನೋಡಿಕೊಂಡೇ ಮಾಡುವುದನ್ನು ಕಲಿತುಕೊಂಡ.
ಜೊತೆಗೆ ಸ್ವಂತ ನಿರ್ಧಾರಗಳ ಗೊಡವೆ ಬೇಡೆಂದು ಕೈಬಿಟ್ಟ.
ಹೀಗಿರುವಾಗ ಬಾಲಕನ ತಂದೆತಾಯಿಗಳು ಮತ್ತೊಂದು ಊರಿಗೆ ವರ್ಗವಾಗಿ ಹೋದರು.
ಅಲ್ಲಿಯೂ ಈ ಪುಟ್ಟ ಹುಡುಗ ದೊಡ್ಡದೊಂದು ಶಾಲೆಗೆ ಸೇರಿದ.
ಆ ಶಾಲೆಯಲ್ಲಿ ಒಂದು ದಿನ ಮಿಸ್ ಹೇಳಿದರು –
'ಮಕ್ಕಳೇ, ನಾವು ಇಂದು ಬಣ್ಣದ ಚಿತ್ರ ಬಿಡಿಸೋಣ'.
ಬಾಲಕನಿಗೆ ಸಂತೋಷವಾಯಿತು.
ಬಣ್ಣದ ಕ್ರೆಯಾನ್‌ಗಳನ್ನು ತೆರೆದ ಬಿಳಿ ಹಾಳೆಗಳನ್ನು ಹರಡಿದ;
ಮಿಸ್ ಹೇಳುವುದನ್ನು ಕೇಳಲು ಕಾಯುತ್ತಿದ್ದ.
ಆದರೆ ಮಿಸ್ ಏನನ್ನು ಹೇಳಲಿಲ್ಲ.
ಮೌನವಾಗಿ ಕೊಠಡಿಯುದ್ದಕ್ಕೂ ನಡೆದಾಡುತ್ತಿದ್ದರು.
ನಮ್ಮ ಪುಟ್ಟ ಬಾಲಕನ ಬಳಿ ಬಂದು ಕೇಳಿದರು –
'ಮಗು, ನೀನು ಚಿತ್ರ ಬಿಡಿಸುವುದಿಲ್ಲವೆ?'
'ಏನು ಚಿತ್ರ ಬಿಡಿಸಲಿ'?
'ಯಾವ ಚಿತ್ರವನ್ನು ಬೇಕಾದರೂ ಸರಿ, ನಿನಗಿಷ್ಟವಾದ ಚಿತ್ರ'.
'ಹೇಗೆ ಚಿತ್ರ ಬಿಡಿಸಲಿ'?
'ನಿನಗೆ ಇಷ್ಟ ಬಂದ ಚಿತ್ರ ಬಿಡಿಸು'
'ಯಾವ ಬಣ್ಣ ಹಚ್ಚಲಿ?
'ನಿನಗಿಷ್ಟ ಬಂದ ಬಣ್ಣ ಹಚ್ಚು'.
'ನನಗಂತೂ ಅರ್ಥವಾಗುತ್ತಲೇ ಇಲ್ಲ' ಎಂದು ಹೇಳುತ್ತ ಬಾಲಕ ಯೋಚಿಸಿದ;
ಅವನಿಗೆ ತಕ್ಷಣ ನೆನಪು ಬಂತು:
ಅವನೊಂದು ಚಿತ್ರ ಬರೆದ – "ಕೆಂಪು ಬಣ್ಣದ ಗುಲಾಬಿ ಹಸಿರು ತೊಟ್ಟು"

ವಂದನಾಳ ಬಗ್ಗೆ ನಡೆದ ಸತ್ಯ ಘಟನೆ, ಆ ಸಂಬಂಧವಾದ ವಿಚಾರಸರಣಿಯನ್ನು 'ಟೀಚರ್' ಪತ್ರಿಕೆಯಲ್ಲಿ ನಾನು ಪ್ರಕಟಿಸಿ ವರ್ಷಗಳೇ ಕಳೆದಿತ್ತು. ಆಗ ನನಗೆ ಈ ಪಾಕಿಸ್ತಾನದ ಕರಾಚಿ ಅಧ್ಯಾಪಕರ ಸಂಪನ್ಮೂಲದ ಕವಿತೆ ಓದಲು ಸಿಕ್ಕಿತು. ಈ ಎರಡರ ನಡುವೆ ಇರುವ ಸಾಮ್ಯದಿಂದಲೇ ನಾವು ನಮ್ಮ ದೇಶದಾದ್ಯಂತ ಅಥವಾ ಭಾರತ ಉಪಖಂಡದಾದ್ಯಂತ ತರಗತಿಗಳ ಸರಾಸರಿ ಸ್ವರೂಪವನ್ನು ಊಹಿಸಬಹುದು.

**ಪಠ್ಯ ಪುಸ್ತಕಗಳು ಮತ್ತು ಶಿಶುಕೇಂದ್ರಿತ ಶಿಕ್ಷಣ**

ನೆದರ್‌ಲ್ಯಾಂಡ್ ದೇಶದ ಶಿಕ್ಷಕರ ಮಾರ್ಗದರ್ಶಿ ಯೋಕ್ ಎಂಬ ಮಹಿಳೆ ನಮ್ಮ ಶಾಲೆಗೆ ಸ್ವಯಂಸೇವಕಿಯಾಗಿ ಬಂದಿದ್ದ. ನೆದರ್‌ಲ್ಯಾಂಡ್‌ನಲ್ಲಿ ಇವರು ಶಿಕ್ಷಕರ ಸಲಹೆಗಾರರಾಗಿ (Teacher Counselor) ಕೆಲಸ ಮಾಡುತ್ತಾರೆ. ಇವರು ತಮಗೆ ನಿಗದಿಯಾಗಿರುವಷ್ಟು ಜನ ಅಧ್ಯಾಪಕರ ತರಗತಿಗಳನ್ನು ವೀಕ್ಷಿಸಿ ಅವರಿಗೆ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಈಕೆ ನಮ್ಮ ಶಾಲೆಯ ತರಗತಿಗಳನ್ನು ಮುಖ್ಯವಾಗಿ – ಗಣಿತ, ಇಂಗ್ಲೀಷ್ ತರಗತಿಗಳನ್ನು ವೀಕ್ಷಿಸಿದರು. ಅನಂತರ ಪೂರ್ವ ಸಿದ್ಧತೆಯಿಲ್ಲದೆ ಗಣಿತದ ಅಧ್ಯಾಪಕನೊಬ್ಬ ತರಗತಿಗೆ ಹೋಗಿ ದಾರ, ಸೂಜಿ, ಮಣಿಗಳು ಎಂದು ಪರದಾಡಿದ ರೀತಿಯನ್ನು ತಮಾಷೆಯಾಗಿ ನಮ್ಮ ಎಲ್ಲ ಅಧ್ಯಾಪಕರ ಎದುರು ಅಭಿನಯಿಸಿ ನಮ್ಮನ್ನೆಲ್ಲ ನಗೆಗಡಲಲ್ಲಿ ತೇಲಿಬಿಟ್ಟಳು. ಆ ಗಣಿತದ ಅಧ್ಯಾಪಕನಂತೂ ಹೊರಗೆ ನಗುತ್ತಿದ್ದರೂ ಒಳಗೇ ಬಹಳ ಪೇಚಾಡಿಕೊಂಡಂತೆ ಕಾಣುತ್ತಿದ್ದ. ಪೂರ್ವಸಿದ್ಧತೆ ಮಾಡಿಕೊಳ್ಳದೆ, ಎಂದರೆ ಚಟುವಟಿಕೆಗಳನ್ನು ಕೈಗೊಳ್ಳಲು ಬೇಕಾಗುವ ವಸ್ತುಗಳನ್ನು ತೆಗೆದುಕೊಳ್ಳದೆ, ತರಗತಿಗೆ ಯಾರೂ ಹೋಗಬಾರದು ಎಂದು ಬಹುಶಃ ನಮ್ಮ ಎಲ್ಲ ಅಧ್ಯಾಪಕರು ನಿರ್ಧರಿಸಿದರು ಎಂದು ಕಾಣುತ್ತದೆ.

ಯೋಕ್ ಹೇಳಿದ ಮತ್ತೊಂದು ವಿಷಯ ನಮ್ಮ ಅಧ್ಯಾಪಕರಿಗೆಲ್ಲ ಅಚ್ಚರಿ ಮೂಡಿಸಿತು. ನಮ್ಮ ಪಠ್ಯಪುಸ್ತಕಗಳನ್ನು ಕಂಡು ಹೇಳಿದಳು: 'This is too much of spoon feeding'. ಆಕೆಯ ಪ್ರಕಾರ ಪಠ್ಯಪುಸ್ತಕಗಳ ಅಗತ್ಯವೇ ಇಲ್ಲ. ಅಧ್ಯಾಪಕನಾದವನಿಗೆ ನಿಗದಿತವಾದ ಪಠ್ಯಕ್ರಮದ ವ್ಯಾಪ್ತಿ ಏನು ಎಂದು ತಿಳಿದಿರುತ್ತದೆ. ಎಂದರೆ ಆಯಾ ತರಗತಿಯ ಆಯಾ ವಯಸ್ಸಿನ ಮಕ್ಕಳು ಪಠ್ಯಕ್ರಮದ ಆಧಾರದ ಮೇಲೆ ಏನನ್ನು ಗ್ರಹಿಸಬೇಕು, ಏನನ್ನು ಅರಿಯಬೇಕು ಎಂಬ ಬಗ್ಗೆ ಸ್ಪಷ್ಟ ತಿಳುವಳಿಕೆ ಇರುತ್ತದೆ. ಹಾಗಾಗಿ ತಮಗೆ ಬೇಕಾದ ಪಠ್ಯವನ್ನು ಅಧ್ಯಾಪಕರು ತಾವೇ ಸ್ವಯಂ ತಯಾರಿಸಿಕೊಳ್ಳಬೇಕು. ಏಕರೂಪದ ಪಠ್ಯಪುಸ್ತಕಗಳು ತರಗತಿಯ ಸಾಧ್ಯತೆಗಳನ್ನು ಮೊಟಕುಗೊಳಿಸುತ್ತವೆ ಎಂಬುದು ಆಕೆಯ ಅಭಿಪ್ರಾಯ. ನೆದರ್‌ಲ್ಯಾಂಡ್ ದೇಶದ ಅಧ್ಯಾಪಕರು ಪಠ್ಯಪುಸ್ತಕಗಳ ನೆರವಿಲ್ಲದೆ ತರಗತಿಗಳನ್ನು ನಡೆಸುತ್ತಾರೆಂದು ಯೋಕ್ ನಮಗೆ ಹೇಳಿದಳು. ಅವರು ಕೆಲವು ರೆಫರೆನ್ಸ್ ಪುಸ್ತಕಗಳನ್ನು ಬಳಸಿ ತಮಗೆ ಬೇಕಾದ ಪಠ್ಯವನ್ನು ತಾವೇ

ತಯಾರಿಸಿಕೊಳ್ಳುತ್ತಾರಂತೆ. ಹೀಗೆ ಮಾಡಬೇಕಾದರೆ ಅಧ್ಯಾಪಕನಾದವನು ಆಳವಾಗಿ ಅಭ್ಯಾಸಮಾಡಿ, ವಿಷಯವನ್ನು ತಾನೇ ಗ್ರಹಿಸಿ ಮಕ್ಕಳ ಅಭಿರುಚಿಗೆ ತಕ್ಕಂತೆ ತನ್ನ ಪಠ್ಯವನ್ನು ತಾನೇ ತಯಾರಿಸುತ್ತಾನೆ. ಇಂತಹ ತರಗತಿಗಳಲ್ಲಿ ಮಗು ಒಂದು ವಿಷಯವನ್ನು ಗ್ರಹಿಸಲು ಹಲವಾರು ಪರ್ಯಾಯ ಪಠ್ಯಗಳನ್ನು ತಯಾರು ಮಾಡಬಹುದು. ಜೊತೆಗೆ ಚಟುವಟಿಕೆಗಳ ಮೂಲಕ ಮಗುವಿಗೆ ಅರ್ಥ ಮಾಡಿಸಲು ಪ್ರಯತ್ನಿಸಬಹುದು. ಮಗುವಿನ ಪೂರ್ವಜ್ಞಾನವನ್ನು ಆಧಾರವಾಗಿಟ್ಟುಕೊಂಡು ಪಠ್ಯ ತಯಾರಾದರೆ, ಚಟುವಟಿಕೆಗಳು ರೂಪುಗೊಂಡರೆ ಮಗು ಹೊಸದನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಒಟ್ಟಿನಲ್ಲಿ ಮಗುವಿನ ಅಭಿರುಚಿ, ಗ್ರಹಣಶಕ್ತಿಗನುಗುಣವಾಗಿ ಅನೇಕ ಪರ್ಯಾಯ ಪಠ್ಯಗಳು ಸಾಧ್ಯ. ಇಂತಹ ತರಗತಿಯ ವಾತಾವರಣದಲ್ಲಿ ಕಲಿಕಾ ಭಿನ್ನತೆಯನ್ನು ಸಮರ್ಥವಾಗಿ ನಿರ್ವಹಿಸಬಹುದು. ನಿಧಾನ ಕಲಿಕೆಯ ಮಕ್ಕಳು ನಿರ್ಲಕ್ಷ್ಯಕ್ಕೆ ಗುರಿಯಾಗುವುದಿಲ್ಲ. ಅಥವಾ ಜಾಣ ಮಕ್ಕಳು ಮಾತ್ರ ಕಲಿತು ಮುನ್ನಡೆದು ಅನೇಕರು ಹಿಂದುಳಿಯುವುದಿಲ್ಲ. ಅಥವಾ ಸಾಮರ್ಥ್ಯ ಹೆಚ್ಚಾಗಿರುವ ಮಕ್ಕಳಿಗೆ ಬೇಸರವಾಗದಂತೆ ಹೆಚ್ಚಿನ ಸಾಮರ್ಥ್ಯದೆಡೆಗೆ ಮುಂದುವರೆಯಲು ಅವಕಾಶವಿರುತ್ತದೆ. ಈ ಪ್ರಕ್ರಿಯೆಯಲ್ಲಿ ಹಿಂದುಳಿದ ಇತರ ಮಕ್ಕಳಿಗೆ ತೇಜೋವಧೆ ಆಗದಂತೆ ಅಧ್ಯಾಪಕನಾದವನು ಸುಲಭ ಕ್ರಮಗಳನ್ನು ಅನುಸರಿಸಬಹುದು.

ಈ ಸಂದರ್ಭದಲ್ಲಿ ಗಮನಿಸಬೇಕಾದ ಎರಡು ಅಂಶಗಳೆಂದರೆ, ಒಂದು – ಅಧ್ಯಾಪಕನಾದವನು ಸೃಜನಶೀಲನಾಗಿರುವ ಮೂಲಕ ಮಕ್ಕಳ ಬೇರೆಬೇರೆ ಸುಪ್ತ ಸಾಮರ್ಥ್ಯಗಳು ವಿಕಾಸವಾಗುವಂತೆ ಶ್ರಮಿಸುತ್ತಾನೆ ಎನ್ನುವುದು. ಎರಡನೆಯದು, ಶಿಶುಕೇಂದ್ರಿತ ಶಿಕ್ಷಣದ ಆಶಯ. ಹೀಗೆ ಮಗುವಿಗೆ ಅನುಗುಣವಾಗಿ ಪಠ್ಯ ತಯಾರಿಸುವ ಪ್ರಯತ್ನದ ಹಿಂದೆ ಮಗುವನ್ನು ಪುಸ್ತಕಕ್ಕಿಂತ ಗಂಭೀರವಾಗಿ ಪರಿಗಣಿಸುವ ವಿಶಾಲ ದೃಷ್ಟಿಯಿದೆ. ಮಗು ತರಗತಿಯ ಕೇಂದ್ರಬಿಂದುವಾಗಿ ಅದಕ್ಕೆ ಸಿಗಬೇಕಾದ ಸಕಲ ಆದ್ಯತೆಗಳು ದೊರೆಯಬೇಕೆಂಬ ಆಶಯವಿದೆ.

ಆದರೆ ನಮ್ಮಲ್ಲಿ ಏಕರೂಪದ ಪಠ್ಯಪುಸ್ತಕಗಳು ಉಪಯೋಗದಲ್ಲಿವೆಯಲ್ಲ? ನಾವೇನು ಮಾಡಬೇಕು? ಈ ಪ್ರಶ್ನೆಗೆ ಸುಲಭವಾದ ಉತ್ತರ ಇದೆ. ಈಗಿನ ಪಠ್ಯಪುಸ್ತಕಗಳು ಹಿಂದೆ ಇದ್ದ ಪಠ್ಯಪುಸ್ತಕಗಳಿಗಿಂತ ಉತ್ತಮವಾಗಿವೆ. ಗಾಂಧೀಜಿಯವರ ಕಾಲದಲ್ಲಿ ಪಠ್ಯಪುಸ್ತಕಗಳು ದಿನನಿತ್ಯದ ಜೀವನಕ್ಕೆ ಎಳ್ಳಷ್ಟೂ ಸಂಬಂಧಪಡುವುದಿಲ್ಲ ಎಂಬ ಕಾರಣಕ್ಕೆ ಗಾಂಧೀಜಿ ಹೇಳುತ್ತಿದ್ದರು: 'ಎಲ್ಲವನ್ನೂ ನನಗೇ ಬಿಟ್ಟರೆ ನಾನು ಎಲ್ಲ ಪಠ್ಯಪುಸ್ತಕಗಳನ್ನು ಸುಟ್ಟುಹಾಕಿಬಿಡುತ್ತಿದ್ದೆ.' ಆದರೆ ಇಂದಿನ ದಿನಗಳಲ್ಲಿ ಸಾಕಷ್ಟು ಪರಿಣತರು ಪ್ರಯತ್ನ ಪಟ್ಟು ಪಠ್ಯಪುಸ್ತಕಗಳನ್ನು ಆದಷ್ಟು ಮಗುವಿಗೆ ಸಮೀಪ ಕೊಂಡೊಯ್ದಿದ್ದಾರೆ. ಆದರೂ ಈ ಯಾವ ಪಠ್ಯಪುಸ್ತಕವೂ ಸೃಜನಶೀಲ ಅಧ್ಯಾಪಕನೊಬ್ಬ ತನ್ನ ತರಗತಿಗೆ ಅನುಗುಣವಾಗಿ ಬಳಸುವಷ್ಟು ವ್ಯಾಪ್ತಿಯನ್ನು ಪಡೆದಿರುವುದಿಲ್ಲ. ಆದ್ದರಿಂದ ಪಠ್ಯಪುಸ್ತಕಗಳಿದ್ದರೂ ಅವನು

ತನ್ನ ತರಗತಿಗನುಗುಣವಾಗಿ ಪೂರಕ ಸಾಮಗ್ರಿಗಳನ್ನು ತಯಾರು ಮಾಡಲೇಬೇಕು. ಇದು ಚಟುವಟಿಕೆಗೆ ಸಂಬಂಧಪಟ್ಟ ವಸ್ತುವಾಗಿರಬಹುದು ಅಥವಾ ಅಗತ್ಯವಾದ ಸಾಹಿತ್ಯವಾಗಿರಬಹುದು ಅಥವಾ ಅಭ್ಯಾಸದ ಹಾಳೆಗಳಾಗಿರಬಹುದು. ತರಗತಿಯಲ್ಲಿ ಮಕ್ಕಳನ್ನು ಗಂಭೀರವಾಗಿ ಪರಿಗಣಿಸುವ ಅಧ್ಯಾಪಕರು ತಮ್ಮ ತರಗತಿಯ ಅಗತ್ಯಗಳನ್ನು ತಾವೇ ಪೂರೈಸಿಕೊಳ್ಳಬಲ್ಲರು.

ಶಿಶುಕೇಂದ್ರಿತ ಶಿಕ್ಷಣದ ಆಶಯದ ಹಿಂದೆ ಒಂದು ಸಮಗ್ರ ಜೀವನದೃಷ್ಟಿ ಇದೆ. ನಾವು ಹಿಂದೆ ಚರ್ಚಿಸಿದ ಅಂಶ – ವಸ್ತುಗಳಿಗಿಂತ ಮನುಷ್ಯನೇ ಮುಖ್ಯ, ಹಣ ಗಳಿಸುವುದಕ್ಕಿಂತ ಮನುಷ್ಯನ ಬದುಕು ಮುಖ್ಯ ಎಂಬ ಅರಿವು– ಈ ಜೀವನದೃಷ್ಟಿಯ ಕೇಂದ್ರವಾಗಿರುತ್ತದೆ. ಹಾಗಾಗಿ ಈ ಶಿಕ್ಷಣ ಜೀವನದ ಸಿದ್ಧತೆಗಳಿಗಿಂತ ಅನುದಿನದ ಜೀವನಕ್ಕೆ ಒತ್ತು ಕೊಡುತ್ತದೆ, ಒತ್ತು ಕೊಡಬೇಕು. ಈ ಜೀವನದೃಷ್ಟಿಯುಳ್ಳ ಅಧ್ಯಾಪಕ ಕೇವಲ ತನ್ನ ಮಾತುಗಳು ಧ್ವನಿಸುವ ಅರ್ಥಕ್ಕಿಂತ ತನ್ನ ಇರುವಿಕೆಯಿಂದಾಗಿಯೇ ಮಗುವಿನ ಮೇಲೆ ಗಾಢ ಪ್ರಭಾವ ಬೀರುತ್ತಾನೆ. 'ಮಾತುಮನಂಗಳಿಂದತ್ತತ್ತ ಮೀರಿದ ಸಾತಿಶಯದ ನಿರ್ಮಲ ನಿರುಪಾಧಿಕ ಜ್ಯೋತಿ' ಬೆಳಗಿಸುತ್ತಾನೆ. ಆಗ ಕತ್ತಲೆಯೆಂಬುದು ಕವಿಯಲಾರದು. ಈ ಅರ್ಥದಲ್ಲಿ ಪ್ರತಿಯೊಬ್ಬ ಅಧ್ಯಾಪಕನೂ ಪಠ್ಯಪುಸ್ತಕದ ಪರಿಮಿತಿಯನ್ನು ಗುರುತಿಸಿ ಪುಸ್ತಕದಾಚೆಯ ಸಾಧ್ಯತೆಯನ್ನು ಕಂಡುಕೊಳ್ಳಬೇಕು.

## ಶಿಶುಕೇಂದ್ರಿತ ಶಿಕ್ಷಣ ಮತ್ತು ತರಗತಿಯ ಭಾಷಾ ಮಾಧ್ಯಮ

ಇಂಗ್ಲಿಷ್–ಕನ್ನಡ ಮಾಧ್ಯಮ ಸಂಬಂಧವಾಗಿ ಚರ್ಚೆ ನಡೆದಿತ್ತು. ಭಾಷೆಯ ಕುರಿತಾಗಿ ವಿದ್ವಾಂಸರು ಏನೆನ್ನುತ್ತಾರೆ, ಪ್ರಾಥಮಿಕ ಹಂತದಲ್ಲಿ ಯಾವ ಭಾಷೆಯನ್ನು ಬಳಸಿದರೆ ಮಗುವಿನ ಕಲಿಕೆ ಉತ್ತಮವಾಗುತ್ತದೆ ಎಂಬಿವೇ ವಿಚಾರ ಚರ್ಚೆಗೆ ಗ್ರಾಸವಾಗಿತ್ತು. ಈ ಸಂದರ್ಭದಲ್ಲಿ ನನ್ನ ಮಿತ್ರ ಶಿವಾನಂದ ಹೊಂಬಳ ಅವರು ಕೇಳಿದರು: 'ಅದೆಲ್ಲ ಸರಿ, ಆದರೆ ಮಗುವಿಗೆ ಯಾವ ಭಾಷೆಯಲ್ಲಿ ಕಲಿಯಲು ಇಷ್ಟ ಎಂದು ಮಕ್ಕಳನ್ನು ಕೇಳಿದ್ದೇವೆಯೇ?' ಮಕ್ಕಳನ್ನು ಸ್ವತಂತ್ರ ವ್ಯಕ್ತಿತ್ವವುಳ್ಳ ವ್ಯಕ್ತಿಗಳು ಎಂದು ನಾವು ಪರಿಗಣಿಸುವುದೇ ಇಲ್ಲ. ಹಾಗಾಗಿ ಮಗುವಿನ ಆಯ್ಕೆ, ಇಷ್ಟ ಅನಿಷ್ಟಗಳನ್ನು, ಅದರ ನೋವು ಆತಂಕಗಳನ್ನು ನಾವು ಗಂಭೀರವಾಗಿ ಪರಿಗಣಿಸುವುದೇ ಇಲ್ಲ. 'ಮಗುವಿಗೆ ಏನೂ ತಿಳಿಯುವುದಿಲ್ಲ' ಎಂದು ಹೇಳುತ್ತ ದೊಡ್ಡವರೇ ಮಗುವಿನ ಬಗ್ಗೆ ಎಲ್ಲ ಆಯ್ಕೆಗಳನ್ನು, ನಿರ್ಧಾರಗಳನ್ನು ಮಾಡಿಬಿಡುತ್ತೇವೆ. ಶಿಶುಕೇಂದ್ರಿತ ಶಿಕ್ಷಣದ ಬಗ್ಗೆ ನಾವು ಚರ್ಚಿಸುತ್ತಿರುವಾಗ ಬಹುಶಃ ಈ ವಿಷಯ ಬಹಳ ಮುಖ್ಯವಾಗುತ್ತದೆ. ಭಾಷೆಯ ವಿಷಯದಲ್ಲಿ ಮಗುವಿನ ಆಯ್ಕೆ ಯಾವುದು, ಯಾವ ಭಾಷೆ ಮಗುವಿಗೆ ಆತಂಕವನ್ನುಂಟುಮಾಡದೆ ಸಹಜ ಕಲಿಕೆಗೆ ಸಹಾಯ ಮಾಡುತ್ತದೆ ಎಂದು ನಾವು

ವಿಚಾರ ಮಾಡಬೇಕು. ಈ ವಿಚಾರವಾಗಿ ಮಗುವನ್ನು ಎಳ್ಳಷ್ಟೂ ಗಣನೆಗೆ ತೆಗೆದುಕೊಳ್ಳದೆ ಮಗುವಿನ ಪರವಾಗಿ ನಾವೇ ಎಲ್ಲ ನಿರ್ಧಾರಗಳನ್ನು ತೆಗೆದುಕೊಳ್ಳಲು ನಮಗೇನು ಹಕ್ಕಿದೆ?

ನೋಮ್ ಚೋಮ್‌ಸ್ಕಿಯಂತಹ ಭಾಷಾತಜ್ಞ ವ್ಯಕ್ತಿತ್ವ ವಿಕಾಸವಾಗಲು ಮಗುವಿನ ಅನಿರ್ಬಂಧಿತ ಅಭಿವ್ಯಕ್ತಿ ಬಹಳ ಮುಖ್ಯ ಎನ್ನುತ್ತಾನೆ. ಬೆಳವಣಿಗೆಯ ಮೊದಲ ಹಂತಗಳಲ್ಲಿ ಮಗು ತನಗೆ ಅನಿಸಿದ್ದನ್ನು ನಿರರ್ಗಳವಾಗಿ ಮಾತಿನಲ್ಲಿ ಹೇಳುವುದು ಸಾಧ್ಯವಾದರೆ ಅದರ ವ್ಯಕ್ತಿತ್ವ ವಿಕಾಸವಾಗುತ್ತದೆ. ಹೀಗೆ ನಿರರ್ಗಳವಾಗಿ ಅನಿಸಿದ್ದನ್ನು ಮಗು ಹೇಳಬೇಕಾದರೆ ಮಾತೃಭಾಷೆಗಿಂತ ಸಹಜವಾದದ್ದು ಬೇರೆ ಯಾವುದಾದರೂ ಇರಲು ಸಾಧ್ಯವೇ? ಮಗು ತನಗೆ ಅನಿಸಿದ್ದನ್ನು ಸುಲಲಿತವಾಗಿ ಹೇಳಲು ವಿಫಲವಾದರೆ ಅದರ ಮನಸ್ಸಿನಲ್ಲಿ ಒಂದು ಕೊರಗು, ಒಂದು ಅತೃಪ್ತಿ ಹುಟ್ಟುತ್ತದೆ. ಈ ಅತೃಪ್ತಿಗೆ ತನ್ನದೇ ಅಸಮರ್ಪಕತೆ ಕಾರಣ ಎಂದು ಮಗು ತನ್ನ ಬಗೆಗೆ ತಾನೇ ಜುಗುಪ್ಸೆ ಬೆಳೆಸಿಕೊಳ್ಳಬಹುದು. ಅರಳು ಹುರಿದಂತೆ ಮಾತನಾಡುವ ಇತರ ಮಕ್ಕಳೊಡನೆ ತನ್ನನ್ನು ಹೋಲಿಸಿಕೊಂಡು ತಾನು ಕೀಳು ಎಂದು ಭಾವಿಸಬಹುದು. ಇದರಿಂದಾಗಿ ಮಗುವಿಗೆ ಇರಬಹುದಾದ ಇತರ ಸುಪ್ತ ಸಾಮರ್ಥ್ಯಗಳೂ ಕುಂದಿಹೋಗಬಹುದು.

## ಮಾತೃಭಾಷೆ ಮತ್ತು ಮಕ್ಕಳ ಹಕ್ಕುಗಳು

ಮಾತೃ ಭಾಷೆಯಲ್ಲಿ ಕಲಿಯುವುದು ಮಕ್ಕಳ ಹಕ್ಕು. ತನ್ನದಲ್ಲದ, ಅರ್ಥವಾಗದ ಭಾಷೆ ಆತಂಕಗಳ ಸರಮಾಲೆಯನ್ನೇ ಸೃಷ್ಟಿಸುತ್ತದೆ, ಕೀಳರಿಮೆಯನ್ನು ಬಿತ್ತುತ್ತದೆ. ಅಥವಾ ಅನ್ಯಮಾರ್ಗ ಕಾಣದೆ ಮಗು ಸ್ಪಂದನಹೀನವಾಗಿ ಇಡೀ ಪರಿಸರದಿಂದ ಬೇರ್ಪಟ್ಟು ತನ್ನೊಳಗೆ ಒಂದು ಗೂಡು ಕಟ್ಟಿಕೊಂಡು ತಮಸ್ಸಿಗೆ ಶರಣಾಗುತ್ತದೆ. ತನ್ನದಲ್ಲದ, ಸಂವಹನ ಸಾಧ್ಯವಾಗದ ಭಾಷೆ ಇಷ್ಟೆಲ್ಲ ದುರಂತಗಳ ಸರಣಿಯನ್ನು ಸೃಷ್ಟಿಸಿದರೂ ಮಗುವಿನ ಮೇಲೆ ಉಂಟಾಗುವ ಈ ದುಷ್ಪರಿಣಾಮಗಳು ನಮಗೆ ತಕ್ಷಣವೇ ತಿಳಿಯುವುದಿಲ್ಲ. ಅದು ತಿಳಿಯುವ ಹೊತ್ತಿಗೆ ಕೆಲವು ವರ್ಷಗಳೇ ಕಳೆದಿರುತ್ತದೆ. ಎಂಟನೇ ತರಗತಿಯ ಮಕ್ಕಳನ್ನು ನಾವು ಬಲವಂತವಾಗಿ ಇಂಗ್ಲಿಷ್ ಮೀಡಿಯಂಗೆ ಸೇರಿಸಿದಾಗ ಅವರು ಭಯಭೀತರಾಗಿ ಓಡಿಬಂದು ಪುನಃ ತಮ್ಮನ್ನು ಕನ್ನಡ ಮೀಡಿಯಂ ತರಗತಿಗೆ ಕಳುಹಿಸಬೇಕೆಂದು ಗೋಗರೆಯುವುದನ್ನು ನೋಡಿದ್ದೇನೆ. ಎಂಟನೇ ತರಗತಿಯ ಮಕ್ಕಳ ಗತಿಯೇ ಹೀಗಾದಾಗ ಪ್ರಾಥಮಿಕ ಹಂತದ ಮಕ್ಕಳ ಗತಿಯೇನು? ಮಾತೃಭಾಷೆಯಲ್ಲಿ ಕಲಿಯುವ ಮಕ್ಕಳ ಹಕ್ಕನ್ನು ನಮ್ಮ ಮಕ್ಕಳ ಹಕ್ಕುಗಳು ಸ್ಪಷ್ಟವಾಗಿ ಎತ್ತಿ ಹಿಡಿಯದೇ ಇರುವುದು ದುರದೃಷ್ಟಕರ. ಮಕ್ಕಳ ಹಕ್ಕುಗಳು ಪರಿಚ್ಛೇದ ಮೂವತ್ತರಲ್ಲಿ ಹೀಗೆ ಹೇಳಿದೆ: 'ಮಕ್ಕಳು ನಗರ, ಹಳ್ಳಿ, ಕೊಳೆಗೇರಿ, ಬುಡಕಟ್ಟು, ಮುಂತಾದ ಯಾವುದೇ ಹಿನ್ನಲೆಯಿಂದ ಬಂದಿರಬಹುದು, ಯಾವುದೇ ಮಾತೃಭಾಷೆಯನ್ನು ಆಡಬಹುದು. ಆದರೂ ಈ

ಮಕ್ಕಳ ಭಾಷೆ, ಆಚಾರ, ವಿಚಾರ ಮುಂತಾದುವುಗಳನ್ನು ಶಾಲೆಯ ವ್ಯವಸ್ಥೆ ಹೀಗಳೆಯುವಂತಿಲ್ಲ.' ಎಂದರೆ ಯಾವುದೇ ಜನಸಮುದಾಯ ಆಚರಿಸಿಕೊಂಡು ಬಂದಿರುವ ಈ ಅಂಶಗಳು ಕೀಳು ಎಂಬಂಥ ಭಾವನೆ ಬರದಂತೆ ವಿಶಾಲ ಮನೋಧರ್ಮವನ್ನು ಬುದ್ಧಿಪೂರ್ವಕವಾಗಿ ಮಕ್ಕಳಲ್ಲಿ ಬೆಳೆಸುವ ಪ್ರಯತ್ನ ಮಾಡಬೇಕು. ಈ ಹೇಳಿಕೆಯ 'ಭಾಷೆ' ಭಾಗವನ್ನು ನಾವು ಪ್ರಧಾನವಾಗಿಟ್ಟುಕೊಂಡು ಮಗುವಿನ ಭಾಷೆಯಲ್ಲದ ಇಂಗ್ಲಿಷ್‌ನ್ನು ಮಗುವಿನ ಮೇಲೆ ಹೇರುವುದು ಕಾನೂನು ಉಲ್ಲಂಘನೆ ಎಂದು ವಾದಿಸಬಹುದೇ? ಕಾನೂನುತಜ್ಞರು ಇದನ್ನು ಸ್ಪಷ್ಟಪಡಿಸಬೇಕು. ತಾಂತ್ರಿಕವಾಗಿ ಮಾತನಾಡುವುದಾದರೆ ಮಗುವಿನ ಮಾತೃಭಾಷೆಯ ಸ್ಥಾನವನ್ನು ಇಂಗ್ಲೀಷ್ ಭಾಷೆಯಿಂದ ಸ್ಥಳಾಂತರಿಸುವುದು ಮಗುವಿಗೆ ಮಾಡುವ ದ್ರೋಹ ಎಂದು ಪರಿಗಣಿಸಬಹುದು. ಈ ಬಗ್ಗೆ ಗಾಂಧೀಜಿಯವರ ಅಭಿಪ್ರಾಯ ಹೀಗಿದೆ: "ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ಕೊಡುವ ವಿಚಾರದ ಬಗ್ಗೆ ಪೋಲಾಕ್ ಹಾಗೂ ನಾನು ಆಗಾಗ ತೀವ್ರ ವಾಗ್ವಾದಕ್ಕಿಳಿಯುತ್ತಿದ್ದೆವು. ಶೈಶವದಿಂದಲೇ ಇಂಗ್ಲಿಷ್‌ನಲ್ಲಿ ಯೋಚಿಸಲು ಹಾಗೂ ಮಾತನಾಡಲು ತಮ್ಮ ಮಕ್ಕಳಿಗೆ ಕಲಿಸುವ ಭಾರತೀಯ ತಂದೆತಾಯಿಗಳು ತಮ್ಮ ಮಕ್ಕಳು ಹಾಗೂ ತಮ್ಮ ರಾಷ್ಟ್ರವನ್ನು ವಂಚಿಸುತ್ತಿರುತ್ತಾರೆ ಎಂಬುದೇ ಯಾವಾಗಲೂ ನನ್ನ ನಂಬಿಕೆಯಾಗಿತ್ತು. ರಾಷ್ಟ್ರದ ಆಧ್ಯಾತ್ಮಿಕ ಹಾಗೂ ಸಾಮಾಜಿಕ ಪರಂಪರೆಗಳಿಂದ ದೂರವಾಗಿಸಿ ರಾಷ್ಟ್ರದ ಸೇವೆಗೆ ಅವರನ್ನು ಅನರ್ಹರನ್ನಾಗಿಸುವಂತಹದ್ದು ಇದು." (ಗುಹಾಂಕಣ–ರಾಮಚಂದ್ರ ಗುಹ) ಇದೇ ಸಂದರ್ಭದಲ್ಲಿ ಗಾಂಧೀಜಿಯವರ ಮತ್ತೊಂದು ಮಾತು ಮನೋಜ್ಞವಾಗಿದೆ. ಮಗು ಶಿಶುವಾಗಿರುವಾಗ ಏನನ್ನು ಕಲಿಯುತ್ತದೋ ಅದನ್ನು ಅನಂತರದ ವರ್ಷಗಳಲ್ಲಿ ಕಲಿಯಲು ಅದಕ್ಕೆ ಸಾಧ್ಯವಾಗುವುದೇ ಇಲ್ಲ. ಈ ಅಂಶವನ್ನು ಗಾಂಧೀಜಿಯವರ ಮಾತುಗಳಲ್ಲೇ ಹೇಳುವುದಾದರೆ– "ಮಗು ತನ್ನ ಬಾಲ್ಯದ ಮೊದಲ ಐದು ವರ್ಷಗಳಲ್ಲಿ ಏನನ್ನೂ ಕಲಿತಿರುವುದಿಲ್ಲವೆಂಬ ತಪ್ಪು ಕಲ್ಪನೆ ಪ್ರಚಾರದಲ್ಲಿದೆ. ವಾಸ್ತವವಾಗಿ ಬಾಲ್ಯದ ಮೊದಲ ಐದು ವರ್ಷಗಳಲ್ಲಿ ಕಲಿಯದೇ ಇದ್ದುದನ್ನು ಮಗು ಬಳಿಕ ಕಲಿಯುವುದೇ ಇಲ್ಲ ಎಂಬುದನ್ನು ಮರೆಯಬಾರದು. ಮಗುವಿನ ಶಿಕ್ಷಣ, ಗರ್ಭಾವಸ್ಥೆಯಿಂದಲೇ ಆರಂಭವಾಗುತ್ತದೆ ಎಂಬುದೇ ಸತ್ಯ ವಿಚಾರ." ಶಿಶುವಾಗಿರುವಾಗ ಮಗು ತನ್ನ ಅನುಭವವನ್ನು ಮೈಗೂಡಿಸಿಕೊಳ್ಳಬೇಕಾದರೆ ಮಾತೃಭಾಷೆಗಿಂತ ಉತ್ತಮವಾದದ್ದು ಯಾವುದಿದೆ? ಮಾತೃಭಾಷೆಯ ಜೊತೆಗೆ ತರಗತಿಯಲ್ಲಿ ಅನಿವಾರ್ಯವಾಗಿ ಇರಬಹುದಾದ ಬಹುಭಾಷಾ ಪರಿಸರವನ್ನು ಸಮರ್ಪಕವಾಗಿ ಬಳಸಿಕೊಳ್ಳಬೇಕೆಂದು ನಮ್ಮ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಹೇಳುತ್ತದೆ. ಈ ಬಹುಭಾಷಾ ಪರಿಸರದಲ್ಲಿ ಇಂಗ್ಲಿಷ್ ಒಂದು ಅಸಂಬದ್ಧತೆಯನ್ನು ತಂದಿಡುವುದರಲ್ಲಿ ಸಂದೇಹ ಇಲ್ಲ. ಜೊತೆಗೆ ಇಂಗ್ಲಿಷ್ ಭಾರತದ ಯಾರ ಮಾತೃಭಾಷೆಯೂ ಅಲ್ಲ. ಅದರ ರಚನೆ ನಮ್ಮ ಸ್ಥಳೀಯ ಭಾಷೆಗಳನ್ನು ಹೋಲದಿರುವುದರಿಂದ ಅದು ಆಗಂತುಕ ಭಾಷೆಯಾಗಿಯೇ ಉಳಿಯುತ್ತದೆ.

ಈ ಸಂದರ್ಭದಲ್ಲಿ ಲಾರಾ ಆಂದರ್ಸ್ ಬೇರ್ ಮತ್ತು ರಾಬರ್ಟ್ ಎಂಬ ತಜ್ಞರು ಹೇಳುವ ಮಾತು ಮನೋಜ್ಞವಾಗಿದೆ– "ದ್ವಿಭಾಷಾ ಪರಿಸರದಲ್ಲಿ ಓದಲೇಬೇಕಾದ ಮಕ್ಕಳಬಗ್ಗೆ ನಡೆದಿರುವ ಅಧ್ಯಯನಗಳು ನಮಗೆ ತಿಳಿಸುವುದೇನೆಂದರೆ ಮಾತೃಭಾಷೆಯಲ್ಲಿ ಮಗು ಕಲಿತ ಅವಧಿ ಹೆಚ್ಚಾದಷ್ಟೂ ಅದು ಆಯಾ ಮಕ್ಕಳ ಶೈಕ್ಷಣಿಕ ಯಶಸ್ಸಿಗೆ ಇತರೆಲ್ಲ ಅಂಶಗಳಿಗಿಂತಲೂ ಹೆಚ್ಚು ಕಾರಣವಾಗುತ್ತದೆ."*

**ಭಾಷೆ ಒಂದು ಜೀವನಕ್ರಮ**

ಶತಮಾನಗಳಿಂದಲೂ ವಿಕಾಸಗೊಂಡ ಮನುಷ್ಯನ ಜೀವನ–ಚಿಂತನಕ್ರಮಕ್ಕೆ ಅನುಗುಣವಾಗಿ ಭಾಷೆ ಆಯಾ ಪ್ರದೇಶಗಳಲ್ಲಿ ಬೆಳೆದಿರುತ್ತದೆ. ವಿಸ್ತಾರವಾದ ಭಾವಸಮುದ್ರದಿಂದ ಸಂವಹನ ಸಾಧ್ಯವಾಗುವ ಕೆಲವು ನಿರ್ದಿಷ್ಟ ಅಂಶಗಳನ್ನಾದರೂ ವ್ಯಕ್ತಪಡಿಸುವ ವಾಹಕವಾಗುತ್ತದೆ ಭಾಷೆ. ಈ ಭಾವನೆಗಳಿಗೆ ಅಭಿವ್ಯಕ್ತಿ ಕಲ್ಪಿಸುವ ವ್ಯಕ್ತ ಶಬ್ದರೂಪವಾಗಿ, ವಿಶಾಲವಾದ ಸಾಂಸ್ಕೃತಿಕ ಪರಿಧಿಯ ಅನೇಕ ಮಜಲುಗಳಿಗೆ ಕೊಂಡಿಯಾಗಿ ಭಾಷೆ ಕೆಲಸ ಮಾಡುತ್ತದೆ. ಒಂದು ಭಾಷೆಯನ್ನು ಅದಕ್ಕೆ ಸಂಬಂಧಪಟ್ಟ ಸಂಸ್ಕೃತಿಯ ಹೊರತಾಗಿ ಭಾವಿಸಲಾಗುವುದಿಲ್ಲ. ಅಥವಾ ಸಾಂಸ್ಕೃತಿಕ ಸಂಬಂಧವಿಲ್ಲದೆ ಬಳಸಿದ ಭಾಷೆ ಸೀಮಿತ ಅರ್ಥಗಳನ್ನು ಮಾತ್ರ ಧ್ವನಿಸಿ ಬಳಕೆದಾರರ ವ್ಯಕ್ತಿತ್ವವನ್ನು ಕುಬ್ಜವಾಗಿಸುತ್ತದೆ. ಇಂತಹ ಭಾಷೆಯ ಬಳಕೆಯಿಂದ ಸಾಧ್ಯವಾಗುವ ಸಂವಹನ ಅಸಹಜ ವ್ಯಕ್ತಿತ್ವವನ್ನು ರೂಪಿಸುವುದು ಖಚಿತ. ಪ್ರಸ್ತುತ ಸಂದರ್ಭದಲ್ಲಿ ಹೇಳಬೇಕೆಂದರೆ ಅದು 'ಕಂಪ್ಯೂಟರ್–ಇಂಗ್ಲಿಷ್–ಹಣ–ಒಣಜಂಬ' ಇಷ್ಟನ್ನು ಮಾತ್ರ ತನ್ನ ಬಳಕೆದಾರನಿಗೆ ಕೊಡುತ್ತದೆ. ಬಹುಶಃ ಈ ಅಂಶವನ್ನು ಮನಗಂಡೇ ನಮ್ಮ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು ರೋಸಿ ಹೋಗಿ 'ಇಂಗ್ಲಿಷ್ ಒಂದು ಕೊಲೆಗಡುಕ ಭಾಷೆ' ಎಂದು ಹೇಳಿರಬಹುದು.

ಮಾತೃಭಾಷೆಯ ಮೂಲಕ ನಾವು ನಮಗೆ ಬಹಳ ಆಪ್ತವಾಗಿರುವ ಸಂಗತಿಗಳನ್ನು ಹೇಳಿಕೊಳ್ಳಲು ಸಾಧ್ಯ. ಇಂತಹ ಭಾಷಾ ಸಾಮರ್ಥ್ಯವನ್ನು ಕಳೆದುಕೊಂಡರೆ ನಾವು ಆಪ್ತವಾದ ಯಾವುದನ್ನೂ ಹೇಳಿಕೊಳ್ಳಲು ಪ್ರಯತ್ನಿಸುವುದೇ ಇಲ್ಲ. ಅನಿವಾರ್ಯವಾಗಿ ನಾವು ನಮ್ಮ ಗ್ರಾಮೀಣ ನುಡಿಗಟ್ಟುಗಳಿಂದ ದೂರವಾಗುತ್ತೇವೆ, ನಮ್ಮ ಸಂಸ್ಕೃತಿಯಲ್ಲಿ ತಲೆತಲಾಂತರಗಳಿಂದ ರೂಪುಗೊಂಡ ಮನುಷ್ಯಸಂಬಂಧಗಳಿಗೆ, ಮೌಲ್ಯಗಳಿಗೆ ಧ್ವನಿ

---

*"it is clear from many studies that the length of mother tongue medium education is more important than any factor in predicting the education success of bilingual students." (from expert paper for the united nations permanent forum on indegenous issues. presented by lars-Anders Baer in collabaration with Rober.

ನೀಡಲಾರದೆ ಸೋತುಹೋಗುತ್ತೇವೆ. ಪರ್ಯಾಯವಾಗಿ ಅನುಕರಣೆಯ ಸಂಸ್ಕೃತಿಗೆ ಶರಣಾಗುತ್ತೇವೆ. ಹೀಗೆ ಒಂದು ಸಂಸ್ಕೃತಿಗೂ ಭಾಷೆಗೂ ಬಿಡಿಸಲಾಗದ ಸಂಬಂಧವಿದೆ. ಭಾಷೆ ಸಾಯುವುದು ಎಂದರೆ ಸಹಸ್ರಮಾನಗಳ ಸಾಂಸ್ಕೃತಿಕ ಚರಿತ್ರೆಯ ಸಾವು ಎಂದು ಅರ್ಥ ಮಾಡಿಕೊಳ್ಳಬಹುದು.

## ಅನೈತಿಕ ಯಶಸ್ಸಿಗಾಗಿ ಇಂಗ್ಲಿಷ್ ಬೇಡಿಕೆ

ಈ ವಾದಸರಣಿಯ ಮೂಲಕ ಇಂಗ್ಲಿಷ್ ಭಾಷಾ ಸಾಹಿತ್ಯವನ್ನೂ, ಅದರಲ್ಲಡಗಿರುವ ಬೌದ್ಧಿಕ ಸೈದ್ಧಾಂತಿಕ ನಿಲುವುಗಳನ್ನೂ, ಔದಾರ್ಯವನ್ನೂ ನಾನು ಹಳಿಯುತ್ತಿಲ್ಲ. ಬಾವಿಯ ಕಪ್ಪೆಯಾಗಬೇಕೆಂಬುದು ಇದರ ಅರ್ಥವಲ್ಲ. ಸದಾ ವಿಸ್ತಾರಗೊಳ್ಳುವ ಗುಣ, ವಿಕಾಸದ ಮನೋಧರ್ಮ ಕನ್ನಡಿಗರಿಗಷ್ಟೇ ಏಕೆ ಎಲ್ಲ ಭಾಷೆಗಳನ್ನು ಮಾತನಾಡುವವರಿಗೂ ಇರಬೇಕು. ಆದರೆ ಇಂಗ್ಲಿಷ್ ಭಾಷೆ ಕೇವಲ ಹಣದ, ಅನೈತಿಕ ಯಶಸ್ಸಿನ ದ್ಯೋತಕವಾಗಿ ಇಂದು ಪ್ರಾಥಮಿಕ ಹಂತದಲ್ಲಿ ಬೇಡಿಕೆಗೆ ಬರುತ್ತಿದೆ. ಇಂಗ್ಲಿಷ್ ಅನ್ನ ಕೊಡುವ ಭಾಷೆ ಎಂಬ ಮಿಥ್ಯಾಕಲ್ಪನೆಯನ್ನು ನಮ್ಮ ನಡುವಿನ ಬಿಳಿಕೊರಳಪಟ್ಟಿಯ ಮೂರ್ಖರು ಬಿತ್ತುತ್ತಿದ್ದಾರೆ. ವಿಷಾದದ ಸಂಗತಿಯೆಂದರೆ ಇಂಗ್ಲಿಷ್ ಅನ್ನದ ಭಾಷೆಯಾಗುವುದು ಪ್ರತಿಷ್ಠಿತ ವರ್ಗದ ಕೆಲವರಿಗೆ ಮಾತ್ರ. ಒಂಟೆಯ ಮುಂದೆ ಎಟುಕದ ಕ್ಯಾರೆಟ್ ಹಿಡಿದು ಅದನ್ನು ಮರಳುಗಾಡಿನಲ್ಲಿ ನೀರಿಲ್ಲದೆ ನಡೆಸುವ ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳ ಜಾಣತನವಿದು. ಕನ್ನಡ ಮಾಧ್ಯಮದಲ್ಲೇ ಕಲಿತ ಅನೇಕರು ಅದ್ಭುತವಾದ ಯಶಸ್ಸನ್ನು ಗಳಿಸಿರುವುದು ನಮ್ಮ ಕಣ್ಣಮುಂದೆಯೇ ಇದೆ. ಜೊತೆಗೆ ನಮ್ಮ ಬಹುಸಂಖ್ಯಾತ ಮಕ್ಕಳು ಹತ್ತನೆಯ ತರಗತಿಗೆ ಮುಂಚೆಯೇ ಶಾಲೆ ತೊರೆದುಬಿಡುವುದರಿಂದ ಈ ಮಕ್ಕಳಿಗೆ ಜೀವನದಲ್ಲಿ ಇಂಗ್ಲಿಷ್ ಬಳಸುವ ಅಥವಾ ಕಂಪ್ಯುಟರ್ ಬಳಸುವ ಅನಿವಾರ್ಯತೆಯೇ ಬರುವುದಿಲ್ಲ. ಅವಕಾಶಗಳನ್ನು ದರೋಡೆಕೋರರಂತೆ ಬಾಚಿಕೊಳ್ಳುವ ನಮ್ಮ ಶ್ರೀಮಂತರ ಮಕ್ಕಳಿಗೆ ಇಂಗ್ಲಿಷ್ ಅಥವ ಕಂಪ್ಯುಟರ್‌ಗಳು ಉಪಯೋಗಕ್ಕೆ ಬರುತ್ತವೆ. ನಮ್ಮ ಸರ್ಕಾರಿ ವ್ಯವಸ್ಥೆ ಇದಕ್ಕೆ ಪೂರಕವಾಗಿ ಕೆಲಸಮಾಡುತ್ತಿದೆ.

## ಇಂಗ್ಲಿಷ್‌ನ ಹಂಗಿಲ್ಲದೆ ಪ್ರಗತಿ

ಫ್ರಾನ್ಸ್, ಜರ್ಮನಿಯಂತಹ ದೇಶಗಳು ಇಂಗ್ಲಿಷ್ ಭಾಷೆಯನ್ನು ಬಳಸಿಕೊಳ್ಳದೆ ತಂತ್ರಜ್ಞಾನದ ಪ್ರಗತಿಯನ್ನು ಸಾಧಿಸಿದವು. ಇದಕ್ಕೆ ಚಾರಿತ್ರಿಕ ಕಾರಣಗಳಿವೆ. ಈ ದೇಶಗಳಿಗೆ ವಿಜ್ಞಾನದ ಸಂಪದ್ಭರಿತ ಚರಿತ್ರೆ ಇದೆ. ಭಾರತದಲ್ಲಿ ವಿಜ್ಞಾನ ಸಂಸ್ಕೃತಿಯ ಕೊರತೆ ಎದ್ದುಕಾಣುತ್ತದೆ. ಈ ವಿಜ್ಞಾನದ ಸಾಂಸ್ಕೃತಿಕ ಕೊರತೆಯನ್ನು ನಮ್ಮ ಪ್ರಾದೇಶಿಕ ಭಾಷೆಗಳು ಭರಿಸಲಾರವು. ಇಂಗ್ಲಿಷ್ ಭಾಷೆ ಹೇಗೆ ಭಾರತದ ಸಾಂಸ್ಕೃತಿಕ ಅನನ್ಯತೆಯನ್ನು

ತುಂಬಿಕೊಡಲಾರದೋ ಅದೇ ರೀತಿ ಭಾರತೀಯ ಭಾಷೆಗಳು ತಮ್ಮದಲ್ಲದ ವಿಜ್ಞಾನದ ಸಂಸ್ಕೃತಿಗೆ ಪೂರಕವಾಗಿ ನಿಲ್ಲಬೇಕಾದರೆ ಈ ಹೊಸ ಶಾಖೆಗಾಗಿ ತನ್ನ ಪರಿಭಾಷೆಯನ್ನು ವಿಸ್ತರಿಸಿಕೊಳ್ಳಬೇಕು. ಇಂಗ್ಲೀಷ ಭಾಷೆ ಹೀಗೆ ಲ್ಯಾಟಿನ್‌ನಿಂದ ಗ್ರೀಕ್‌ನಿಂದ ಅನೇಕ ಪದಗಳನ್ನು ಬಳಸಿಕೊಂಡಿತು. ಸತತವಾದ ಪ್ರಯತ್ನದಿಂದ ಇಂದಿನ ಇಂಗ್ಲಿಷ್ ವಿಜ್ಞಾನ ವಿಷಯಗಳ ಸಂವಹನಕ್ಕೆ ಅಣಿಯಾಯಿತು. ಕನ್ನಡವನ್ನು ವಿಜ್ಞಾನಕ್ಕಾಗಿ ಉಪಯೋಗಿಸುವ ಪ್ರಯತ್ನವನ್ನೂ ಮಾಡದೆ ಕನ್ನಡದಲ್ಲಿ ವಿಜ್ಞಾನ ಸಾಧ್ಯವೇ ಇಲ್ಲ ಎಂಬ ತೀರ್ಮಾನಕ್ಕೆ ಬರುವುದು ಎಷ್ಟು ಸರಿ? ಅಗತ್ಯವಿದ್ದಲ್ಲಿ ಇಂಗ್ಲಿಷ್ ಪದಗಳನ್ನು ಬಳಸಬಹುದು. ಇದೊಂದು ಪಾಪದ ಕೆಲಸವೇನೂ ಅಲ್ಲ. ಆದರೆ ಯಾವುದನ್ನು ಎಲ್ಲಿ ಎಷ್ಟು ಬಳಸಬೇಕೆಂಬ ಪರಿಜ್ಞಾನ ನಮಗೆ ಬೇಡವೇ?

### ಗ್ರಾಮೀಣ ಪ್ರದೇಶಗಳಲ್ಲಿನ ಇಂಗ್ಲಿಷ್ ಭಾಷಾ ವಾತಾವರಣ

ಮತ್ತೊಂದು ಬಹುಮುಖ್ಯವಾದ ಪ್ರಶ್ನೆಯೆಂದರೆ ಒಳ್ಳೆಯ ಇಂಗ್ಲಿಷ್ ಕಲಿಸಲು ಇಂಗ್ಲಿಷ್ ಬಲ್ಲ ಪ್ರಾಥಮಿಕ ಶಾಲೆಯ ಅಧ್ಯಾಪಕರನ್ನು ಹುಡುಕುವುದೆಲ್ಲಿ? ಇಂದು ಗ್ರಾಮೀಣ ಪ್ರದೇಶಗಳ ಹೈಸ್ಕೂಲು ಕಾಲೇಜುಗಳಲ್ಲೇ ಸರಿಯಾಗಿ ಇಂಗ್ಲಿಷ್ ಬಲ್ಲ ಅಧ್ಯಾಪಕರು ಇರುವುದು ಅಪರೂಪ. ಒಂದು ಭಾಷೆಯನ್ನು ಕಲಿಯಬೇಕಾದರೆ ಆ ಭಾಷಾ ವಾತಾವರಣ ಕಲಿಕೆಗೆ ಸಹಾಯ ಮಾಡುತ್ತದೆಯಾದ್ದರಿಂದ ಭಾಷೆಯ ಕಲಿಕೆ ಕಷ್ಟಸಾಧ್ಯವಲ್ಲ. ಆದರೆ ಇಂದು ಇಂಗ್ಲಿಷ್ ಭಾಷೆಯ ವಾತಾವರಣದ ಗಂಧವೂ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಇಲ್ಲ. ಮೊದಲನೆಯದಾಗಿ ಇಂಗ್ಲಿಷ್ ಭಾಷೆಗೆ ಕನ್ನಡಕ್ಕಿಂತ ಭಿನ್ನವಾದ ತನ್ನದೇ ಆದ ಒಂದು ರಚನೆ (Structure) ಇದೆ, ಒಂದು ಸ್ವರೂಪ ಇದೆ. ಆ ರಚನೆಯನ್ನು ಎಲ್ಲ ಅಧ್ಯಾಪಕರೂ ಎಲ್ಲ ಸಮಯದಲ್ಲೂ ಏಕರೀತಿಯಲ್ಲಿ ಉಳಿಸಿಕೊಂಡು ಸಂವಹನ ಮಾಡಿದರೆ ಮಕ್ಕಳಿಗೆ ಭಾಷೆಯ ರಚನೆ ಅರ್ಥವಾಗಿ, ಆ ಭಾಷೆಯಲ್ಲಿ ನಂಬಿಕೆ ಹುಟ್ಟಿ ಆ ಭಾಷೆ ಸಂವಹನಯೋಗ್ಯ ಎಂಬ ಆತ್ಮವಿಶ್ವಾಸ ಉಂಟಾಗುತ್ತದೆ. ಆಗ ಆ ಭಾಷೆಯನ್ನು ಬಳಸುತ್ತಾರೆ. ಆದರೆ ಇಂಗ್ಲಿಷ್ ಭಾಷೆಯನ್ನು ಒಬ್ಬೊಬ್ಬರು ಒಂದೊಂದು ರೀತಿ ಬಳಸಿದರೆ ಮಗುವಿಗೆ ಅರ್ಥವಾಗುವುದಾದರೂ ಏನು? ಶಿಕ್ಷಕರ ಕಾರ್ಯಾಗಾರವೊಂದರಲ್ಲಿ ಇಂಗ್ಲಿಷ್‌ನಲ್ಲಿ ಮಾತನಾಡಲು ಹೆದರುತ್ತಿದ್ದ ಒಬ್ಬ ಅಧ್ಯಾಪಕನಿಗೆ ಅವನಿಗಿಂತ ಕೆಟ್ಟ ಇಂಗ್ಲಿಷ್‌ಅನ್ನು ನಿಸ್ಸಂಕೋಚವಾಗಿ ಮಾತನಾಡಬಲ್ಲ ಅವನ ಮೇಲಧಿಕಾರಿ ಹೀಗೆ ಧೈರ್ಯ ಕೊಡುತ್ತಿದ್ದ: 'ನಾವು ಇಂಗ್ಲಿಷ್ ಮಾತನಾಡಲು ಹೆದರಬಾರದು; ತಪ್ಪಾದರೂ ಚಿಂತೆಯಿಲ್ಲ ತರಗತಿಯಲ್ಲಿ ತಪ್ಪೋ ನೆಪ್ಪೋ ಇಂಗ್ಲಿಷ್‌ನಲ್ಲೇ ಮಾತನಾಡಬೇಕು.'

ಹೀಗೆ ತರಗತಿಯಲ್ಲಿ ತಪ್ಪು ತಪ್ಪು ಇಂಗ್ಲಿಷ್ ಮಾತನಾಡುತ್ತಾ ಅಧ್ಯಾಪಕರು ತಾವೇ ಸ್ವಯಂ ಕಲಿಕೆಯಲ್ಲಿ ತೊಡಗಿದರೆ ಮಕ್ಕಳ ಗತಿ ಏನು? ಇಂಗ್ಲಿಷ್ ಇಂದು

ಬೇಡಿಕೆಯಲ್ಲಿರುವುದಕ್ಕೆ ಕಾರಣ ಅದೂ ಕೂಡ ಒಂದು ಅದ್ಭುತವಾದ ಭಾಷೆ ಎಂಬ ಕಾರಣಕ್ಕಾಗಿ ಅಲ್ಲ. ಈ ಭಾಷೆಯ ಜೊತೆಗೆ ಬೆಸೆದುಕೊಂಡಿರುವ ನಗರಜೀವನದ, ಬಣ್ಣದ ಬದುಕಿನ ಸಾಧ್ಯತೆಗಳು ನಮ್ಮ ಮುಗ್ಧ ಜನರನ್ನು ಮರುಳು ಮಾಡುತ್ತಿವೆ. ಈ ಅವಾಸ್ತವ ಕನಸುಗಳ ಕನವರಿಕೆಯಲ್ಲಿ ಜನಸಾಮಾನ್ಯರು ಮುಗ್ಧರಾಗಿ ಹೋಗಿದ್ದಾರೆ.

ಈ ದೌರ್ಬಲ್ಯವನ್ನೇ ಬಂಡವಾಳ ಮಾಡಿಕೊಂಡ ನಮ್ಮ ಖಾಸಗಿ ಶಾಲೆಗಳು ಇಂಗ್ಲಿಷ್ ನೆಪದಲ್ಲಿ ಜನರಿಂದ ಯದ್ವಾತದ್ವಾ ಹಣ ವಸೂಲಿ ಮಾಡುತ್ತಿವೆ. ಇಂಗ್ಲಿಷ್ ದಯಪಾಲಿಸುವ ಈ ಹುಸಿ ಆಶ್ವಾಸನೆಯ ಬಗ್ಗೆ ಜನ ಜಾಗೃತರಾಗುವಂತೆ ಮಾಡಬೇಕಾದ್ದು ಇಂಗ್ಲಿಷ್ ಕಲಿಕೆಗಿಂತ ಬಹಳ ಮುಖ್ಯ.

# ೧೦. ಸಂಸ್ಕೃತಿ ಮತ್ತು ಗುಣಾತ್ಮಕ ಶಿಕ್ಷಣ

## ಸ್ಥಳೀಯ ಸಂಸ್ಕೃತಿ ಮತ್ತು ಶಿಕ್ಷಣ

'ರಾಮ ಎಂಬೆರಡಕ್ಷರದಲ್ಲಿ' ಹುದುಗಿರುವ ಅರ್ಥವ್ಯಾಪ್ತಿ ಆ ಸಂಸ್ಕೃತಿಯ ಜನಮಾನಸದಲ್ಲಿ ಅನೇಕ ಪೀಳಿಗೆಗಳ ಪರ್ಯಂತ ಸಂಶ್ಲೇಷಣೆಗೊಂಡು, ನಿರಂತರವಾಗಿ ವಿಸ್ತಾರವಾಗುತ್ತಲೇ ಇರುವಂಥದು. ಹಾಗೆಯೇ 'ಮರ' ಎಂಬೆರಡಕ್ಷರವಷ್ಟೇ ಮರವಾಗುವುದಿಲ್ಲ. ಒಂದು ಅನುಭವಕ್ಕೆ ಕೊಟ್ಟ ಹೆಸರು ಇದು. ಅನುಭವದಿಂದ ಪದ ಹುಟ್ಟಿದೆಯೇ ಹೊರತು ಪದದಿಂದ ಅನುಭವ ಹುಟ್ಟಿಲ್ಲ; ಎಂದೂ ಹುಟ್ಟಲಾರದು. ಗಿರಿಜನರಿಗೆ 'ಮರ' ಧ್ವನಿಸುವ ಅರ್ಥಕ್ಕೂ ಪಟ್ಟಣವಾಸಿಗಳಿಗೆ ಅದು ಧ್ವನಿಸುವ ಅರ್ಥಕ್ಕೂ ಅಥವಾ ಮರಳುಗಾಡಿನ ಅರಬನಿಗೆ ಅದು ಧ್ವನಿಸುವ ಅರ್ಥಕ್ಕೂ ಎಷ್ಟು ವ್ಯತ್ಯಾಸವಿರುತ್ತದೆ! ಹಾಗೆ ನೋಡಿದರೆ ಅರಬರ ಪರಿಭಾಷೆಯಲ್ಲಿ ಒಂಟೆಗೆ ಸಂಬಂಧಿಸಿದ ಸುಮಾರು ಆರು ಸಾವಿರ ಪದಗಳು ಬಳಕೆಯಲ್ಲಿವೆಯಂತೆ. ಮರಗಳ ಒಡನಾಟದಲ್ಲಿ ಬದುಕುವ ಗಿರಿಜನರಲ್ಲಿ ಮರಗಳಿಗೆ ಸಂಬಂಧಪಟ್ಟ ಸಾವಿರಾರು ಪದಗಳು ಬಳಕೆಯಲ್ಲಿವೆ. ಹೀಗೆ ಪದಗಳ ಸಂಖ್ಯೆ ಮತ್ತು ಅರ್ಥವ್ಯಾಪ್ತಿ ಆಯಾ ಪ್ರದೇಶಗಳ ಪರಿಸರವನ್ನು ಮತ್ತು ಸಂಸ್ಕೃತಿಯನ್ನು ಅವಲಂಬಿಸಿರುತ್ತದೆ.

ಪದದಿಂದ ಅನುಭವ ಹುಟ್ಟಲಾರದು ಎಂದು ಈ ಹಿಂದೆ ಹೇಳಿದ ಮಾತನ್ನು ನಾವು ಗಂಭೀರವಾಗಿ ಪರಿಗಣಿಸಿದರೆ ಶಿಕ್ಷಣ ನಮ್ಮ ದೇಸೀ ಸಂಸ್ಕೃತಿಯನ್ನು, ಎಂದರೆ ಸ್ಥಳೀಯ ಕಲೆ, ಸಾಹಿತ್ಯ, ಚರಿತ್ರೆ ಹಾಗೂ ಅನೇಕ ಬಗೆಯ ಜೀವನವಿಧಾನಗಳನ್ನು ಒಳಗೊಳ್ಳುವುದು ಮುಖ್ಯ. ಏಕೆಂದರೆ ಮಗುವಿಗೆ ಗಾಢ ಅನುಭವವನ್ನು ಕೊಟ್ಟಿರುವ ಈ ಅಂಶಗಳ ಸುತ್ತ ನಾವು ಶಿಕ್ಷಣವನ್ನು ಕಟ್ಟಬಹುದು. ಗೊತ್ತಿರುವ ವಿಷಯದಿಂದ ಗೊತ್ತಿರದ ವಿಷಯದ ಕಡೆಗೆ ಅನ್ಯೋನ್ಯ ಸಂಬಂಧವಿರುವಂತೆ ಜ್ಞಾನವನ್ನು ಹೆಣೆಯುತ್ತ ಚಲಿಸುವುದು ನಿಜವಾದ ಶಿಕ್ಷಣ ಎನಿಸುತ್ತದೆ. ಇಂತಹ ಸಂದರ್ಭದಲ್ಲಿ ಮಗುವಿನ ಮನಸ್ಸಿನಲ್ಲಿ ನಿರ್ಮಾಣವಾಗುವ ಜ್ಞಾನ ಒಂದಕ್ಕೊಂದು ಸಂಬಂಧವಿರುವ, ಸಮಗ್ರ ಅರ್ಥವನ್ನು ಧ್ವನಿಸುವ ಅರಿವಾಗಿ ಮಗುವಿನ ವ್ಯಕ್ತಿತ್ವದ ಭಾಗವಾಗಿ ಮೈಗೂಡುತ್ತದೆ. ನಮ್ಮ ಇಂದಿನ ಶಿಕ್ಷಣ ಸ್ಥಳೀಯ ಸಂಸ್ಕೃತಿಯನ್ನು ಗಣನೆಗೆ ತೆಗೆದುಕೊಳ್ಳಬಹುದಾದ ವಿಷಯ ಎಂದು ಪರಿಗಣಿಸಿಯೇ ಇಲ್ಲ. ಅಸಂಖ್ಯಾತ ಪ್ರಾದೇಶಿಕ ಭಿನ್ನತೆಯ

ಕಾರಣದಿಂದಾಗಿ ಶಾಲೆಗಳಲ್ಲಿ ಏಕರೂಪದ ಸಾಂಸ್ಕೃತಿಕ ಶಿಕ್ಷಣವಿದ್ದು ಇದು ಅಸಂಬದ್ಧವೆನಿಸುತ್ತದೆ. ಸ್ಥಳೀಯ ಜನಪದ ಸಾಹಿತ್ಯ, ಜನಪದ ಕಲೆ, ಸಾಂಪ್ರದಾಯಿಕ ಜ್ಞಾನವನ್ನು ಆಯಾ ಪ್ರದೇಶದ ಶಾಲೆಗಳು ತಮ್ಮ ಪಠ್ಯದಲ್ಲಿ ತಾವೆ ಅಳವಡಿಸಿಕೊಳ್ಳಬೇಕು. ಆದರೆ ನಮ್ಮ ಇಂದಿನ ಶಿಕ್ಷಣ ವ್ಯವಸ್ಥೆ ಇವುಗಳನ್ನು ಪಠ್ಯಕ್ರಮದ ಹೊರಗಿನ ವಿಷಯ, ಆದ್ದರಿಂದ ಇವು ಅಮುಖ್ಯ ಎಂದು ಭಾವಿಸಿದಂತಿದೆ. ಮಲೈಮಹದೇಶ್ವರ ಬೆಟ್ಟದ ಸುತ್ತಮುತ್ತಲಿನ ಪ್ರದೇಶ ಜನಪದ ಸಾಹಿತ್ಯದ ಕಣಜ. ಇಂದಿಗೂ ಈ ಪ್ರದೇಶದಲ್ಲಿ ಜೀವಂತವಾಗಿರುವ ಜನಪದ ಕಲೆಗಳು, ಗಿಡಮೂಲಿಕೆಗಳ ಜ್ಞಾನ ಅಥವಾ ಗಿರಿಜನರ ನಡುವೆ ಇರುವ ಅಮೂಲ್ಯವಾದ ಪ್ರಕೃತಿಜ್ಞಾನವನ್ನು ನಾವು ಗಣನೆಗೆ ತೆಗೆದುಕೊಂಡಿಲ್ಲ. ಜೊತೆಗೆ ಸ್ಥಳೀಯ ಸಾಧಕರನ್ನು ಬಹುದೂರದ ಯಾರೋ ಗುರುತಿಸುತ್ತಿರುವಾಗ ನಮ್ಮ ಶಾಲಾ ಮಕ್ಕಳಿಗೆ ಈ ಬಗ್ಗೆ ತಿಳುವಳಿಕೆಯೇ ಇರುವುದಿಲ್ಲ. ನಮ್ಮಂತೆಯೇ ನಮ್ಮೊಡನೆಯೇ ಇರುವ ಒಬ್ಬ ವ್ಯಕ್ತಿ ಅದ್ವಿತೀಯವಾದದ್ದನ್ನು ಸಾಧಿಸಿರುವ ವಿಷಯ ಮಕ್ಕಳಿಗೆ ತಿಳಿದರೆ ಮಕ್ಕಳು ಸಹ ಈ ಸಾಧ್ಯತೆಗಳನ್ನು ತಮ್ಮೊಳಗೆ ಗುರುತಿಸಿಕೊಳ್ಳುತ್ತಾರೆ. ನಮ್ಮ ನಡುವೆ ಇರುವ ಅಮೂಲ್ಯವಾದದ್ದನ್ನು ಗುರುತಿಸಲು ಒಂದು ಮಾನದಂಡವನ್ನು ನಮ್ಮ ಮಕ್ಕಳಿಗೆ ಶಾಲೆಯ ಸಂಸ್ಕೃತಿ ರೂಪಿಸಿಕೊಡಬೇಕು. ಇಂತಹ ಒಂದು ವಿವೇಕ ಮೊದಲು ನಮ್ಮ ಅಧ್ಯಾಪಕರಿಗೆ ಇರಬೇಕು. ಚಾಮರಾಜನಗರದ ಹಳ್ಳಿಯೊಂದರಲ್ಲಿ ಅಂತಾರಾಷ್ಟ್ರೀಯ ಖ್ಯಾತಿಯ ಗೊರವರ ಕುಣಿತದ ಕಲಾಕಾರ ಪುಟ್ಟಮಲ್ಲೇಗೌಡರು ಇದ್ದಾರೆ. ಆದರೆ ಇವರ ಬಗ್ಗೆ ಈ ಪ್ರದೇಶದ ಶಾಲೆಯ ಮಕ್ಕಳಿಗೆ ಎಷ್ಟು ಗೊತ್ತು? ಅಥವಾ ಬಾಳೆ ಬೆಳೆಯುವ ಒಬ್ಬ ಅಸಾಧಾರಣ ಕೃಷಿಕ ಇದ್ದಾನೆ. ಅವನಿಗೆ ಪ್ರಶಸ್ತಿಗಳು ಬಂದಿವೆ. ಆದರೆ ಈ ಬಗ್ಗೆ ಶಾಲೆಯ ಅಧ್ಯಾಪಕರುಗಳಿಗಾಗಲೀ ಅಥವಾ ಶಿಕ್ಷಣದ ಇಲಾಖೆಯವರಿಗಾಗಲೀ ಮಾಹಿತಿಯೇ ಇರುವುದಿಲ್ಲ. ನಮ್ಮ ನಡುವೆ ಇರುವವರೂ ಸಹ ಸಾಧಿಸಬಲ್ಲರು ಎಂಬ ನಂಬಿಕೆ ಈ ಜೀವಂತ ಪ್ರಕರಣಗಳ ಮೂಲಕ ಮಕ್ಕಳ ಮನಸ್ಸನ್ನು ಮುಟ್ಟುತ್ತದೆ. ಆದರೆ ನಮ್ಮ ಶಾಲಾವ್ಯವಸ್ಥೆ ಈ ಸಂಬಂಧವಾಗಿ ಪ್ರಯತ್ನಗಳನ್ನೇ ಮಾಡುವುದಿಲ್ಲ. ಇದಕ್ಕೆ ಬೇಕಾದ ಸೂಕ್ಷ್ಮತೆಯನ್ನೇ ನಮ್ಮ ವ್ಯವಸ್ಥೆ ಪಡೆದಿಲ್ಲ. 'ಕರಡಿಕುಣಿತ' ಪದ್ಯದ ಬಗ್ಗೆ ಕವಿ ಬೇಂದ್ರೆಯವರನ್ನು ಪರಿಚಯಿಸುವ ನಮ್ಮ ಶಾಲಾ ಪಠ್ಯದಲ್ಲಿ ಬೇಂದ್ರೆಯವರು ಶಾಲಾ ಶಿಕ್ಷಕರಾಗಿದ್ದರು ಎಂಬ ಅಂಶವನ್ನೇ ಹೇಳಿರಲಿಲ್ಲ. ಈಗ ಹೊಸ ಮುದ್ರಣದಲ್ಲಿ ಹೇಳಿದ್ದಾರೋ ಏನೊ? ಒಬ್ಬ ಶಾಲಾ ಶಿಕ್ಷಕ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದಿದ್ದಾನೆ ಎನ್ನುವ ವಿಷಯ ಶಾಲಾ ಶಿಕ್ಷಕರೆಲ್ಲರಿಗೂ ಒಂದು ಹೆಮ್ಮೆಯ ಮಾತಲ್ಲವೆ? ಶಾಲಾ ಶಿಕ್ಷಕರು ತಮ್ಮ ಸಾಧ್ಯತೆಯನ್ನು ತಾವು ಗುರುತಿಸಿಕೊಳ್ಳಲು ಈ ಮಾಹಿತಿ ಸ್ವಲ್ಪವಾದರೂ ನೆರವಿಗೆ ಬರಬಹುದಲ್ಲವೇ? ಅದ್ವಿತೀಯವಾದದ್ದು ಸದಾ ಕಾಲವೂ ನಮ್ಮ ವೃತ್ತಿ ವ್ಯಾಪ್ತಿಗೆ ಹೊರಗಿನದು ಎಂಬ ಕೀಳರಿಮೆಯಾದರೂ ನಮ್ಮ ಶಾಲಾ ಮಾಸ್ತರುಗಳಲ್ಲಿ ಕಡಿಮೆಯಾಗಬಹುದು.

## ನಮ್ಮ ದೇವಸ್ಥಾನ, ಕೋಟೆ-ಕೊತ್ತಳಗಳು

ಪಠ್ಯಕ್ರಮದಲ್ಲಿರುವ ಚರಿತ್ರೆಯ ಪಾಠಗಳ ಜೊತೆಜೊತೆಗೆ ತಮ್ಮದೇ ಸ್ಥಳೀಯ ಚರಿತ್ರೆಯನ್ನು ಮಕ್ಕಳು ಕಲಿಯುವುದು ಬಹಳ ಮುಖ್ಯ. ಇಂತಹ ಸ್ಥಳೀಯ ಚಾರಿತ್ರಿಕ ಸ್ಥಳಗಳಿಗೆ ಅಧ್ಯಾಪಕರು-ಮಕ್ಕಳು ಭೇಟಿ ನೀಡಿ ಪರಿಣತರ ಸಹಾಯದಿಂದ ತಮ್ಮೂರಿನ ದೇವಸ್ಥಾನದ ಸ್ಮಾರಕಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಚರ್ಚಿಸುವುದು ಮಕ್ಕಳಿಗೆ ಒಂದು ಹೊಸ ಅನುಭವವನ್ನು ನೀಡುತ್ತದೆ. ನಮ್ಮ ಪಠ್ಯಪುಸ್ತಕದ ಸಮಾಜ ಪಾಠಗಳು ಒಂದು ಸಮಗ್ರ ವಿಷಯದಿಂದ ಆಯ್ದುತೆಗೆದ ತುಂಡು ತುಣುಕುಗಳಂತೆ ಇರುತ್ತವೆ. ಇವುಗಳನ್ನು ಓದಿದರೆ ಚರಿತ್ರೆಯ ಹಿಂದಾಗಲೀ ಮುಂದಾಗಲೀ ಒಂದೂ ತಿಳಿಯುವುದಿಲ್ಲ. ಇಂತಹ ವಿಷಯಗಳಿಗೆ ಪೂರಕ ಸಾಮಗ್ರಿಗಳನ್ನು ಒದಗಿಸುವುದು ಮುಖ್ಯ. 'ಧ್ವನಿ ಸಂಸ್ಥೆ' ಎಂಬ ಸ್ವಯಂಸೇವಾ ಸಂಸ್ಥೆ ಈ ಬಗೆಯ ಪೂರಕ ಸಾಮಗ್ರಿಯನ್ನು ಒದಗಿಸಿ ಸಮಾಜದ ಪಾಠಗಳು ಮಗುವಿನ ಮನಸ್ಸಿನಲ್ಲಿ ಒಂದು ಸಂಪೂರ್ಣ ಅನುಭವವಾಗಿ ನೆಲೆ ನಿಲ್ಲುವಂತೆ ಸಹಕರಿಸುತ್ತಿದೆ. ಆದರೆ ಇಂತಹ ಪ್ರಯೋಗಗಳು ಎಲ್ಲೋ ಕೆಲವು ಬೆರಳೆಣಿಕೆಯ ಶಾಲೆಗಳಲ್ಲಿ ಮಾತ್ರ ಆಗುತ್ತಿದೆ.

ಸಾಂಸ್ಕೃತಿಕವಾಗಿ ಮುಖ್ಯವಾದ ಆದರೆ ಸ್ಥಳೀಯವಾಗಿ ಸರ್ವೇಸಾಮಾನ್ಯವಾಗಿರುವ ವಿಷಯಗಳನ್ನು ಮಕ್ಕಳಿಗೆ ತಿಳಿಸಿಕೊಡುವ ಪ್ರಯತ್ನ ನಮ್ಮ ಶಾಲೆಗಳಲ್ಲಿ ಆಗಬೇಕು. ಈ ಸ್ಮಾರಕ, ಕೋಟೆಕೊತ್ತಳಗಳು ಅಥವಾ ದೇವಸ್ಥಾನಗಳು ಅತಿ ಸಮೀಪದಲ್ಲೇ ಇರುವುದರಿಂದ ಇವು ಮಗುವಿನ ದಿನನಿತ್ಯದ ಸಾಮಾನ್ಯ ಅನುಭವವಾಗಿ ಉಳಿದುಬಿಡುತ್ತವೆ. ಹಾಗಾಗಿ ಮಕ್ಕಳು ತಮ್ಮದೇ ನೆಲದ ವಿಶಿಷ್ಟ ಸಂಗತಿಗಳನ್ನು ತೀರಾ ಸಾಮಾನ್ಯ ಎಂದು ಪರಿಗಣಿಸಿಬಿಡುತ್ತಾರೆ. ಮಕ್ಕಳಷ್ಟೇ ಏಕೆ, ದೊಡ್ಡವರೂ ಹಾಗೆಯೇ ತಿಳಿದಿರುತ್ತಾರೆ. ಸಾಂಸ್ಕೃತಿಕವಾಗಿ ವಿಶಿಷ್ಟವಾಗಿರುವ ಒಂದು ವಿಷಯ, ಹೆಮ್ಮೆ ಪಡಬಹುದಾದ ಒಂದು ಸಂಗತಿ ತನ್ನ ಪರಂಪರೆಯಲ್ಲಿದೆ ಎಂದು ಭಾವಿಸುವುದೇ ಮಗುವಿಗೆ ಒಂದು ಗಾಢ ಅನುಭವ. ಈ ಅನುಭವ ಮಗುವಿಗೆ ಶ್ರೇಷ್ಠ ವ್ಯಕ್ತಿಚಿತ್ರವನ್ನು ಕೊಡಬಹುದು. ಅಥವಾ ಕಾರಣಾಂತರಗಳಿಂದ ಮನದಾಳದಲ್ಲಿ ಬೇರೂರಿರುವ ಕೀಳರಿಮೆಯಿಂದ ಸ್ವಲ್ಪ ಮಟ್ಟಿಗೆ ಬಿಡಿಸಿಕೊಳ್ಳಲು ಸಹಾಯ ಮಾಡಬಹುದು. ತನ್ನದೇ ಪರಿಸರದ ಇತಿಹಾಸ, ಪರಂಪರೆ, ಪದ್ಧತಿಗಳನ್ನು ಅರಿಯುವುದು ಮಗುವಿನ ವ್ಯಕ್ತಿತ್ವ ವಿಕಾಸದ ದೃಷ್ಟಿಯಿಂದಲೂ ಬಹಳ ಮುಖ್ಯ. ಈ ಪ್ರಯತ್ನದಲ್ಲಿ ಮಗು ಹೇಗೆ ಪೂರ್ವಗ್ರಹದಿಂದ ಮುಕ್ತವಾದ ಮನಸ್ಸಿನ ಮೂಲಕ ಒಂದು ವಿಷಯವನ್ನು ಶಾಸ್ತ್ರೀಯ ಅಧ್ಯಯನದ ನೆಲೆಗಟ್ಟಿಗೆ ಒಳಪಡಿಸಿ ಅಧ್ಯಯನ ಮಾಡಬಹುದು ಎಂಬ ಪರಿಕಲ್ಪನೆಯನ್ನು ಪಡೆಯುತ್ತದೆ. ಹೀಗೆ 'ಸಾಮಾನ್ಯ' ಎಂದು ಕಂಡುಬರುವ ಎಲ್ಲದರ ಆಳದಲ್ಲೂ ಒಂದು 'ಅಸಾಮಾನ್ಯ' ಸಂಗತಿ ಇರಬಹುದು. ದೃಷ್ಟಿಕೋನ ಬದಲಿಸಿ ನೋಡಿದರೆ ಮಾತ್ರ ಇದನ್ನು ಕಾಣಲು ಸಾಧ್ಯ ಎಂಬ ಅರಿವನ್ನು ಮಗು ಈ ಅಧ್ಯಯನಗಳ ಮೂಲಕ ಪಡೆಯಲು ಸಾಧ್ಯವಾಗುತ್ತದೆ. ಜೊತೆಗೆ ತನ್ನ

ಸ್ಥಿತಿಗತಿಗಳನ್ನು ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ ಅರಿಯುವ ಮೂಲಕ 'ನಾನೇಕೆ ಇತರರಿಗಿಂತ ಹಿಂದೆ' ಅಥವಾ 'ನಾನೇಕೆ ಇತರರಿಗಿಂತ ಮುಂದೆ' ಎಂಬ ಕಾಡುವ ಪ್ರಶ್ನೆಗಳಿಗೆ ನಿಜವಾದ ಉತ್ತರಗಳನ್ನು ಕಂಡುಕೊಳ್ಳಲು ಸಾಧ್ಯವಾದೀತು. ಅಥವಾ ವರ್ತಮಾನದ ಅನ್ಯಾಯವನ್ನು ಚಾರಿತ್ರಿಕವಾಗಿ ಅರ್ಥ ಮಾಡಿಕೊಳ್ಳುತ್ತ ಭಾವನಾತ್ಮಕವಾಗಿ ಪ್ರತಿಕ್ರಿಯಿಸುವ ಬದಲು ಬೌದ್ಧಿಕವಾಗಿ ಸಮರ್ಪಕವಾದ ನಿಲುವನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು.

## ಸಂಸ್ಕೃತಿ ಮತ್ತು ಸ್ವಸ್ವರೂಪ

ಮೇಲಿನ ವಾದಸರಣಿಯನ್ನೇ ವಿಸ್ತರಿಸುತ್ತ ತನ್ನದೇ ನೆಲದ ಸಂಸ್ಕೃತಿ ಹೇಗೆ ವ್ಯಕ್ತಿತ್ವ ನಿರ್ಮಾಣದಲ್ಲಿ ಬಹು ದೊಡ್ಡ ಪಾತ್ರವನ್ನು ವಹಿಸುತ್ತದೆ ಎಂಬುವುದನ್ನು ವಿಶ್ಲೇಷಿಸೋಣ. ಅದರಲ್ಲೂ ಮುಖ್ಯವಾಗಿ ವ್ಯಕ್ತಿಯ ಸ್ವಸ್ವರೂಪದ ರೂಪರೇಖೆಗಳು ಹೇಗೆ ಸ್ಥಳೀಯ ಸಂಸ್ಕೃತಿಯಿಂದ ಪ್ರಭಾವಿತವಾಗುತ್ತವೆ ಎಂಬುದನ್ನು ಅರಿಯಲು ಪ್ರಯತ್ನಿಸೋಣ. ಬೆಳೆದುನಿಂತ ಪಟ್ಟಣಗಳನ್ನು ಗಣನೆಗೆ ತೆಗೆದುಕೊಂಡರೆ ಸಾಂಸ್ಕೃತಿಕ ಪಲ್ಲಟಗಳು ಇಡೀ ದೇಶದ ಮುಖ್ಯವಾಹಿನಿಯಾಗಿವೆ ಎಂಬ ಅಭಿಪ್ರಾಯ ಮೂಡುತ್ತದೆ. ಆದರೆ ನಮ್ಮ ಗ್ರಾಮೀಣಪ್ರದೇಶಗಳು ಇನ್ನೂ ಕೂಡ ತಮ್ಮ ಸಾಂಸ್ಕೃತಿಕ ಸೊಗಡನ್ನು ಉಳಿಸಿಕೊಂಡೇ ಇವೆ. ಹಾಗಾಗಿ ನಗರ ಪ್ರದೇಶಗಳನ್ನು ಪ್ರಧಾನವಾಗಿ ಗಣನೆಗೆ ತೆಗೆದುಕೊಳ್ಳುವ ನಮ್ಮ ಶಿಕ್ಷಣ ಗ್ರಾಮೀಣ ಪ್ರದೇಶಗಳಲ್ಲಿ ಸೋಲುತ್ತದೆ. ಈ ಕಾರಣದಿಂದ ಸಂಸ್ಕೃತಿ ಮತ್ತು ಶಿಕ್ಷಣ ಕುರಿತಾದ ಚರ್ಚೆ ಮುಖ್ಯವಾಗುತ್ತದೆ.

ಒಂದು ನಿರ್ದಿಷ್ಟ ಸಾಂಸ್ಕೃತಿಕ ಪರಿಸರ ವ್ಯಕ್ತಿಗೆ ತನ್ನದೇ ಆದ ಒಂದು ಸ್ವಸ್ವರೂಪವನ್ನು ಕೊಡುತ್ತದೆ. ಬದುಕಿನ ತಾತ್ತ್ವಿಕ ನೆಲೆಗಳು ಈ ಪರಿಸರದಿಂದ ಬಹಳವಾಗಿ ಪ್ರಭಾವಿತವಾಗುತ್ತವೆ. ಬದುಕಿನ ಭೌತಿಕ ಉದ್ದೇಶ, ಮಾನಸಿಕ ಮತ್ತು ಆಧ್ಯಾತ್ಮಿಕ ಉದ್ದೇಶಗಳಿಗೆ ಒಂದು ಆಕಾರವನ್ನು ನಿಗದಿಪಡಿಸುತ್ತದೆ. ಒಬ್ಬ ವ್ಯಕ್ತಿ ಏನು ಎಂಬುದನ್ನು ಅವನ ಸಂಸ್ಕೃತಿಯ ಹೊರತಾಗಿ ಕಲ್ಪಿಸಿಕೊಳ್ಳುವುದು ಅಸಾಧ್ಯವೇ ಸರಿ. ವ್ಯಕ್ತಿಯ ಕುರುಹು, ಅವನ ಅರಿವು ಈ ಸಂಸ್ಕೃತಿಯ ಆಧಾರದ ಮೇಲೆ ರೂಪುಗೊಳ್ಳುವುದು ಅನಿವಾರ್ಯ. ಜೊತೆಗೆ ಸಂಸ್ಕೃತಿ ಎಂಬುದು ಒಂದು ಜನಸಮುದಾಯ ಬಹಳ ಕಾಲದಿಂದಲೂ ಬದುಕಿನ ಅವಘಡಗಳ ನಡುವೆ ಬದುಕಿ ಬಾಳಲು ಸಹಾಯ ಮಾಡಿದ ರೀತಿನೀತಿಗಳ ಅನುಭವದ ಸಾರ ಕೂಡ. ಬದುಕಿನ ಅರ್ಥ ಕಂಡುಕೊಳ್ಳುವಾಗ ಜನರ ಜೀವನ ಕ್ರಮ ಅವರವರ ಭೌತಿಕ ಪರಿಸರದೊಡನೆ ನಿರ್ದಿಷ್ಟ ರೀತಿಯಲ್ಲಿ ಬೆಸೆದುಕೊಂಡು ಒಂದು ಸಾಮಾನ್ಯ ಕುರುಹನ್ನು, ಎಂದರೆ ಸ್ವಸ್ವರೂಪವನ್ನು ಅಥವಾ ಐಡೆಂಟಿಟಿಯನ್ನು ಪ್ರತಿಯೊಬ್ಬರಿಗೂ, ಪ್ರತಿಯೊಂದು ಸಮುದಾಯಕ್ಕೂ ನೀಡಿರುತ್ತದೆ. ಈ ಐಡೆಂಟಿಟಿಯ

ಮೂಲಭೂತ ಸ್ವರೂಪ ಒಂದೇ ಆಗಿರುತ್ತದೆ ಎಂದು ಭಾವಿಸಿದರೂ ಈ ಮೂಲಭೂತ ಸ್ವರೂಪದ ವಿಸ್ತರಣೆ–ವಿಕಾಸ ವ್ಯಕ್ತಿನಿಷ್ಠವಾಗಿದ್ದು ಅದು ಒಬ್ಬನ ಬೌದ್ಧಿಕ ಸಾಮರ್ಥ್ಯಕ್ಕೆ ಅನುಗುಣವಾಗಿರುತ್ತದೆ. ಈ ವ್ಯತ್ಯಾಸಗಳ ಪರಿಣಾಮ ಶೋಷಣೆಯ ಸಮಾಜವನ್ನು ರೂಪಿಸುವಂತೆಯೇ ಶೋಷಣಾರಹಿತ ಸಮಾಜದ ಆಶಯವನ್ನು ಕೆಲವರಲ್ಲಿ ಉಂಟು ಮಾಡುತ್ತದೆ.

## ಜನಸಂಖ್ಯೆ ಮತ್ತು ಅಸ್ಮಿತೆ

ಜಾಗತಿಕ ಬದಲಾವಣೆಗಳು–ಪಲ್ಲಟಗಳು ಕಳೆದ ಶತಮಾನದ ಆದಿಭಾಗದಲ್ಲೇ ಪ್ರಾರಂಭವಾದವು. ಭಾರತಕ್ಕೆ ಬ್ರಿಟಿಷರು ಬಂದದ್ದರಿಂದ ಆದ ಬದಲಾವಣೆಗಳ ಜೊತೆಗೆ ಯಂತ್ರ ಸಂಸ್ಕೃತಿಯ ಪ್ರವೇಶ, ವೈದ್ಯಕೀಯ ರಂಗದಲ್ಲಿ ಪ್ರಗತಿ ಮತ್ತು ಜನಸಂಖ್ಯೆಯ ಹೆಚ್ಚಳ ಇಡೀ ಸಾಂಸ್ಕೃತಿಕ ಪರಿಸರದ ಬಹುದೊಡ್ಡ ಪಲ್ಲಟಗಳಿಗೆ ಕಾರಣವಾದವು. ಭೌತಿಕ ಪರಿಸರದ ಪಲ್ಲಟಗಳು ಒಂದು ಜನಸಮುದಾಯದಲ್ಲಿ ಬಹಳ ಕಾಲದಿಂದಲೂ ನೆಲೆಗೊಂಡ ಪಾರಂಪರಿಕ ಚಿಂತನಾ ದಾಟಿಯ ಮೇಲೆ ಪ್ರಭಾವ ಬೀರುತ್ತವೆ. ಅನೇಕ ಆಂತರಿಕ ಸಂಘರ್ಷಗಳಿಗೂ ಕಾರಣವಾಗಬಹುದು. ಮೂಢನಂಬಿಕೆಗಳ ವಿಸರ್ಜನೆಯ ಜೊತೆಗೆ ಬದುಕಿನ ಕೆಲವು ಆರೋಗ್ಯಕರ ನಂಬಿಕೆಯ ನೆಲೆಗಳನ್ನು (ಮನುಷ್ಯ ಸಂಬಂಧಗಳ ವಿಷಯದಲ್ಲಿ) ಬಿಟ್ಟುಕೊಡಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಬದುಕಿನ ಅರ್ಥ, ಬದುಕಿನ ಬಯಕೆಗಳು ಬದಲಾಗುತ್ತವೆ. ಬಹಳ ಮುಖ್ಯವಾಗಿ ಜನಸಂಖ್ಯೆಯ ಹೆಚ್ಚಳ ಮನುಷ್ಯ ನಡವಳಿಕೆಯನ್ನು ಮೂಲಭೂತವಾಗಿ ಬದಲಾಯಿಸಿಬಿಡುತ್ತದೆ. ಒಂದು ವಿಶಾಲವಾದ ಮನೆಯಲ್ಲಿ ಮೂರು ಜನ ಇದ್ದಾಗ ಮನುಷ್ಯ ಸಂಬಂಧಗಳು ಹೇಗಿರುತ್ತವೆ ಎಂದು ನಾವು ಊಹಿಸಬಹುದು. ಇದೇ ಮನೆಯಲ್ಲಿ ಆರು ಜನ ಸೇರಿದಾಗ ಮನುಷ್ಯ ಸಂಬಂಧಗಳು ಹೇಗಿರುತ್ತವೆ ಅಥವಾ ಇದೇ ಮನೆಯಲ್ಲಿ ಹನ್ನೆರಡು ಅಥವಾ ಇಪ್ಪತ್ತನಾಲ್ಕು ಜನ ಒಟ್ಟಿಗೆ ವಾಸ ಮಾಡುವಾಗ ಮನುಷ್ಯ ಸಂಬಂಧಗಳು ಹೇಗಿರುತ್ತವೆ ಎಂಬುದ ನಾವು ಊಹಿಸಬಲ್ಲೆವು. ಮನೆ ಸಾಕಷ್ಟು ವಿಶಾಲವಾಗಿದೆ ಎಂದು ಭಾವಿಸುವುದರಿಂದ ಮೂರು ಜನರಿದ್ದ ಈ ಮನೆಗೆ ಮತ್ತೆ ಮೂವರು ಬಂದಾಗ ಸಂತೋಷ ಹೆಚ್ಚುತ್ತದೆ; ಸಂಬಂಧಗಳಲ್ಲಿ ಸೌಹಾರ್ದತೆ, ನಯವಿನಯಗಳಿರುತ್ತವೆ. ನಿಃಸ್ವಾರ್ಥವನ್ನು ಮೌಲ್ಯ ಎಂಬ ಕಾರಣಕ್ಕಾಗಿ ಆಚರಣೆ ಮಾಡುವ ಅಗತ್ಯವಿರುವುದಿಲ್ಲ. ಅದೊಂದು ಸಹಜಶೀಲವಾದ ಮೌಲ್ಯವಾಗಿರುತ್ತದೆ. ಏಕೆಂದರೆ ಎಲ್ಲವೂ ಎಲ್ಲರಿಗೂ ಸಾಕಾಗುವಷ್ಟು ಆ ಮನೆಯಲ್ಲಿ ಇರುತ್ತವೆ. ಇದೇ ಮನೆಗೆ ಆರು ಅಥವಾ ಹನ್ನೆರಡು ಜನ ಬಂದು ಸೇರಿದರೆ ಪ್ರತಿಯೊಬ್ಬನೂ ವೈಯಕ್ತಿಕವಾಗಿ ಅಭದ್ರತೆಯನ್ನು ಅನುಭವಿಸುತ್ತಾನೆ. ಪರಸ್ಪರ ತಮ್ಮ ಹಕ್ಕುಗಳನ್ನು ಮಾತಿನ ಮೂಲಕ, ಕೃತಿಯ ಮೂಲಕ ಸ್ಥಿರಪಡಿಸುತ್ತಲೇ ಇರಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಸಹಜ ನಿಃಸ್ವಾರ್ಥತೆ ಇದ್ದ ಮನೆಯಲ್ಲಿ ಜನಸಂಖ್ಯೆ

ಹೆಚ್ಚಾದಂತೆ ಸ್ವಾರ್ಥವೂ ಹೆಚ್ಚಾಗತೊಡಗುತ್ತದೆ. ಜೊತೆಗೆ ವ್ಯಕ್ತಿ ತನ್ನದೇ ಸ್ವಸ್ವರೂಪ ಅಥವಾ ಅಸ್ಮಿತೆಯ ಬಗ್ಗೆ ಗಲಿಬಿಲಿಗೆ ಒಳಗಾಗುತ್ತಾನೆ. ನೆಮ್ಮದಿಯ ಪರಿಸರದಲ್ಲಿ ತಾತ್ವಿಕ ನೆಲೆಗಳಿಗೆ ಬದ್ಧವಾಗಿದ್ದ ಅಸ್ಮಿತೆ ಸ್ಪರ್ಧಾತ್ಮಕ ಪರಿಸರದಲ್ಲಿ ಸುಲಭವಾಗಿ ವಸ್ತುಲಾಭವನ್ನು ಒದಗಿಸಿಕೊಡುವ ಅಸ್ಮಿತೆಯಾಗಿ ಪರಿವರ್ತನೆಯಾಗುತ್ತದೆ. ಮನುಷ್ಯ ತನ್ನ ಉದಾತ್ತ ಮುಖವನ್ನು ಸುಲಭವಾಗಿ ತೊರೆದು ಬದುಕುಳಿಯಲು ನೆರವಾಗುವ ಯಾವುದನ್ನೂ ಅರಿಸಿಕೊಳ್ಳಲು ತವಕಿಸುತ್ತಾನೆ. ಜಾಗತೀಕರಣ ಈ ಬಗೆಯ ತವಕಗಳನ್ನು ತನ್ನ ಮೂಲಬಂಡವಾಳವನ್ನಾಗಿ ಮಾಡಿಕೊಂಡು ಮುನ್ನಡೆಯುತ್ತದೆ. ಈ ತವಕಗಳಿಗೆ ಪರಿಸರದ ವಾಸ್ತವತೆಗಳಷ್ಟೇ ಕಾರಣವಾಗಬೇಕಾಗಿಲ್ಲ. ಮನುಷ್ಯನ ದುರಾಸೆಯನ್ನೇ ಬಂಡವಾಳ ಮಾಡಿಕೊಂಡರೆ ಸಾಕು. ಮನುಷ್ಯನ ಮೂಲ ದೌರ್ಬಲ್ಯಗಳೇ ಜಾಗತೀಕರಣದ ಬಂಡವಾಳ.

ಹೀಗೆ ಜಾಗತೀಕರಣದ ಪ್ರಭಾವದಿಂದಾಗಿ ಇಡೀ ಜನಸಮುದಾಯ ತನ್ನ ಅಸ್ಮಿತೆಯನ್ನು ಕಳೆದುಕೊಳ್ಳುತ್ತಿದೆ. ಜನಸಮುದಾಯದ ಮೇಲೆ ಈಗ ಗಾಢವಾಗಿ ಪ್ರಭಾವ ಬೀರುತ್ತಿರುವ ತಾಂತ್ರಿಕ ಸಾಧ್ಯತೆಗಳು ಮತ್ತು ದೊಡ್ಡದಾಗಿ ಬೆಳೆಯಬೇಕು ಎಂಬ ಗೀಳು ಈ ಹೊಸ ಅಸ್ಮಿತೆಯ ಭಾಗವಾಗಿ ರೂಪುಗೊಳ್ಳುತ್ತಿವೆ. ವಾಸ್ತವವಾಗಿ ನೋಡಿದರೆ ಇದೊಂದು ಪಟ್ಟಣವಾಸಿಗಳ ಪಿಡುಗು. ಗ್ರಾಮೀಣ ಪರಿಸರದಲ್ಲಿ ಇನ್ನೂ ಕೂಡ ಸ್ಥಳೀಯ ಸಾಂಸ್ಕೃತಿಕ ಆಚರಣೆಗಳು ಉಳಿದುಕೊಂಡಿವೆ. ನಮ್ಮ ಗ್ರಾಮೀಣ ಮಕ್ಕಳು ಮೊದಲಿಗೆ ತಾವು ಏನು ಎಂಬುದನ್ನು, ಎಂದರೆ ಸಾಂಸ್ಕೃತಿಕವಾಗಿ ತಾವು ಯಾವ ಪರಂಪರೆಗೆ ಸೇರಿದವರು ಎಂಬುದನ್ನು ಬುದ್ಧಿಪೂರ್ವಕವಾಗಿ ಅರಿತುಕೊಂಡು ಆ ಅರಿವು ನೀಡುವ ಆತ್ಮವಿಶ್ವಾಸದ ಮೇಲೆ ತಮ್ಮ ಅಸ್ಮಿತೆಯನ್ನು ಅಥವಾ ಸ್ವಸ್ವರೂಪವನ್ನು ಕಟ್ಟಿಕೊಳ್ಳಬೇಕು. ಇದೊಂದು ಮನಃಶಾಸ್ತ್ರೀಯವಾದ ಅಗತ್ಯ. ಒಂದು ಪರಂಪರೆಗೆ, ಒಂದು ಸಂಸ್ಕೃತಿಗೆ ಸೇರಿದ್ದೇನೆ ಎಂಬುದನ್ನು ಮೌಲ್ಯನಿಷ್ಕರ್ಷೆಗೆ ಒಳಪಡಿಸದೆ, ಇದ್ದದ್ದನ್ನು ಇದ್ದ ಹಾಗೆಯೇ ಅರಿಯುವುದು ಮತ್ತು ಈ ಅರಿವಿನ ಬಗ್ಗೆ ಹುಟ್ಟುವ ಒಂದು ತೆರೆದ ಮನಸ್ಸು ವ್ಯಕ್ತಿತ್ವನಿರ್ಮಾಣದ ಮೊದಲ ಹಂತಗಳಲ್ಲಿ ಬಹಳ ಮುಖ್ಯವಾದದ್ದು. ದಲಿತ ಚಳುವಳಿಯ ಸಂದರ್ಭದಲ್ಲಿ ತಮ್ಮ ಸ್ಥಿತಿಗತಿಗಳನ್ನು ಯಾವ ಮುಚ್ಚುಮರೆಯೂ ಇಲ್ಲದೆ ಅರಿವಿಗೆ ತಂದುಕೊಂಡವರು ಸ್ವತಂತ್ರ ವ್ಯಕ್ತಿತ್ವವನ್ನು ಗಳಿಸಿಕೊಂಡು ಅದ್ಭುತವಾದ ಸೃಜನಶೀಲತೆಯನ್ನು ಮೆರೆದರು ಎಂಬುದು ಈಗ ಇತಿಹಾಸ. ಮತ್ತೆ ಕೆಲವರು ತಮ್ಮ ವಾಸ್ತವ ನೆಲೆಗಳನ್ನು ಮರೆಮಾಚುವ ಮೂಲಕ, ಅದನ್ನು ತಮ್ಮ ಅರಿವಿಗೆ ತಂದುಕೊಳ್ಳದೆ ನಿರಾಕರಿಸುವ ಚಾಕಚಕ್ಯತೆಯನ್ನು ತೋರಿದರು. ಇಂತಹ ಜನ ಯಾವ ಸೃಜನಶೀಲತೆಯೂ ಇಲ್ಲದ ಎಡಬಿಡಂಗಿಗಳಾಗಿ ಅಥವಾ ದಲಿತ ಬ್ರಾಹ್ಮಣರಾಗಿ ಕೊನೆಗೊಂಡಿರುವುದನ್ನು ನಾವು ನೋಡುತ್ತೇವೆ. ಒಟ್ಟಿನಲ್ಲಿ ನಮ್ಮ ಸಾಂಸ್ಕೃತಿಕ ಅಂಶಗಳನ್ನು ಅವುಗಳ ವಾಸ್ತವ ನೆಲೆಗಳಲ್ಲಿ ಅರಿಯುವ ಮೂಲಕ ತಮ್ಮ ಸಾಂಸ್ಕೃತಿಕ ಅಸ್ಮಿತೆಗಳನ್ನು ಗುರುತಿಸಿಕೊಂಡು

ಅದನ್ನೇ ಸೋಪಾನ ಮಾಡಿಕೊಂಡು ಪುಟಿದು ಹೊಸ ಆಯಾಮಕ್ಕೆ ಏರುವುದೇ ನಿಜವಾದ ವ್ಯಕ್ತಿವಿಕಾಸ. ಈ ದೃಷ್ಟಿಯಿಂದ ಗ್ರಾಮೀಣ ಪ್ರದೇಶದ ಸ್ಥಳೀಯ ಸಂಸ್ಕೃತಿ ಬಹಳ ಮುಖ್ಯವಾಗುತ್ತದೆ. ನಮ್ಮ ಶಿಕ್ಷಣ ಇದರ ಮಹತ್ತ್ವವನ್ನು ಮನಗಾಣುವುದು ಅಗತ್ಯ

**ಗುಣಾತ್ಮಕ ಶಿಕ್ಷಣ**

ನಾವೇ ನಡೆಸುತ್ತಿದ್ದ ಶಾಲೆ. ನಾಲ್ಕನೆಯ ತರಗತಿಯ ಮಕ್ಕಳ ಗಲಾಟೆ ಹೆಚ್ಚಾಗಿದೆ. ಅಧ್ಯಾಪಕರು ಇದ್ದಾರೋ ಇಲ್ಲವೋ, ಏನಾಗುತ್ತಿದೆ ಎಂದು ನೋಡಲು ಹೋದೆ. ತರಗತಿಯ ಅಧ್ಯಾಪಕ ಮಕ್ಕಳಿಗೆ ಕ್ವಿಜ್ ನಡೆಸುತ್ತಿದ್ದಾರೆ. ಅದು ವರ್ಷದ ಕೊನೆ, ಮಾರ್ಚ್ ತಿಂಗಳು. ತಾವು ವರ್ಷವಿಡೀ ಮಾಡಿದ ಪಾಠಗಳನ್ನು ಮಕ್ಕಳು ಹೇಗೆ ಅರಗಿಸಿಕೊಂಡಿದ್ದಾರೆ ಎಂದು ಪರೀಕ್ಷಿಸುವುದರ ಜೊತೆಗೆ ಮುಂಬರುವ ಪರೀಕ್ಷೆಗಳಲ್ಲಿ ಮಕ್ಕಳು ಪ್ರಶ್ನೆಗಳಿಗೆ ಉತ್ತರ ಬರೆಯಲು ಈ ಕ್ವಿಜ್ ಸಹಾಯ ಮಾಡುತ್ತದೆ ಎಂಬುದು ಈ ಅಧ್ಯಾಪಕನ ನಂಬಿಕೆ. ಪ್ರತಿಯೊಂದು ಪ್ರಶ್ನೆಗೂ ಮಕ್ಕಳು ತಾ ಮುಂದು ನಾ ಮುಂದು ಎಂದು ಕೈ ಮೇಲೆತ್ತಿ ಉತ್ತರ ಕೊಡುತ್ತಿದ್ದಾರೆ. ಮಕ್ಕಳಿಗೆ ಯಾವ ಭಯ-ಸಂಕೋಚಗಳೂ ಇಲ್ಲ. ಏಕೆಂದರೆ ನಮ್ಮ ಈ ಶಾಲೆ ಶಿಶುಕೇಂದ್ರಿತ ಶಿಕ್ಷಣದಲ್ಲಿ ನಂಬಿಕೆ ಇಟ್ಟಿದೆ, ಮಕ್ಕಳನ್ನು ಯಾವುದೇ ಕಾರಣಕ್ಕೂ ಹೊಡೆಯುವುದಿರಲಿ, ಗಟ್ಟಿಯಾಗಿ ಬೈಯುವುದೂ ಇಲ್ಲ. ಮಕ್ಕಳ ಸ್ವತಂತ್ರ ಆಲೋಚನೆಗಳಿಗೆ, ಸ್ವತಂತ್ರ ನಿಲುವುಗಳಿಗೆ ಶಿಕ್ಷಕರು ಪ್ರಜ್ಞಾಪೂರ್ವಕವಾಗಿ ಮನ್ನಣೆ ನೀಡುತ್ತಾರೆ. ಈ ಎಲ್ಲ ಕಾರಣದಿಂದ ಮಕ್ಕಳು ಉತ್ಸಾಹದಿಂದ ಪುಟಿಯುತ್ತಿದ್ದಾರೆ. ಧೈರ್ಯವಾಗಿ ಉತ್ತರ ಹೇಳುತ್ತಾರೆ. ನನಗೆ ಬಹಳ ಸಂತೋಷವಾಯಿತು. ಈ ಶಾಲೆಯಲ್ಲಿ ಮಕ್ಕಳ ಕಲಿಕೆ ಚೆನ್ನಾಗಿ ನಡೆಯುತ್ತಿದೆ ಎಂಬುದು ನಿಸ್ಸಂಶಯವಾಗಿ ಕಾಣುತ್ತಿತ್ತು.

ಹೀಗೆ ಪ್ರಶ್ನೆ-ಉತ್ತರ ಸಾಗುತ್ತಿರುವಾಗ ಅಧ್ಯಾಪಕ ಪಾರದರ್ಶಕ ವಸ್ತುಗಳು - ಅಪಾರದರ್ಶಕ ವಸ್ತುಗಳ ಬಗ್ಗೆ ಪ್ರಶ್ನೆ ಕೇಳಿದರು.

ಪ್ರ : ಪಾರದರ್ಶಕ ವಸ್ತುಗಳು ಎಂದರೆ ಯಾವುವು?

ಉ : ಯಾವುದರ ಮೂಲಕ ವಸ್ತುಗಳು ಕಾಣುತ್ತವೆಯೋ ಅವು ಪಾರದರ್ಶಕ ವಸ್ತುಗಳು.

ಪ್ರ : ಅಪಾರದರ್ಶಕ ವಸ್ತುಗಳು ಎಂದರೆ ಯಾವುವು?

ಉ : ಯಾವುದರ ಮೂಲಕ ವಸ್ತುಗಳು ಕಾಣುವುದಿಲ್ಲವೊ ಅವು ಅಪಾರದರ್ಶಕ ವಸ್ತುಗಳು.

ಪಠ್ಯಪುಸ್ತಕದ ನುಡಿಗಟ್ಟನ್ನೆ ಮಕ್ಕಳು ಪುನರುಚ್ಚರಿಸುತ್ತಿದ್ದರು. ನಾನು ಈ ಕ್ವಿಜ್‌ಗೆ ಮತ್ತೊಂದು ಪ್ರಶ್ನೆಯನ್ನು ಸೇರಿಸಿದೆ – ಪಾರದರ್ಶಕ ವಸ್ತುಗಳ ಮೂಲಕ ವಸ್ತುಗಳು ಏಕೆ ಕಾಣುತ್ತವೆ ಮತ್ತು ಅಪಾರದರ್ಶಕ ವಸ್ತುಗಳ ಮೂಲಕ ವಸ್ತುಗಳು ಏಕೆ ಕಾಣುವುದಿಲ್ಲ?

ಎಲ್ಲಾ ಮಕ್ಕಳು ಕೈ ಮೇಲೆತ್ತಿದರು. ಒಬ್ಬೊಬ್ಬರಾಗಿ ಉತ್ತರ ಹೇಳುತ್ತ ಬಂದರು :

ಕಾಣುತ್ತದೆ – ಏಕೆಂದರೆ ಅದು ಪಾರದರ್ಶಕ ವಸ್ತು.

"ಕಾಣುವುದಿಲ್ಲ – ಏಕೆಂದರೆ ಅದು ಅಪಾರದರ್ಶಕ ವಸ್ತು."

ನಾನು ಮತ್ತೆ ಅದೇ ಪ್ರಶ್ನೆಯನ್ನು ಪುನಃ ಕೇಳಿದೆ. ಪಾರದರ್ಶಕ ವಸ್ತುಗಳ ಮೂಲಕ ಏಕೆ ಕಾಣುತ್ತದೆ? ಅಪಾರದರ್ಶಕ ವಸ್ತುಗಳ ಮೂಲಕ ವಸ್ತುಗಳು ಏಕೆ ಕಾಣುವುದಿಲ್ಲ?

ಮಕ್ಕಳು ಕೊಂಚ ತಬ್ಬಿಬಾದರು. ಅಧ್ಯಾಪಕ ಸಪ್ಪೆ ಮುಖ ಹಾಕಿಕೊಂಡು ನಿಂತುಕೊಂಡ. ಆ ತರಗತಿಯಲ್ಲಿದ್ದ ಮಕ್ಕಳೆಲ್ಲ ನಿಜವಾಗಿಯೂ ಬುದ್ಧಿವಂತರೆ. ಅಧ್ಯಾಪಕ ಅನೇಕ ಸಂಜ್ಞೆಗಳನ್ನು ಮಾಡಲು ಪ್ರಯತ್ನಿಸಿದ. ನಾನು ಅಧ್ಯಾಪಕನಿಗೆ ಸುಮ್ಮನಿರುವಂತೆ ಹೇಳಿದೆ. ಮಕ್ಕಳೇ ಯೋಚಿಸಿ ಹೇಳಲಿ ಎಂದು ಆ ತರಗತಿಗೆ ಗಾಜಿನ ಹಾಳೆಯನ್ನು ತರಿಸಿದೆ. ಮೊಂಬತ್ತಿ ಹಚ್ಚಿ ಗಾಜಿನ ಹಿಂದೆ ಇಟ್ಟೆ. "ಉರಿಯುತ್ತಿರುವ ಈ ಮೊಂಬತ್ತಿ ನಿಮಗೆ ಕಾಣುತ್ತಿದೆಯೆ" ಎಂದು ಕೇಳಿದೆ. "ಕಾಣುತ್ತಿದೆ; ಏಕೆಂದರೆ ಗಾಜು ಪಾರದರ್ಶಕ ವಸ್ತು" ಎಂದರು ಮಕ್ಕಳು. ಒಂದು ಪುಸ್ತಕವನ್ನು ಅಡ್ಡಲಾಗಿ ಹಿಡಿದು "ಈಗ ಮೊಂಬತ್ತಿ ಕಾಣುತ್ತಿದೆಯೆ" ಎಂದು ಕೇಳಿದೆ. ಮಕ್ಕಳು ಹೇಳಿದರು "ಮೊಂಬತ್ತಿ ಕಾಣುವುದಿಲ್ಲ, ಏಕೆಂದರೆ ಪುಸ್ತಕ ಅಪಾರದರ್ಶಕ ವಸ್ತು."

ನಾನು ಅದೇ ಪ್ರಶ್ನೆಯನ್ನು ಪುನಃ ಮುಂದಿಟ್ಟೆ. ಪಾರದರ್ಶಕ ವಸ್ತುವಿನ ಮೂಲಕ ಎಂದರೆ ಈ ಗಾಜಿನ ಮೂಲಕ ಉರಿಯುತ್ತಿರುವ ಮೇಣದ ಬತ್ತಿ ಏಕೆ ಕಾಣುತ್ತದೆ; ಪುಸ್ತಕದ ಮೂಲಕ ಏಕೆ ಕಾಣುವುದಿಲ್ಲ?

ಎಲ್ಲ ಮಕ್ಕಳು ಉತ್ತರಿಸಿದ್ದು – ಮನುಷ್ಯ ತನ್ನ ಅನುಕೂಲಕ್ಕಾಗಿ ಕೆಲವು ಪಾರದರ್ಶಕ ವಸ್ತುಗಳನ್ನು, ಕೆಲವು ಅಪಾರದರ್ಶಕ ವಸ್ತುಗಳನ್ನು ತಯಾರಿಸಿರುತ್ತಾನೆ. ಪಾರದರ್ಶಕ ವಸ್ತುಗಳ ಮೂಲಕ ವಸ್ತು ಕಾಣುತ್ತದೆ. ಅಪಾರದರ್ಶಕ ವಸ್ತುವಿನ ಮೂಲಕ ವಸ್ತು ಕಾಣುವುದಿಲ್ಲ. ಇದನ್ನೂ ಸಹ ಈ ಅಧ್ಯಾಪಕ ಪಠ್ಯ ಪುಸ್ತಕದಲ್ಲಿರುವಂತೆಯೇ ತಿಳಿಸಿಕೊಟ್ಟಿದ್ದ, ಅದನ್ನೆ ಮಕ್ಕಳು ಪುನರುಚ್ಚರಿಸಿದರು.

ನಾನು ಎಷ್ಟೇ ಪ್ರಯತ್ನಪಟ್ಟರೂ ಮಕ್ಕಳಿಂದ ನಿರೀಕ್ಷಿತ ಉತ್ತರ ದೊರೆಯಲಿಲ್ಲ. ಅನಂತರ ವಸ್ತುಗಳು ನಮ್ಮ ಕಣ್ಣಿಗೆ ಹೇಗೆ ಕಾಣುತ್ತದೆ ಎಂಬ ಬಗ್ಗೆ ಚರ್ಚೆ ಪ್ರಾರಂಭಿಸಿದೆ. "ಕತ್ತಲಲ್ಲಿ ವಸ್ತುಗಳು ಕಾಣುತ್ತವೆಯೆ" ಎಂದು ಕೇಳಿದೆ. ವಂದನಾ ಹೇಳಿದಳು "ನನ್ನ ಕಣ್ಣು ಚೆನ್ನಾಗಿದೆ ಕತ್ತಲಲ್ಲೂ ನನಗೆ ವಸ್ತುಗಳು ಕಾಣುತ್ತವೆ". ಕೆಲವು ಮಕ್ಕಳು ಇದನ್ನು ಪ್ರಶ್ನಿಸಿದರು. ರಾತ್ರಿ ಮಲಗುವ ಮುನ್ನ ಕೋಣೆಯ ದೀಪ ಆರಿದಾಗ ಏನೂ

ಕಾಣುವುದಿಲ್ಲವಲ್ಲ ಎಂದು ಆಕೆಯ ಗೆಳತಿಯರು ಹೇಳಿದರು. ಇನ್ನು ಕೆಲವು ಮಕ್ಕಳು ಸೂರ್ಯನ ಬೆಳಕಿನಲ್ಲಿ ಮಾತ್ರ ನಮಗೆ ವಸ್ತುಗಳು ಕಾಣುತ್ತವೆ ಎಂಬ ವಾದ ಮುಂದಿಟ್ಟರು. ಸೂರ್ಯ ಇಲ್ಲದಾಗ ವಿದ್ಯುತ್ ದೀಪಗಳಿಂದ ವಸ್ತುಗಳು ಕಾಣುತ್ತವೆ ಎಂದು ಪವನ್ ಹೇಳಿದ. ಹೀಗೆ ಚರ್ಚೆ ನಡೆಯಿತು.

ಒಟ್ಟಿನಲ್ಲಿ ವಸ್ತುಗಳು ಬೆಳಕಿನಿಂದಾಗಿ ನಮ್ಮ ಕಣ್ಣಿಗೆ ಕಾಣಿಸುತ್ತವೆ ಎಂಬ ಮೂಲ ಪರಿಕಲ್ಪನೆ ಮಕ್ಕಳಲ್ಲಿ ಉಂಟಾಗಿಯೇ ಇರಲಿಲ್ಲ. ವಸ್ತುಗಳ ಮೇಲೆ ಬಿದ್ದ ಬೆಳಕು ನಮ್ಮ ಕಣ್ಣನ್ನು ಪ್ರವೇಶಿಸುವುದರಿಂದ ನಮ್ಮ ಅಕ್ಷಿಪಟಲದ ಮೇಲೆ ಚಿತ್ರ ಮೂಡುತ್ತದೆ. ಹಾಗಾಗಿ ವಸ್ತುಗಳು ನಮ್ಮ ಕಣ್ಣಿಗೆ ಕಾಣುತ್ತವೆ ಎಂಬ ಪರಿಕಲ್ಪನೆಯನ್ನು ಮೊದಲು ಮಕ್ಕಳಲ್ಲಿ ಮೂಡಿಸದೆ ಮಕ್ಕಳು ಪಾರದರ್ಶಕ-ಅಪಾರದರ್ಶಕ ವಸ್ತುಗಳ ದೊಡ್ಡ ಪಟ್ಟಿಯನ್ನು ಮಾಡಿದರೆ ಏನು ಪ್ರಯೋಜನ?

ನಾನು ಅಧ್ಯಾಪಕನನ್ನು ಕೇಳಿದೆ : "ನೀವೇಕೆ ಒಂದು ದೊಡ್ಡ ಕಪ್ಪು ಬಟ್ಟೆಯನ್ನು ತಂದು ಮಗುವಿಗೆ ಪೂರ್ತಿಯಾಗಿ ಹೊದಿಸಿ ಕತ್ತಲು ಮಾಡಿ ನಿಮಗೇನಾದರೂ ಕಾಣುತ್ತದೆಯೇ ಅಥವಾ ಇಲ್ಲವೇ? ಎಂದು ಕೇಳಲಿಲ್ಲ? ಕೇವಲ ಪಾರದರ್ಶಕ – ಅಪಾರದರ್ಶಕ ವಸ್ತುಗಳ ಬಗ್ಗೆ ಹೇಳುತ್ತಿದ್ದೀರಿ. ಆದರೆ ಏಕೆ ಕೆಲವು ವಸ್ತುಗಳು ಪಾರದರ್ಶಕವಾಗಿವೆ, ಕೆಲವು ವಸ್ತುಗಳು ಅಪಾರದರ್ಶಕವಾಗಿವೆ ಎಂಬ ಪ್ರಶ್ನೆಯನ್ನು ನೀವು ಮಕ್ಕಳಿಗೆ ಹಾಕಲಿಲ್ಲವಲ್ಲ, ಏಕೆ?"

ಆ ಅಧ್ಯಾಪಕ ಹೇಳಿದ "ಸರ್, ಅದು ಐದನೇ ತರಗತಿಯ ಸಿಲಬಸ್. ನಾಲ್ಕನೇ ತರಗತಿಗೆ ಇದು ಬರುವುದಿಲ್ಲ"! ಸಿಲಬಸ್ ಪ್ರಕಾರ ತಾನು ನಿಷ್ಠೆಯಿಂದ ಪಾಠ ಮಾಡುತ್ತಿರುವ ಕುರಿತು ಸಮಜಾಯಿಶಿ ಅವನ ಧ್ವನಿಯಲ್ಲಿತ್ತು. ಈ ನಿಷ್ಠೆ ನನಗೆ ಒಂದು ಅನಿಷ್ಟವಾಗಿ ಕಾಣುತ್ತಿತ್ತು. ಏಕೆಂದರೆ ಇದು ನಿಜವಾದ ಜ್ಞಾನಾರ್ಜನೆಯ ಸಂತೋಷವನ್ನು ಕಸಿದುಕೊಂಡಿತ್ತು. ಮಕ್ಕಳಿಗೆ ತಿಳಿಸಿ ಹೇಳುತ್ತ ಸಂತೋಷಪಡುವ ಅವಕಾಶವನ್ನು ಹೊಸಕಿ ಹಾಕಿತ್ತು.

ಬೆಳಕಿನಲ್ಲಿ ನೋಡುವ ಕ್ರಿಯೆ ಎಷ್ಟು ಸಹಜವಾಗಿದೆ ಎಂದರೆ ಅದಕ್ಕೊಂದು ವಿಶ್ಲೇಷಣೆ ಬೇಕೆಂದು ಮಕ್ಕಳಿಗೆ ಅನಿಸುವುದೇ ಇಲ್ಲ. ಮೇಲೆ ಎಸೆದ ವಸ್ತುಗಳು ಕೆಳಗೆ ಬೀಳುವುದನ್ನು ಇಡೀ ಮನುಷ್ಯ ಜನಾಂಗ ನ್ಯೂಟನ್ ಬರುವವರೆಗೂ ಪ್ರಶ್ನಿಸಲೇ ಇಲ್ಲ. ಅದೊಂದು ಸಹಜ ವಿದ್ಯಮಾನ ಎಂದು ಭಾವಿಸಿ ಸುಮ್ಮನೆ ಇತ್ತು. ನ್ಯೂಟನ್ ಈ ವಿದ್ಯಮಾನವನ್ನು ಪ್ರಶ್ನಿಸಿದ. ಹಾಗಾಗಿ ಅತ್ಯಂತ ಗಂಭೀರವಾದ ವಿಜ್ಞಾನದ ಹೊಸ ಜಗತ್ತೊಂದು ನಮ್ಮ ಮುಂದೆ ತೆರೆದುಕೊಂಡಿತು.

ಬೆಳಕಿನಲ್ಲಿ ವಸ್ತುಗಳು ಕಾಣುವುದು ಅತ್ಯಂತ ಸಹಜ ಸಂಗತಿಯಾಗಿದ್ದು, ಈ ವಿದ್ಯಮಾನದ ಬಗ್ಗೆ ಪ್ರಶ್ನೆಗಳು ಹುಟ್ಟುವುದೇ ಇಲ್ಲ. ಹೀಗೆ ಪ್ರಶ್ನೆ ಹುಟ್ಟುವಂತಹ ಒಂದು ವಾತಾವರಣವನ್ನು ನಿರ್ಮಿಸುವುದೇ ಶೈಕ್ಷಣಿಕ ಚಟುವಟಿಕೆ. ಅಧ್ಯಾಪಕನೊಬ್ಬ ಇಂತಹ ಚಟುವಟಿಕೆಯನ್ನು ಸೃಷ್ಟಿಸದೆ ಹೋದರೆ, ಅದನ್ನು ಮಕ್ಕಳನ್ನೆಲ್ಲ ಸೇರಿಸಿ ಮಾಡಿಸದೆ

ಹೋದರೆ ಬೆಳಕಿಗೆ ಸಂಬಂಧಪಟ್ಟ ಮೂಲ ವೈಜ್ಞಾನಿಕ ಪರಿಕಲ್ಪನೆ – "ಬೆಳಕಿನ ಸಹಾಯದಿಂದ ಮಾತ್ರ ನಾವು ನೋಡಬಹುದು" ಎಂಬುದು ಮಕ್ಕಳ ಮನಸ್ಸಿನಲ್ಲಿ ಬೇರೂರುವುದೇ ಇಲ್ಲ. ಇಂತಹ ಒಂದು ಪ್ರಶ್ನೆ ಅಧ್ಯಾಪಕನಿಗೆ ಎಂದೂ ಬರದೆಹೋದರೆ ಅದರ ಕುರಿತಾಗಿ ಚರ್ಚೆ ಸಾಧ್ಯವಾಗುವುದಾದರೂ ಹೇಗೆ? ಈ ಸಾಧ್ಯತೆಯನ್ನೇ ಕಾಣದಾದಾಗ ಕುರುಡು ಪಾಠ (Rote Learning) ಒಂದೇ ಶಿಕ್ಷಣದ ಸಾಧ್ಯತೆಯಾಗುತ್ತದೆ.

ಶಾಲೆಯ ಆಡಳಿತ ಅಧ್ಯಾಪಕನಿಗೆ ಬಗೆ ಬಗೆಯ ಭೌತಿಕ ಸವಲತ್ತುಗಳನ್ನು, ಸಂಪನ್ಮೂಲಗಳನ್ನು ಒದಗಿಸಿಕೊಡಬಹುದು. ಕೇಳುವ ವಸ್ತುಗಳನ್ನೆಲ್ಲ ತಂದುಕೊಡಬಹುದು. ಅಪಾರವಾಗಿ ಹಣ ಖರ್ಚು ಮಾಡಬಹುದು. ಆದರೆ ಅಧ್ಯಾಪಕನಲ್ಲೆ 'ಒಳಗಿನ ಬೆಳಕು' ಇಲ್ಲವಾದರೆ ಆ ಬೆಳಕನ್ನು ತಂದು ಕೊಡುವುದಾದರೂ ಹೇಗೆ?

ಇಂತಹ ಅಧ್ಯಾಪಕರಲ್ಲೂ ಸಾಧ್ಯತೆಗಳನ್ನು ನಾವು ಗುರುತಿಸಬೇಕು. ಅವರೊಡನೆ ಮೇಲೆ ಉಲ್ಲೇಖಿಸಿದ ತರಗತಿ ಸಂವಹನ ಕುರಿತು ಚರ್ಚಿಸಬೇಕು. ಮಕ್ಕಳಿಗೆ ಹೇಳಿ ಕೊಡುವಾಗ ಹೇಗೆ ಮಕ್ಕಳ ಕಣ್ಣಿನ ಮೂಲಕವೇ ಇಡೀ ಜಗತ್ತನ್ನು ನಾವು ನೋಡಲು ಸಾಧ್ಯವಾಗಬೇಕು ಎಂಬುದನ್ನು ಕುರಿತು ಚಿಂತಿಸಿ ಚರ್ಚೆ ಮಾಡಬೇಕು. ಒಂದು ಮೂಲ ಪರಿಕಲ್ಪನೆಯ ಬಗ್ಗೆ ಮಗುವಿಗೆ ಸ್ಪಷ್ಟತೆ ಮೂಡಿದರೆ ಅನಂತರ ಅದೇ ವಿಷಯಕ್ಕೆ ಸಂಬಂಧಪಟ್ಟಂತೆ ಮಗುವಿನ ಜ್ಞಾನ ಅರ್ಥವತ್ತಾಗಿ ವಿಸ್ತಾರಗೊಳ್ಳುತ್ತದೆ ಮತ್ತು ಸಮಗ್ರವಾಗಿರುತ್ತದೆ. ಪರಿಪೂರ್ಣ ಜ್ಞಾನ ಉಂಟಾಗಬೇಕಾದರೆ ಮೂಲ ಪರಿಕಲ್ಪನೆಯನ್ನು ಸ್ಪಷ್ಟವಾಗಿ ಅರಿತು ಆ ಅರಿವಿನ ಆಧಾರದ ಮೇಲೆ ಮುಂದುವರಿದ ಕಲಿಕೆಗಳು ಸಾಧ್ಯವಾಗಬೇಕು. ಬೆಳಕಿನಿಂದಾಗಿ ವಸ್ತುಗಳು ಕಾಣುತ್ತವೆ ಎಂಬುದು ಮೂಲ ಪರಿಕಲ್ಪನೆ. ಕೆಲವು ವಸ್ತುಗಳ ಹಿಂದೆ ಇರುವ ಪದಾರ್ಥಗಳು ನಮಗೆ ಕಾಣುತ್ತವೆ ಎಂದ ಮೇಲೆ ಬೆಳಕು ಈ ವಸ್ತುಗಳ ಮೂಲಕ ಹಾದುಬರುತ್ತದೆ; ಇಂತಹ ವಸ್ತುಗಳನ್ನು ನಾವು ಪಾರದರ್ಶಕ ವಸ್ತುಗಳು ಎಂದು ಕರೆಯುತ್ತೇವೆ ಎಂದು ಮಕ್ಕಳು ಅರಿಯುತ್ತಾರೆ.

ಹಾಗೆಯೇ ಕೆಲವು ವಸ್ತುಗಳ ಹಿಂಬದಿಯಲ್ಲಿರುವ ಪದಾರ್ಥಗಳು ನಮಗೆ ಕಾಣುವುದಿಲ್ಲ. ಏಕೆಂದರೆ ಈ ವಸ್ತುಗಳ ಮೂಲಕ ಬೆಳಕು ಹಾದು ಬರುವುದಿಲ್ಲ. ಈ ಪದಾರ್ಥಗಳನ್ನು ಅಪಾರದರ್ಶಕ ವಸ್ತುಗಳು ಎಂದು ನಾವು ಕರೆಯುತ್ತೇವೆ ಎಂದು ಮಕ್ಕಳಿಗೆ ತಿಳಿಯುತ್ತದೆ.

ಅಧ್ಯಾಪಕ ಇಂತಹ ಒಂದು ವಿಶ್ಲೇಷಣೆ ಮಾಡುವ ಗೋಜಿಗೆ ಹೋಗಲೇ ಇಲ್ಲ. ಅವನಿಗೆ ಈ ಪ್ರಶ್ನೆಗಳು ಗಂಭೀರವಾಗಿ ಕಾಣಲೇ ಇಲ್ಲ. ಮಕ್ಕಳು ಯಾವುದು ಪಾರದರ್ಶಕ ಯಾವುದು ಅಪಾರದರ್ಶಕ ಎಂದು ಹೇಳಿದರೆ ಸಾಕು, ಈ ಅಧ್ಯಾಪಕನಿಗೆ ತೃಪ್ತಿಯಾಗುತ್ತಿತ್ತು. ಈ ಅಧ್ಯಾಪಕ ಪಠ್ಯಪುಸ್ತಕದ ಚೌಕಟ್ಟನ್ನು ಬಿಟ್ಟು ಹೊರಗೆ ಹೋಗಲೇ ಇಲ್ಲ. ಹಾಗಾಗಿ ಯಾವ ಪರಿಕಲ್ಪನೆಯನ್ನು ಮಕ್ಕಳು ತಮ್ಮ ಅರಿವಿಗೆ ತಂದುಕೊಳ್ಳಬೇಕಾಗಿತ್ತೋ ಅದನ್ನು

ಪಡೆಯಲೇ ಇಲ್ಲ. ಒಂದು ವೇಳೆ ಮಗು ಬೆಳಕಿನ ಕಾರಣದಿಂದಾಗಿ ವಸ್ತುಗಳು ನಮಗೆ ಕಾಣುತ್ತದೆ ಎಂದು ಸ್ಪಷ್ಟವಾಗಿ ಅರಿತರೆ ಆಗ ಪಾರದರ್ಶಕ ಹಾಗೂ ಅಪಾರದರ್ಶಕ ವಸ್ತುಗಳ ಬಗ್ಗೆ ಹೊಸ ಪ್ರಶ್ನೆಗಳು ಹುಟ್ಟುತ್ತವೆ. ಉದಾಹರಣೆಗೆ ಮಕ್ಕಳು ಕೇಳಬಹುದು – ಗಾಜಿನಂತಹ ಪಾರದರ್ಶಕ ವಸ್ತುಗಳ ಮೂಲಕ ಬೆಳಕು ಏಕೆ ಹಾದುಬರುತ್ತದೆ? ಆದರೆ ಅದಕ್ಕಿಂತ ತೆಳ್ಳಗಿರುವ ಒಂದು ಕಾಗದದ ಹಾಳೆಯ ಮೂಲಕ ಬೆಳಕು ಏಕೆ ಹಾಯುವುದಿಲ್ಲ? ಇಂತಹ ಸಮಂಜಸವಾದ ಪ್ರಶ್ನೆ ಮಕ್ಕಳ ಮನಸ್ಸಿನಲ್ಲಿ ಮೂಡಬೇಕಾದರೆ ಅವರಿಗೆ ಬೆಳಕಿನ ಬಗ್ಗೆ ಸ್ಪಷ್ಟವಾದ ಒಂದು ಮೂಲ ವೈಜ್ಞಾನಿಕ ಪರಿಕಲ್ಪನೆ ಮೂಡಬೇಕು. ಹೀಗೆ ಒಂದು ಸ್ಪಷ್ಟವಾದ ವೈಜ್ಞಾನಿಕ ಪರಿಕಲ್ಪನೆ ಮೂಡಿದರೆ ಮಕ್ಕಳು ಹೆಚ್ಚಿನ ಕಲಿಕೆಯನ್ನು ಹುಡುಕುತ್ತ ಹೋಗುತ್ತಾರೆ. ಹೊಸ ಹೊಸ ಪ್ರಶ್ನೆಗಳನ್ನು ಕೇಳುತ್ತಾರೆ. ನಿಜವಾದ ಶಿಕ್ಷಣ ಎಂದರೆ ಎಲ್ಲ ಪ್ರಶ್ನೆಗಳಿಗೂ ಸಿದ್ಧ ಉತ್ತರಗಳನ್ನು ಕೊಡುವುದಲ್ಲ. ಆದರೆ ಮಕ್ಕಳಿಗೂ ಸಹ ಪ್ರಶ್ನೆ ಹುಟ್ಟುವಂತಹ ಒಂದು ವಾತಾವರಣವನ್ನು ಚಟುವಟಿಕೆಯ ಮುಖಾಂತರ ಸೃಷ್ಟಿಸುವುದೇ ಶಿಕ್ಷಣವಾಗುತ್ತದೆ. ಸದಾಕಾಲವೂ ಉತ್ತರ ಕೊಡುವ ಗೀಳನ್ನು ರೂಢಿ ಮಾಡಿಕೊಂಡ ನಮ್ಮ ಅಧ್ಯಾಪಕರು ಪ್ರಶ್ನೆಗಿಂತ ಉತ್ತರಗಳನ್ನು ಮುಖ್ಯ ಎಂದು ಪರಿಗಣಿಸುತ್ತಾರೆ. ಏಕೆಂದರೆ ಪರೀಕ್ಷಾ ಪದ್ಧತಿಗೆ ಈ ಅಧ್ಯಾಪಕರು ಹೊಂದಿಕೊಂಡಿರುತ್ತಾರೆ. ನಿಜವಾದ ವಿಜ್ಞಾನ ಎಂದರೆ ಉತ್ತರ ಸಿಕ್ಕದ ಪ್ರಶ್ನೆಗಳೇ ಹೊರತು ಸಿದ್ಧ ಉತ್ತರಗಳಲ್ಲ.

### ತನ್ನ ಜ್ಞಾನದ ಪರಿಮಿತಿಯ ಅರಿವು

ಬಹುತೇಕ ಅಧ್ಯಾಪಕರು ಮಕ್ಕಳಿಗೆ ಸರಳವಾಗಿರುವ ವಿಷಯಗಳನ್ನು ಮಾತ್ರ ಹೇಳಬೇಕು, ಕ್ಲಿಷ್ಟವಾದ ವಿಚಾರಗಳು ಅವರಿಗೆ ಅರ್ಥವಾಗುವುದಿಲ್ಲ ಎಂಬ ಸಾಮಾನ್ಯ ಸೂತ್ರವನ್ನು ಅನುಸರಿಸುತ್ತಾರೆ. ಹಾಗಾಗಿ ವಿಷಯಗಳ ಆಳಕ್ಕೆ ಹೋಗಿ ಮಕ್ಕಳೊಡನೆ ಚರ್ಚಿಸುವುದೇ ಇಲ್ಲ. ಕೆಲವೊಮ್ಮೆ ಅಧ್ಯಾಪಕರ ಅರಿವಿನ ಪರಿಮಿತಿಯೇ ಇದಕ್ಕೆ ಕಾರಣವಾಗಿರಬಹುದು. ಆದ್ದರಿಂದ ಈ ಸೂತ್ರದನ್ವಯ ಮಕ್ಕಳಿಗೆ ಹೊರೆಯಾಗದಿರಲಿ ಎಂದು ವಿಷಯಗಳನ್ನು ಸರಳೀಕರಿಸಿರುವುದಾಗಿ ಅಧ್ಯಾಪಕರು ಹೇಳುತ್ತಾರೆ. ಯಾವುದೇ ಒಂದು ವಿಷಯವನ್ನು ತಲಸ್ಪರ್ಶಿಯಾಗಿ ಅರಿಯಬೇಕಾದರೆ ಆ ವಿಷಯದ ಆಳಕ್ಕೆ ಹೋಗಲೇಬೇಕು. ಅಧ್ಯಾಪಕನಾದವನು ಇಂತಹ ಆಳಕ್ಕೆ ಧುಮುಕಿ ಜ್ಞಾನ ಸರೋವರದಲ್ಲಿ ಮಿಂದು ಬಂದವನಾದರೆ ಮಕ್ಕಳಿಗೆ ಯಾವುದನ್ನು ಎಷ್ಟು ಹೇಳಬೇಕು ಎಂಬ ಸ್ಪಷ್ಟ ಅರಿವು ಇರುತ್ತದೆ. ಇದು ಹೇಗೆಂದರೆ ಒಂದು ದೊಡ್ಡ ಕಟ್ಟಡವನ್ನು ನಿರ್ಮಾಣ ಮಾಡುವ ಇಂಜಿನಿಯರ್ ಆ ಕಟ್ಟಡದ ಸಮಗ್ರ ಯೋಜನೆಯನ್ನು ಮನಸ್ಸಿನಲ್ಲಿ ಧರಿಸಿ, ಈ ಕಟ್ಟಡದ ಅರ್ಧಭಾಗವನ್ನು ಮಾತ್ರ ಕಟ್ಟಬೇಕಾದ ಪ್ರಮೇಯ ಬಂದಾಗ ಮುಂದಿನ ಕಟ್ಟಡ ನಿರ್ಮಾಣಕ್ಕೆ ಸರಿಯಾದ ಅವಕಾಶ ಮಾಡಿಕೊಟ್ಟು ಅರ್ಧಕ್ಕೆ ನಿಲ್ಲಿಸಿರುತ್ತಾನೆ. ಇದೇ ಕಟ್ಟಡದ ಸಮಗ್ರ ಯೋಜನೆಯನ್ನರಿಯದ ಅಡ್ಡಕಸಬಿ ಇಂಜಿನಿಯರ್ ಹೀಗೆ

ಅರ್ಧಕ್ಕೆ ನಿಲ್ಲಿಸಿದರೆ, ಈ ಕಟ್ಟಡವನ್ನು ಮತ್ತೊಬ್ಬ ಇಂಜಿನಿಯರ್ ಪೂರ್ಣಗೊಳಿಸಲು ಈಗಾಗಲೇ ಕಟ್ಟಿದ ಕೆಲವು ಭಾಗಗಳನ್ನು ಒಡೆದು ಮಾರ್ಪಾಟು ಮಾಡಬೇಕಾಗುತ್ತದೆ ಅಥವಾ ಮಿತಿಮೀರಿದ ಸಂದರ್ಭದಲ್ಲಿ ಅರೆಮುಗಿದ ಕಟ್ಟಡವನ್ನು ಸಂಪೂರ್ಣವಾಗಿ ಒಡೆದು ಹೊಸದಾಗಿ ಕಟ್ಟಡವನ್ನು ಕಟ್ಟಬೇಕಾಗುತ್ತದೆ.

ಮಕ್ಕಳ ಮನಸ್ಸಿನಲ್ಲಿ ಜ್ಞಾನ ನಿರ್ಮಾಣವಾಗುವ ಸಂದರ್ಭದಲ್ಲೂ ಹೀಗೆಯೇ ಆಗಬಹುದು. ಒಂದು ವಿಷಯದ ಕುರಿತಾದ ಜ್ಞಾನವನ್ನು ಮಕ್ಕಳಿಗೆ ಕೊಡಬೇಕಾದರೆ ಮಕ್ಕಳಿಗೆ ತಿಳಿಯುತ್ತದೆ ಅಥವಾ ಮಕ್ಕಳಿಗೆ ತಿಳಿಯುವುದಿಲ್ಲ ಎಂಬುದು ಪ್ರಶ್ನೆಯಲ್ಲ. ನಿಜವಾದ ಪ್ರಶ್ನೆ ಏನೆಂದರೆ ಅಧ್ಯಾಪಕನಿಗೇ ಅದು ಸಮಗ್ರವಾಗಿ ತಿಳಿದಿದೆಯೆ? ಅಧ್ಯಾಪಕ ಈ ಕುರಿತು ತಾನೇ ಚಿಂತಿಸಿ ತನಗೆಷ್ಟು ಗೊತ್ತು ಎಷ್ಟು ಗೊತ್ತಿಲ್ಲ ಎಂಬ ನಿಷ್ಕರ್ಷೆಗೆ ಬರಬೇಕು. ಜ್ಞಾನ ಎಂಬುದು ವಿಷಯವನ್ನು ಸವಿಸ್ತಾರವಾಗಿ ಅರಿಯುವುದಷ್ಟೇ ಅಲ್ಲ; ಆ ವಿಷಯ ಕುರಿತಾಗಿ ತನ್ನ ಪರಿಮಿತಿಗಳನ್ನು ತಾನೇ ಅರಿಯುವುದು ಕೂಡ ಜ್ಞಾನವಾಗುತ್ತದೆ. ಸಾಕ್ರಟೀಸ್ ಜ್ಞಾನಿ; ಆದರೂ ಅವನಿಗೆ ತನ್ನ ಜ್ಞಾನದ ಪರಿಮಿತಿಗಳ ಅರಿವಿತ್ತು. ಆತ ಹೇಳುತ್ತಿದ್ದ: 'ನನಗೇನೂ ಗೊತ್ತಿಲ್ಲ ಎಂಬುದಷ್ಟೇ ನನಗೆ ಗೊತ್ತು.' ತನ್ನ ಜ್ಞಾನದ ಪರಿಮಿತಿಗಳ ಸ್ಪಷ್ಟ ಅರಿವಿರುವ ಅಧ್ಯಾಪಕ ಜ್ಞಾನದ ಮೊದಲ ಕೆಲವು ಮೆಟ್ಟಿಲುಗಳನ್ನು ಸರಿಯಾಗಿ ನಿರ್ಮಿಸಿಕೊಳ್ಳಲು ಮಕ್ಕಳಿಗೆ ಸಹಾಯ ಮಾಡುತ್ತಾನೆ. ಮುಂದಿನ ಮೆಟ್ಟಿಲುಗಳನ್ನು ಮೊದಲ ಈ ಕೆಲವು ಮೆಟ್ಟಿಲುಗಳನ್ನು ಒಡೆಯದೆ ಮಾರ್ಪಾಟು ಮಾಡದೆ ಅವುಗಳನ್ನೆ ಆಧಾರವಾಗಿಟ್ಟುಕೊಂಡು ರಚಿಸಬಹುದು. ಇದು ಜ್ಞಾನದ ಪರಿಮಿತಿಯನ್ನು ಅರಿಯುವುದರಿಂದ ಹುಟ್ಟುವ ಸಮರ್ಪಕವಾದ ಜ್ಞಾನ.

ಕೆಲವು ಶಾಲೆಗಳು ತಮ್ಮ ಶ್ರೇಷ್ಠತೆಯನ್ನು ಮೆರೆಯಲು ಅಥವಾ ಉಳ್ಳವರ ಮಕ್ಕಳಿಂದ ಅತಿ ಹೆಚ್ಚು ಹಣ ಕೀಳಲು 'ಹೈ ಸ್ಟ್ಯಾಂಡರ್ಡ್ ಎಜುಕೇಷನ್' ಕೊಡುತ್ತೇವೆ ಎಂದು ಹೇಳಿಕೊಳ್ಳುತ್ತಾರೆ. ಇವರು ಮಕ್ಕಳಿಗೆ ತಿಳಿಯಲಿ ಬಿಡಲಿ ತಮ್ಮ ಹೈ ಸ್ಟಾಂಡರ್ಡ್‌ಗೆ ಅನುಗುಣವಾಗಿ 'ಹೆಚ್ಚು-ಅತಿಹೆಚ್ಚು' ಎತ್ತರದ ವಿಷಯಗಳನ್ನು ಮಕ್ಕಳಿಗೆ ಬೋಧಿಸುತ್ತಾರೆ. ಇದು ಮಕ್ಕಳಿಗೆ ಅರ್ಥವಾಗಲೇಬೇಕು ಎಂದೇನೂ ಅಲ್ಲ. ಪರೀಕ್ಷೆಯಲ್ಲಿ ಗಿಳಿಪಾಠ ಒಪ್ಪಿಸಿದರೆ ಸಾಕು.

ಹೀಗೆ ಶಿಕ್ಷಣ ಎಂಬುದು ಹಲವು ಬಗೆಯ ನಿರೀಕ್ಷೆಗಳ ಒತ್ತಡದಲ್ಲಿ ಸಾಗುತ್ತಿದೆ. ಮಕ್ಕಳು ಬಡವಾಗುತ್ತಿದ್ದಾರೆ. ಪೋಷಕರು ಸಂಭ್ರಮಿಸುತ್ತಿದ್ದಾರೆ. ಶಿಕ್ಷಣ ಹೀಗೆ ಹದಗೆಡಲು ಪೋಷಕರ ದುರಾಸೆಯೇ ಕಾರಣ. ಶಿಕ್ಷಣಸಂಸ್ಥೆಗಳು ಶಿಕ್ಷಣವನ್ನು ಬಿಕರಿ ಮಾಡುತ್ತಿರುವುದರಿಂದ ಅವು ಪೋಷಕರ ಅಪೇಕ್ಷೆಗಳನ್ನು ಪೂರೈಸುವ ಕೇಂದ್ರಗಳಾಗಿವೆ. ಇಂತಹ ವಾತಾವರಣದಲ್ಲಿ ಶಿಕ್ಷಕ-ಶಿಕ್ಷಣ-ಮಕ್ಕಳು ಮತ್ತು ಸಮಾಜ ಅನಾರೋಗ್ಯದಿಂದ ಬಳಲುವಂತಾಗಿದೆ.

## ತರಗತಿಯಲ್ಲಿ ಜ್ಞಾನದ ನಿರ್ಮಾಣ

ಈ ಚರ್ಚೆಯ ಹಿನ್ನಲೆಯಲ್ಲಿ ಗುಣಾತ್ಮಕ ಶಿಕ್ಷಣ ಕುರಿತು ಚಿಂತಿಸೋಣ. ಈ ತರಗತಿ ಶಿಶುಕೇಂದ್ರಿತ ತರಗತಿಯಾಗಿತ್ತು; ಅಧ್ಯಾಪಕ ಮಕ್ಕಳನ್ನು ಪ್ರೀತಿಯಿಂದ ಕಾಣುತ್ತಿದ್ದ; ಅವರಿಗೆ ಪ್ರಶ್ನೆ ಕೇಳುವ ಉತ್ತರ ಹೇಳುವ ಮುಕ್ತ ವಾತಾವರಣವನ್ನೂ ಕಲ್ಪಿಸಿದ್ದ, ಶಾಲೆಯಲ್ಲಿ ಸಾಕಷ್ಟು ಸಂಪನ್ಮೂಲವಿತ್ತು. ಈ ಎಲ್ಲವೂ ಮಕ್ಕಳ ಆತ್ಮವಿಶ್ವಾಸವನ್ನು ಹೆಚ್ಚಿಸಿದ್ದವು. ಈ ಮಕ್ಕಳು ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದುಳಿದ ವರ್ಗದಿಂದ ಬಂದಿದ್ದರೂ ಶ್ರೇಷ್ಠವ್ಯಕ್ತಿ ಚಿತ್ರವನ್ನು ಪಡೆಯಲು ಸಾಧ್ಯವಾಗಿತ್ತು. ಇಷ್ಟೆಲ್ಲಾ ಇದ್ದರೂ ಮಕ್ಕಳ ಕಲಿಕೆಯಲ್ಲಿ ಎದ್ದುಕಾಣುವ ಕೊರತೆ ನಿರಾಶೆಯುಂಟು ಮಾಡುತ್ತಿತ್ತು. ಈ ಕೊರತೆಯನ್ನು ಇವರಿಗೆ ಪಾಠ ಹೇಳುವ ಶಿಕ್ಷಕ ಏಕೆ ಗುರುತಿಸಲಿಲ್ಲ? ಹೊರಗಿನಿಂದ ಬಂದವರು – ಶಿಕ್ಷಣತಜ್ಞರಲ್ಲದೆ ಇದ್ದರೂ ಕೂಡ ಈ ಕೊರತೆಯನ್ನು ಗುರುತಿಸಬಲ್ಲರು. ವೃತ್ತಿಪರನಾದ ಶಿಕ್ಷಕನಿಗೆ ಈ ಕೊರತೆ ಕಾಣುವುದಿಲ್ಲ! ಹೀಗೇಕೆ? ಚದುರಂಗದ ಆಟ ಆಡುವವನಿಗಿಂತ ಅದನ್ನು ನೋಡುವವನಿಗೆ ಮುಂದಿನ ಜಾಣ ನಡಿಗೆಗಳು ಕಾಣತೊಡಗುತ್ತವೆ. ಬಹುಶಃ ಇದೂ ಹೀಗೆ ಇರಬಹುದು. ಅನುದಿನವೂ ಅಧ್ಯಾಪಕರು ಪಾಠ ಮಾಡುತ್ತ ಮಾಡುತ್ತ 'ಪುಸ್ತಕ–ಪಾಠ–ಪರೀಕ್ಷೆ' ಇವಿಷ್ಟನ್ನು ಬಿಟ್ಟು ಬೇರೇನನ್ನೂ ನೋಡಲಾರದವರಾಗಿಬಿಡುತ್ತಾರೆ. 'ಕಂಡೀಷನಿಂಗ್' ಅಥವಾ ಒಂದು ಬಗೆಯ ಯಾಂತ್ರಿಕ ಮನೋಧರ್ಮಕ್ಕೆ ಶರಣಾಗಿ ಬಿಡುತ್ತಾರೆ.

ಇಂತಹ ಒಂದು ಯಾಂತ್ರಿಕತೆಯಿಂದ ಅಧ್ಯಾಪಕರನ್ನು ಪಾರು ಮಾಡಲು ಸಾಮಾನ್ಯವಾಗಿ ನಾವು ಬಳಸುವ ಪರಿಹಾರ ಎಂದರೆ 'ತರಬೇತಿ'. ಸರ್ಕಾರದಂತಹ ಒಂದು ಬೃಹತ್ ವ್ಯವಸ್ಥೆಯಲ್ಲಿ ನೀಡುವ ತರಬೇತಿಗಳು ನಾವು ಈ ಸಂದರ್ಭದಲ್ಲಿ ಬಯಸುತ್ತಿರುವ ಸೂಕ್ಷ್ಮತೆಗಳನ್ನು ಅಧ್ಯಾಪಕರಿಗೆ ಕೊಡಬಲ್ಲುವೆ ಎಂಬುದು ಒಂದು ಯಕ್ಷ ಪ್ರಶ್ನೆ. ಅಧ್ಯಾಪಕನಿಗೆ ಈಗಾಗಲೇ ಪ್ರಾಪ್ತವಾಗಿರುವ ಯಾಂತ್ರಿಕ ಮನೋಧರ್ಮವನ್ನು ಮತ್ತಷ್ಟು ಗಟ್ಟಿಗೊಳಿಸದೆ ಇದ್ದರೆ ಅದೇ ನಮ್ಮ ಪುಣ್ಯ. ಆದರೆ ನಮ್ಮ ವ್ಯವಸ್ಥೆಯ ತರಬೇತಿಗಳು ಸೃಜನಶೀಲ ಅಧ್ಯಾಪಕನ ಸೃಜನಶೀಲತೆಯನ್ನು ಕಸಿದುಕೊಂಡು ಆ ಸ್ಥಳದಲ್ಲಿ ಯಾಂತ್ರಿಕ ಮನೋಧರ್ಮವನ್ನು ತುಂಬಿಬಿಡುತ್ತವೆ. ಮೊದಲನೆಯದಾಗಿ ನೂರಾರು ಅಧ್ಯಾಪಕರನ್ನು ಒಟ್ಟಿಗೆ ಕೂರಿಸಿಕೊಂಡು ತರಬೇತಿ ನೀಡುತ್ತಾರೆ. ಇಂತಹ ತರಬೇತಿಗಳಲ್ಲಿ ಸರಾಸರಿಯಾಗಿ ಎಲ್ಲರಿಗೂ ಅವರವರ ತರಗತಿಯ ಸಂದರ್ಭಗಳಲ್ಲಿ ಕೆಲಸಕ್ಕೆ ಒದಗಿ ಬರುವ ಉಪಯುಕ್ತ ಮಾಹಿತಿ ಸಲಹೆಗಳನ್ನು ಕೊಡಲು ಮಾತ್ರ ಸಾಧ್ಯ. ಈ ತರಬೇತಿಗಳ ವ್ಯವಸ್ಥಾತ್ಮಕ ರಚನೆಯೇ ಅವುಗಳ ಪರಿಮಿತಿಗಳನ್ನು ಅಂಗೈಮೇಲಿನ ನೆಲ್ಲಿಕಾಯಿಯಷ್ಟು ಸ್ಪಷ್ಟವಾಗಿ ಬಿಂಬಿಸುತ್ತದೆ ಎಂದ ಮೇಲೆ ಈ ತರಬೇತಿಗಳ ಉದ್ದೇಶವೇನು, ನಿರೀಕ್ಷಿತ ಫಲವೇನು?

ಯಾವುದೇ ವ್ಯಕ್ತಿಯಲ್ಲಿ ಸೂಕ್ಷ್ಮ ಸಂವೇದನೆಗಳು ಮೂಡಬೇಕಾದರೆ ವ್ಯಕ್ತಿ ವ್ಯಕ್ತಿಗಳ ನಡುವೆ ಆತ್ಮೀಯ ಸಂವಹನ–ಸಂವಾದ ಸಾಧ್ಯವಾಗಬೇಕು. ಇಂತಹ ಆತ್ಮೀಯ ಸಂವಹನ ಒಬ್ಬ ಮನುಷ್ಯ ನೂರಾರು ಜನರನ್ನು ಕುರಿತು ಮಾತನಾಡಿದಾಗ ಉಂಟಾಗುವುದಿಲ್ಲ. ಒಬ್ಬ ಅದ್ಭುತ ಮಾತುಗಾರನ ಮಾತು ಕೇಳಿ ನಾವು ಪ್ರಭಾವಿತರಾದರೂ ಅಂತಹ ವ್ಯಕ್ತಿಯನ್ನು ಮತ್ತೆ ಏಕಾಂತದಲ್ಲಿ ಮಾತನಾಡಿಸಲು ಇಚ್ಛಿಸುತ್ತೇವೆ. ಆಗ ಮಾತ್ರ ನಿಜವಾದ ಸಂವಹನ ಸಾಧ್ಯವಾಗುತ್ತದೆ. ಈ ಸಂವಹನ ಸಂವೇದನೆಗಳಾಗಿ ನಮ್ಮೊಳಗೆ ನಮ್ಮದೇ ಭಾಗವಾಗಿ ಸ್ಥಿರಗೊಳ್ಳುತ್ತದೆ.

ಈ ಬಗೆಯ ಸೂಕ್ಷ್ಮ ಸಂವೇದನೆಗಳನ್ನು ನಾವು ನಮ್ಮ ಈ ಬೆಳಕಿನ ಪಾಠದ ಅಧ್ಯಾಪಕನಲ್ಲಿ ಮೂಡಿಸಬೇಕಾದರೆ ಏನು ಮಾಡಬೇಕು? ಇದು ಒಂದು ದಿನದ ಕೆಲಸವಲ್ಲ. ನಾವು ಬಯಸುವ ಈ ಸೂಕ್ಷ್ಮತೆ ನಮಗೇ ಹೇಗೆ ಮೂಡಿತು ಎಂಬುದನ್ನು ಕುರಿತು ನಾವು ಆಲೋಚಿಸಬೇಕು. ಜೊತೆಗೆ ಈ ಸೂಕ್ಷ್ಮತೆ ರೂಪುಗೊಳ್ಳುವಾಗ ನಮ್ಮ ಅರಿವಿನ ಪರಿಧಿ ವಿಸ್ತಾರಗೊಂಡ ಬಗೆಯನ್ನು ನಾವು ಗಮನಿಸಬೇಕು. ಒಂದು ವಿಷಯದ ಬಗ್ಗೆ ಪಡೆದ ಆಳವಾದ ಅರಿವಿನಿಂದ ಮಾತ್ರ ಆ ಸಂಬಂಧವಾದ ಸೂಕ್ಷ್ಮತೆಗಳನ್ನೂ ಪಡೆಯಲು ಸಾಧ್ಯ. ಈ ಸಂದರ್ಭದಲ್ಲಿ ಆ ಅರಿವು ಯಾವುದು ಎಂದು ಪರಿಶೀಲಿಸೋಣ.

ಮಾಹಿತಿ ಗೊಬ್ಬರ : ಮಕ್ಕಳು ಬೀಜ. ಈ ಅಧ್ಯಾಪಕ ಪಾರದರ್ಶಕ–ಅಪಾರದರ್ಶಕ ವಸ್ತುಗಳ ಸಂದರ್ಭದಲ್ಲಿ ಅತ್ಯುತ್ತಮ ಮಾಹಿತಿಯನ್ನು ಮಕ್ಕಳಿಗೆ ನೀಡಿದ್ದು ಸ್ಪಷ್ಟವಾಗೇ ಇದೆ. ಮಕ್ಕಳು ಈ ಬಗ್ಗೆ ದೊಡ್ಡ ಪಟ್ಟಿಯನ್ನೇ ತಯಾರಿಸಿಕೊಂಡಿದ್ದರು. ಜೊತೆಗೆ ಆತ್ಮವಿಶ್ವಾಸದಿಂದ ಅದನ್ನೇ ಹೇಳುತ್ತಿದ್ದರು. ಇಲ್ಲಿ ಒಂದು ಮುಖ್ಯ ಪ್ರಶ್ನೆ ಇದೆ. ಶಾಲಾ ಕಲಿಕೆ ಎಂದರೆ ಈ ರೀತಿ ಮಾಹಿತಿಯನ್ನು ಮಾತ್ರ ಸಂಗ್ರಹಿಸುವುದೆ? ಬರಿ ಮಾಹಿತಿಗೆ ಜೀವ ಇರುವುದಿಲ್ಲ. ಅದು ಒಂದು ಶವಕ್ಕೆ ಸಮಾನ ಎಂದು ವಾಚ್ಯವಾಗಿ ನಾವು ಹೇಳಬಹುದು. ಮಾಹಿತಿ ಎಂಬುದು ಗತಕಾಲದ, ಸ್ಮಶಾನದ ಗೋರಿಗಳಲ್ಲಿ ಹುದುಗಿಹೋಗಿರುವ ಚಲನಶೀಲತೆಯನ್ನು ಕಳೆದುಕೊಂಡ ಸ್ಥಾವರರೂಪ. ಈ ಸಮಾಧಿಗಳ ಮೇಲೆ ಹುಟ್ಟುವ ಒಂದೇ ಒಂದು ಹುಲ್ಲಿನ ಎಸಳು ಕೂಡ ಸ್ಮಶಾನದ ಗರ್ಭದಲ್ಲಿ ಅಡಗಿಹೋಗಿರುವ ಅಸಂಖ್ಯಾತ ಶವಗಳಿಗಿಂತ ಶ್ರೇಷ್ಠ. ಇದು ಎಲ್ಲರೂ ಒಪ್ಪುವ ವಿಷಯ.

ಹೀಗೆ ಮಾಹಿತಿ ಎಂಬುದು ಒಂದು ಸತ್ತ ಸಂಗತಿ, ನಿಂತು ಹೋಗಿರುವ ಚಕ್ರ ಎಂಬ ಅರಿವು ಎಲ್ಲಿಯವರೆಗೆ ನಮಗೆ ಸಾಧ್ಯವಾಗುವುದಿಲ್ಲವೊ ಅಲ್ಲಿಯವರೆಗೆ ವರ್ತಮಾನದ ಚಲನಶೀಲತೆಯೂ ಸಾಧ್ಯವಾಗುವುದಿಲ್ಲ, ಸೃಷ್ಟಿ ಸಾಧ್ಯವಾಗುವುದಿಲ್ಲ. ಯಾವುದನ್ನು ನಾವು ಜ್ಞಾನ ಎನ್ನುತ್ತೇವೆಯೋ ಅದು ಮೊಳೆಯುವ ಬೀಜದಂತೆ. ಹೊಸ ವಿಸ್ತಾರದೆಡೆಗೆ ವಿಕಸಿಸುವ ಶಕ್ತಿ ಅದಕ್ಕಿದೆ. ಈ ಬೀಜಕ್ಕೆ ಶಕ್ತಿ ನೀಡುವ ಗೊಬ್ಬರ ಎಷ್ಟೇ ಶ್ರೇಷ್ಠವಾದರೂ ಅದು ಗೊಬ್ಬರವೆ. ಬೀಜಕ್ಕೆ ಇರುವ ಶಕ್ತಿ ಗೊಬ್ಬರಕ್ಕೆ ಇರುವುದಿಲ್ಲ.

ಮಾಹಿತಿಯೂ ಹೀಗೆ ಗೊಬ್ಬರಕ್ಕೆ ಸಮ. ಆದರೆ ಇಂದಿನ ಶಿಕ್ಷಣ ಬೀಜಕ್ಕಿಂತ ಗೊಬ್ಬರಕ್ಕೆ ಪ್ರಾಧ್ಯಾನ್ಯ ನೀಡುತ್ತಿದೆ. ಗೊಬ್ಬರವೇ ಸರ್ವಶ್ರೇಷ್ಠವೆಂಬಂತೆ ವರ್ತಿಸುತ್ತಿದೆ. ಶಿಕ್ಷಣದ ಚರಮಗುರಿ ಮಾಹಿತಿ ಸಂಗ್ರಹಿಸುವುದು ಎನ್ನುವಂತಿದೆ. ಈ ತಪ್ಪುಕಲ್ಪನೆ ಬದಲಾಗುವವರೆಗೆ ಶಿಕ್ಷಣದಲ್ಲಿ ನಿಜವಾದ ಕ್ರಾಂತಿ ಅಸಾಧ್ಯ.

## ಅನ್ವಯಿಕ ಜ್ಞಾನ

ಮಾಹಿತಿಯ ಪರಿಮಿತಿಗಳನ್ನು ಅರಿತ ಮೇಲೆ ಮಗುವಿನ ಮನಸ್ಸಿನಲ್ಲಿ ಜ್ಞಾನನಿರ್ಮಾಣ ಹೇಗೆ ಆಗುತ್ತದೆ ಎಂಬುದನ್ನು ಅರಿಯಲು ಪ್ರಯತ್ನಿಸೋಣ. ತರಗತಿಗಳಲ್ಲಿ ಸಂಗ್ರಹಿಸಿದ ಮಾಹಿತಿಯೊಡನೆ ಮಗು ಈಗಾಗಲೇ ಗಳಿಸಿರುವ ಅರಿವಿನ ಆಧಾರದ ಮೇಲೆ ಹೊಸ ಜ್ಞಾನವನ್ನು ತನಗೆ ತಾನೇ ಅರ್ಥೈಸಿಕೊಳ್ಳುತ್ತದೆ. ಹೀಗೆ ಮಾಹಿತಿಯ ಆಧಾರದ ಮೇಲೆ ಹೊಸ ಒಳನೋಟಗಳನ್ನು ಪಡೆಯುತ್ತ ಹೊಸ ಆಯಾಮಕ್ಕೆ ಕಾಲಿಡುವುದೆ ಜ್ಞಾನ ನಿರ್ಮಾಣ. ಹೀಗೆ ಹುಟ್ಟಿದ ಜ್ಞಾನ ಜೀವನದ ನಿಜ ಪ್ರಸಂಗಗಳಲ್ಲಿ ಪ್ರಯೋಜನಕ್ಕೆ ಬರುವಂತೆ ಮಗು ಅನ್ವಯಿಸಿ ಬಳಸಲು ಸಾಧ್ಯವಾದರೆ ಅದು ಅನ್ವಯಿಕ ಜ್ಞಾನವಾಗುತ್ತದೆ. ಹೀಗೆ ಮಗು ತಾನು ಪಡೆದ ಜ್ಞಾನವನ್ನು ಪದೇ ಪದೇ ಯಶಸ್ವಿಯಾಗಿ ಬಳಸಿದರೆ ತನ್ನ ಅರಿವಿನ ಬಗ್ಗೆ ಆತ್ಮವಿಶ್ವಾಸವನ್ನೂ ಪಡೆಯುತ್ತದೆ. ಒಂದು ವೇಳೆ ತಾನು ಕಲಿತದ್ದನ್ನು – ಅರಿತದ್ದನ್ನು ನಿಜಜೀವನ ಪ್ರಸಂಗಗಳಲ್ಲಿ ಉಪಯೋಗಿಸಲು ಪ್ರಯತ್ನಿಸಿ ವಿಫಲವಾದರೆ ಆಗ ಇಡೀ ಕಲಿಕೆಯನ್ನು ಮಗು ನಿಜ ಜೀವನದಿಂದ ವಿಭಾಗಿಸಿ, ಬದುಕಲು ಬೇಕಾದ ಜ್ಞಾನವನ್ನು ಹೊರಗೆಲ್ಲೋ ಪಡೆದುಕೊಳ್ಳುತ್ತ ಪರೀಕ್ಷೆ ಬರೆಯಲು ಬೇಕಾದ ಜ್ಞಾನವನ್ನು ಮಾತ್ರ ತರಗತಿಗಳಿಂದ ಪಡೆಯಬೇಕೆಂದು ನಿರ್ಧರಿಸುತ್ತದೆ. ಕಲಿಕೆ ಎಂಬುದು ಕೇವಲ ಮಾಹಿತಿಯಾದರೆ ಅದು ಅನ್ವಯಿಕ ಜ್ಞಾನವಾಗುವುದು ಸಾಧ್ಯವಿಲ್ಲ. ನಮ್ಮ ಪರೀಕ್ಷೆಗಳು ಮಗು ಮಾಹಿತಿಯನ್ನು ಸಂಗ್ರಹಿಸಿದೆಯೆ ಎಂಬುದನ್ನು ಮಾತ್ರ ಪರೀಕ್ಷಿಸಬಲ್ಲುವು. ಮಗು ನಿಜವಾದ ಜ್ಞಾನವನ್ನು ಸಂಪಾದಿಸಿದೆಯೆ ಎಂದು ಪರೀಕ್ಷಿಸುವುದು ಕಷ್ಟಸಾಧ್ಯ. ಇಡೀ ಭಾರತದ ಉದ್ದಗಲಕ್ಕೂ ನಮಗೆ ಕಂಡು ಬರುವ ಚಿತ್ರ ಇದೇ. ಜನರು ತಾವು ಶಾಲಾ ತರಗತಿಗಳಲ್ಲಿ ಕಲಿತದ್ದನ್ನು ಎಂದೂ ತಮ್ಮ ನಿಜಜೀವನದ ಪ್ರಸಂಗದಲ್ಲಿ ಉಪಯೋಗಿಸುವುದೇ ಇಲ್ಲ. ಶಾಲಾ ಕಲಿಕೆ ಸರ್ಟಿಫಿಕೇಟ್‌ಗಾಗಿ; ಸರ್ಟಿಫಿಕೇಟ್ ಕೆಲಸ ಪಡೆಯಲು; ಅನಂತರ ಕೆಲಸವನ್ನು ಸಂಬಳಕ್ಕೆ ಸಂಚಕಾರ ಬರದಷ್ಟರ ಮಟ್ಟಿಗೆ ಮಾಡುವುದೇ ಜೀವನವಾಗುತ್ತದೆ.

ಕೆಲಸ ಎಂದಾಗ ಕೆಲಸಗಳ್ಳತನವೇ ದೊಡ್ಡ ಸಾಧನೆ ಎಂದು ಭಾವಿಸುವ ನಮ್ಮ ಜನಕ್ಕೆ ಹಣದ ಹೊರತಾಗಿ ಸಾಧಿಸಬಹುದಾದ ಗುರಿ ಈ ಪ್ರಪಂಚದಲ್ಲಿ ಇಲ್ಲವೇ ಇಲ್ಲ. ಈ ನಿರ್ಧಾರಕ್ಕೆ ನಮ್ಮ ಜನಸಮೂಹ ಬರಲು ನಮ್ಮ ಶಾಲಾ ಶಿಕ್ಷಣವೇ ಕಾರಣ ಎನ್ನಬಹುದು. ಏಕೆಂದರೆ ಶಾಲಾ ಶಿಕ್ಷಣದುದ್ದಕ್ಕೂ ಮಕ್ಕಳು ಸುಲಭವಾಗಿ ಅಂಕ ಗಳಿಸುವ

ವಿಧಾನವನ್ನು ಬಹಳ ಶ್ರದ್ಧೆಯಿಂದ ಕಲಿತಿರುತ್ತಾರೆ! ಮನುಷ್ಯ ಸಾಧಿಸಬಹುದಾದ ಇತರ ಯಾವುದೇ ಗುರಿಗಳನ್ನೂ ನಮ್ಮ ಶಿಕ್ಷಣ ಮಕ್ಕಳ ಮುಂದೆ ತೆರೆದಿಡುವುದಿಲ್ಲ.

ಮಕ್ಕಳ ಮನಸ್ಸಿನಲ್ಲಿ ಜ್ಞಾನದ ಸವಿ ಹುಟ್ಟುವಂತೆ, ಒಂದು ಸದಭಿರುಚಿ ಮೂಡುವಂತೆ ಮಾಡುವಲ್ಲಿ ನಮ್ಮ ಶಾಲಾ ಶಿಕ್ಷಣ ವಿಫಲವಾಗಿದೆ. ಮಕ್ಕಳ ಮನಸ್ಸಿನಲ್ಲಿ ಜ್ಞಾನ ಹೇಗೆ ನಿರ್ಮಾಣವಾಗುತ್ತದೆ ಎಂಬುದನ್ನು ನಾವು ಸರಿಯಾಗಿ ತಿಳಿದುಕೊಂಡಿಲ್ಲ. ಮಗು ಸಂಪಾದಿಸಿದ ಜ್ಞಾನ ವಸ್ತುನಿಷ್ಠವಾಗಿದ್ದರೆ, ಸಮಗ್ರವಾಗಿದ್ದರೆ ಅದನ್ನು ನಿಜಜೀವನ ಪ್ರಸಂಗದಲ್ಲಿ ಉಪಯುಕ್ತವಾಗಿ ಬಳಸಲು ಸಾಧ್ಯವಾಗುತ್ತಿತ್ತು. ಇಂತಹ ಜ್ಞಾನ ಅನುಭವದ ಭಾಗವಾಗಿ ಅನಂತರ ವ್ಯಕ್ತಿತ್ವದ ಭಾಗವಾಗಿ, ಮಗುವಿನ ಮನಸ್ಸಿನಲ್ಲಿ ನೆಲೆ ನಿಲ್ಲುತ್ತಿತ್ತು. ನಮ್ಮ ಪಠ್ಯಪುಸ್ತಕಗಳ, ಸಿಲಬಸ್‌ಗಳ ಆಧಾರದ ಮೇಲೆ ಅಸಮರ್ಥ ಅಧ್ಯಾಪಕರು ನೀಡುವ ಮಾಹಿತಿಯಿಂದ ಮಗು ಪರಿಪೂರ್ಣ ಜ್ಞಾನವನ್ನು ಸಂಶ್ಲೇಷಿಸಲು ಸಾಧ್ಯವಿಲ್ಲ. ಏಕೆಂದರೆ ಶಾಲಾ ಪಠ್ಯದ ಮೂಲಕ ನೀಡುವ ಮಾಹಿತಿ ಒಂದು ವಿಷಯದ ಸಮಗ್ರರೂಪವಾಗಿರುವುದಿಲ್ಲ. ಒಂದು ವಿದ್ಯಮಾನದ ಆಯ್ದ ಭಾಗಗಳನ್ನು (ಉತ್ತರ ನೀಡಲು ಅತಿ ಮುಖ್ಯ ಎನಿಸುವಂಥವನ್ನು) ಮಾತ್ರ ನಮ್ಮ ಶಾಲಾ ಶಿಕ್ಷಣ ನೀಡುತ್ತದೆ. ಇದು ಹೇಗೆಂದರೆ ಒಂದು ಉದ್ಯಾನವನದಲ್ಲಿ ಮಾಲಿಯೊಬ್ಬ ಗಿಡಗಳನ್ನು ಕತ್ತರಿಸಿ ವಿವಿಧ ಆಕೃತಿಗಳಾಗಿ ಮಾಡಿರುವಂತೆ. ಹೀಗೆ ಕಟಿಂಗ್ ಮಾಡಿದ ಆಕೃತಿಗಳು ಈ ಗಿಡಗಳ ನೈಜ ರೂಪವಲ್ಲ. ಶಾಲಾ ಶಿಕ್ಷಣ ಕೊಡುವ ಜ್ಞಾನದ ರೂಪವು ಹೀಗೆ. ಈ ಕೃತಕ ಆಕೃತಿಗಳನ್ನು ನೋಡಿ ನಮ್ಮ ಮಕ್ಕಳು ಈ ಗಿಡಗಳ ನೈಜ ರೂಪವನ್ನು ಊಹಿಸಬೇಕು. ಹೀಗೆ ತುಂಡರಿಸಿದ, ಸಂಬಂಧ ಕಳೆದುಕೊಂಡ ಮಾಹಿತಿಯ ತುಣುಕುಗಳು ಸೇರಿಕೊಂಡು ಪರಿಪೂರ್ಣ ಜ್ಞಾನ ಉಂಟಾಗುವುದಾದರೂ ಹೇಗೆ? ಅಧ್ಯಾಪಕರು ನಿಯಮಿತ ಕಾಲದಲ್ಲಿ ಎಲ್ಲ ಪಾಠಗಳನ್ನು ಮುಗಿಸಬೇಕು. ಪರೀಕ್ಷೆಗಳನ್ನು ಮಾಡಬೇಕು, ಹೀಗೆ ಹತ್ತು ಹಲವು ಕಾರಣಗಳಿಗೆ ಒಂದೇ ವಿಷಯ ಕುರಿತು ಆಳ ಅಧ್ಯಯನ ಸಾಧ್ಯವಾಗುವುದಿಲ್ಲ. ನಮ್ಮ ಶಿಕ್ಷಣ ವ್ಯವಸ್ಥೆ ಹಾಗೂ ಅಧ್ಯಾಪಕರು ಅರಿಯಬೇಕಾದ ಬಹುಮುಖ್ಯ ಸಂಗತಿ ಎಂದರೆ ಮಕ್ಕಳು ಬಹಳಷ್ಟು ವಿಷಯಗಳನ್ನು ಅಸಮರ್ಪಕವಾಗಿ ಕಲಿಯುವುದಕ್ಕಿಂತ ಒಂದು ವಿಷಯವನ್ನು ಆಳವಾಗಿ ಕಲಿಯುವುದು ಹೆಚ್ಚು ಉಪಯುಕ್ತ.

### ಶಿಕ್ಷಣದಲ್ಲಿ ಅಗಲಕ್ಕಿಂತ ಆಳ ಮುಖ್ಯ

ಪಾರದರ್ಶಕ-ಅಪಾರದರ್ಶಕ ಪಾಠಗಳಲ್ಲಿ ಆ ಅಧ್ಯಾಪಕ ಅವಸರ ಅವಸರವಾಗಿ ಮುಂದಿನ ಪಾಠಕ್ಕೆ ದಾಪುಗಾಲು ಇಡುವ ಬದಲು ಆ ವಿಷಯವನ್ನೇ ಆಳಕ್ಕೆ, ಮತ್ತಷ್ಟು ಆಳಕ್ಕೆ ತೆಗೆದುಕೊಂಡು ಹೋಗಬಹುದಿತ್ತು. ಒಂದು ವಿಷಯಕ್ಕೆ ಸಂಬಂಧಪಡುವ ಎಲ್ಲ ಅಂಶಗಳನ್ನು ಚಟುವಟಿಕೆಗಳ ಮೂಲಕ ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಬಹುದಿತ್ತು. ಹೀಗೆ ಉಂಟಾದ ಅನುಭವ ಕುರಿತಾಗಿ ಧ್ಯಾನಸ್ಥರಾಗಬಹುದಾಗಿತ್ತು. ಬಹಳ ಮುಖ್ಯವಾದ

ವಿಷಯವೇನೆಂದರೆ ಕೇವಲ ಪುಸ್ತಕವನ್ನಾಧರಿಸಿ ಪಾಠ ಮಾಡುವ ಬದಲು ಒಂದು ವಿಷಯವನ್ನು ಮಕ್ಕಳು ಹೇಗೆ ಅರಿಯುತ್ತಾರೆ, ಈ ಅರಿವಿನ ಪರಿಣಾಮವೇನು ಎಂಬುದನ್ನು ಕುರಿತು ಅಧ್ಯಾಪಕ ಆಗಾಗ ಧ್ಯಾನಿಸಬಹುದಾಗಿತ್ತು. ಈ ಸಾಮರ್ಥ್ಯದ ಕೊರತೆಯನ್ನು ತುಂಬಬಹುದಾದ ಏಕಮಾತ್ರ ಅಂಶ ಎಂದರೆ 'ಪ್ರೀತಿ'. ಮಕ್ಕಳನ್ನು ಗಾಢವಾಗಿ ಪ್ರೀತಿಸುವ ಅಧ್ಯಾಪಕನಿಗೆ ಈ ಎಲ್ಲವೂ ತಾನೇ ತಾನಾಗಿ ಸಾಧ್ಯವಾಗಿಬಿಡುತ್ತದೆ. ಇಂತಹ ಅಧ್ಯಾಪಕ ಸದಾ ಉತ್ಸಾಹಿಯಾಗಿರುತ್ತಾನೆ. ತನ್ನ ನ್ಯೂನತೆಗಳನ್ನು ಯಾರೇ ಗುರುತಿಸಿ ಹೇಳಲಿ, ಚಿಕ್ಕವರು ದೊಡ್ಡವರು ಎಂಬ ಭೇದವಿಲ್ಲದೆ 'ಮಕ್ಕಳಿಗೆ ಒಳಿತಾಗುತ್ತದೆ' ಎಂಬ ಒಂದು ಅಂಶವನ್ನು ಮಾತ್ರ ಗುರುತಿಸಿ ತನ್ನನ್ನೇ ತಾನು ಬದಲಿಸಿಕೊಳ್ಳಲು ಉತ್ಸುಕನಾಗಿರುತ್ತಾನೆ. ಇಂತಹ ಅಧ್ಯಾಪಕನ ಅಭಿರುಚಿಗಳು ಶ್ರೇಷ್ಠವಾಗಿರುತ್ತವೆ ಮತ್ತು ಅವನು ಇದನ್ನೇ ಮಕ್ಕಳಿಗೆ ಕೊಡುತ್ತಾನೆ. ಇಂತಹ ಅಧ್ಯಾಪಕನಲ್ಲಿ ಅಧ್ಯಯನಶೀಲತೆ ಎದ್ದುಕಾಣುತ್ತದೆ. ಒಂದು ವಿಷಯದ ತಲಸ್ಪರ್ಶಿ ಅಧ್ಯಯನ ಇವನಿಗೆ ಸಾಧ್ಯ. ಇಂತಹ ಅಧ್ಯಯನದಿಂದ ಆ ವಿಷಯದ ಬಗ್ಗೆ ನಮಗೆ ಗೊತ್ತಿರುವುದಕ್ಕಿಂತ ಗೊತ್ತಿಲ್ಲದೇ ಇರುವುದೇ ಹೆಚ್ಚು ಎಂಬ ಅರಿವು ಉಂಟಾಗುತ್ತದೆ. ಈ ಅರಿವು ಮನುಷ್ಯನನ್ನು ಅಹಂಕಾರಶೂನ್ಯನನ್ನಾಗಿ ಮಾಡುತ್ತದೆ. ಈ ನಿರಂಹಕಾರಿ ಮನೋಭಾವ ಮತ್ತೊಬ್ಬರೊಡನೆ ಮುಕ್ತ ಸಂವಹನವನ್ನು ಸಾಧ್ಯವಾಗಿಸುತ್ತದೆ, ಮಗುವಿನೊಡನೆ ಕೂಡ. ಐನ್‌ಸ್ಟೈನ್ ಅವರನ್ನು ನೆರೆಮನೆಯ ಒಬ್ಬ ಪುಟ್ಟಬಾಲಕಿ ಲೆಕ್ಕ ಹೇಳಿಕೊಡುವಂತೆ ಕೇಳುತ್ತಾಳೆ. ಐನ್‌ಸ್ಟೈನ್ ಸಹಜವಾಗಿ ಅವಳಿಗೆ ಲೆಕ್ಕ ಹೇಳಿಕೊಡುತ್ತಿರುತ್ತಾರೆ. ಬಾಲಕಿಯ ತಾಯಿ ವಿಷಯ ತಿಳಿದು ದೊಡ್ಡ ಪ್ರಮಾದವಾಯಿತೇನೋ ಎಂಬಂತೆ ಓಡಿಬಂದು ಐನ್‌ಸ್ಟೈನ್ ಅವರನ್ನು ತಮ್ಮ ಮಗಳು ತೊಂದರೆ ಕೊಟ್ಟಿದ್ದಕ್ಕೆ ಕ್ಷಮೆ ಯಾಚಿಸುತ್ತಾರೆ. ಮಗಳನ್ನು ಹಿಂದಕ್ಕೆ ಬರುವಂತೆ ಕರೆಯುತ್ತಾಳೆ. ಆದರೆ ಐನ್‌ಸ್ಟೈನ್ ಅವರು ನಗುತ್ತ 'ತಪ್ಪೇನಿದೆ? ಈ ಮಗುವಿಗೆ ಲೆಕ್ಕ ಹೇಳಿಕೊಟ್ಟಿದ್ದರಿಂದ ನನಗೇನು ತೊಂದರೆ ಆಗಲಿಲ್ಲ' ಎನ್ನುತ್ತಾರೆ.

**ಗುಣಾತ್ಮಕ ಶಿಕ್ಷಣ ಮತ್ತು ನಮ್ಮ ಸರ್ಕಾರಿ ವ್ಯವಸ್ಥೆ**

ಭಾರತ ಪ್ರಪಂಚದಲ್ಲೇ ಅತ್ಯಂತ ಹೆಚ್ಚು ಸಂಖ್ಯೆಯ ಮಕ್ಕಳನ್ನು ಹೊಂದಿರುವ ದೇಶ. ನಮ್ಮ ಜನಸಂಖ್ಯೆಯ ಶೇಕಡ ನಲವತ್ತು ಭಾಗ ಮಕ್ಕಳು. ಇಷ್ಟು ದೊಡ್ಡ ಸಂಖ್ಯೆಯ ಮಕ್ಕಳನ್ನು ಮುಂದಿನ ಭವ್ಯ ಭಾರತದ ಪ್ರಜೆಗಳನ್ನಾಗಿ ಮಾಡಲು ನಾವು ಪ್ರತಿ ವರ್ಷ ಮೀಸಲಿಡುತ್ತಿರುವ ಹಣ ಮಾತ್ರ ಶೇಕಡ ನಾಲ್ಕರಿಂದ ಆರು ಭಾಗ ಮಾತ್ರ. ರಾಷ್ಟ್ರೀಯವಾಗಿ ನಾವು ಮಕ್ಕಳನ್ನು ಎಷ್ಟು ಗಂಭೀರವಾಗಿ ಪರಿಗಣಿಸುತ್ತೇವೆ ಎಂದು ಗುರುತಿಸಲು ಈ ಆರ್ಥಿಕ ನೀತಿಯೇ ಸಾಕು.

ಇದೇ ನೀತಿಯ ಭಾಗವಾಗಿ ಕೆಲಸ ಮಾಡುವ ನಮ್ಮ ಶಿಕ್ಷಣ ಇಲಾಖೆಯು ಮಕ್ಕಳ ಗುಣಮಟ್ಟದ ಕಲಿಕೆಗಿಂತ ಆಡಳಿತಾತ್ಮಕ ವಿಷಯಗಳಿಗೇ ಹೆಚ್ಚು ಆದ್ಯತೆ ಕೊಡುತ್ತದೆ.

ಹೀಗೆ ಮೀಸಲಿರಿಸಿದ ಶೇಕಡ ನಾಲ್ಕ ರಿಂದ ಆರು ಭಾಗ ಹಣದ ಬಹುಭಾಗವೂ ಸಂಬಳ ಸಾರಿಗೆಗೆಂದು ವ್ಯಯವಾಗಿ ಮಕ್ಕಳಿಗಾಗಿ ನಾವು ನೇರವಾಗಿ ಖರ್ಚು ಮಾಡುವುದು ಅತ್ಯಲ್ಪ. ವ್ಯವಸ್ಥೆಯ ಈ ವಿರೋಧಾಭಾಸಗಳ ನಡುವೆ ಒತ್ತಡಕ್ಕೆ ಮಣಿದ ಸರ್ಕಾರ ಗುಣಾತ್ಮಕ ಶಿಕ್ಷಣದ ಬಗ್ಗೆ ಆಗಾಗ ಮಾತನಾಡುತ್ತದೆ. ಗುಣಾತ್ಮಕ ಶಿಕ್ಷಣಕ್ಕೆಂದು ಕ್ಲಸ್ಟರ್ ಹಂತದಲ್ಲಿ ಸಂಪನ್ಮೂಲ ವ್ಯಕ್ತಿಗಳನ್ನು ನೇಮಿಸಿ ಶೈಕ್ಷಣಿಕ ಸಮಾಲೋಚನೆಗೆ ಅನುವು ಮಾಡಿಕೊಟ್ಟಿದೆ. ಆದರೆ ಈ ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಗಳು ಶೈಕ್ಷಣಿಕ ಸಮಾಲೋಚನೆಗಿಂತ ಅಂಕಿಅಂಶಗಳನ್ನು ಸಂಗ್ರಹಿಸಿ ಉನ್ನತ ಅಧಿಕಾರಿಗಳಿಗೆ ರವಾನಿಸುವ ಓಲೆಕಾರರಂತೆ ಕೆಲಸ ಮಾಡುವುದೇ ಹೆಚ್ಚು. ಇಡೀ ಶಿಕ್ಷಣ ಇಲಾಖೆ ಗುಣಾತ್ಮಕ ಶಿಕ್ಷಣಕ್ಕಿಂತ ಮಾಹಿತಿಯನ್ನು ಉನ್ನತಾಧಿಕಾರಿಗಳಿಗೆ, ಮಂತ್ರಿವರ್ಯರಿಗೆ ಒದಗಿಸುವುದೇ ತನ್ನ ಗುರಿಯೆಂದು ಭಾವಿಸಿರುವುದೇ ಈ ಎಲ್ಲ ಸಮಸ್ಯೆಗಳಿಗೆ ಕಾರಣ. ಈ ದೇಶದ ಯಾವುದೇ ವ್ಯವಸ್ಥೆಯನ್ನು ತೆಗೆದುಕೊಂಡರೂ, ಅದು ತನ್ನ ನಿಜವಾದ ಗುರಿಯನ್ನು ಉದ್ದೇಶವಾಗಿಟ್ಟುಕೊಂಡು ಕೆಲಸಮಾಡುವುದಿಲ್ಲ. ಅದರ ಗುರಿಯೆಲ್ಲ ಕಾಗದದಮೇಲೆ ಅಂಕಿಅಂಶಗಳನ್ನು ದಾಖಲಿಸುವುದು 'ಇಂಡಿಯ ಈಸ್ ಶೈನಿಂಗ್' ಎಂದು ಹೇಳುವುದು. ಶಿಕ್ಷಣದ ಗುರಿ ಗುಣಾತ್ಮಕ ಶಿಕ್ಷಣದ ಮೂಲಕ ಮಕ್ಕಳ ವ್ಯಕ್ತಿತ್ವ ನಿರ್ಮಾಣ. ಕರ್ತವ್ಯನಿಷ್ಠೆಯಿಂದ ಕೆಲಸ ಮಾಡುವ ಪ್ರಾಮಾಣಿಕ ನೌಕರರಾಗಲಿ, ಅಥವಾ ಈ ವ್ಯವಸ್ಥೆಯ ಬಹುಸಂಖ್ಯಾತ ಭ್ರಷ್ಟರಾಗಲೀ – ಈ ಎರಡು ಬಗೆಯ ಜನಗಳೂ ಆಡಳಿತಾತ್ಮಕ ಕಾರ್ಯವಿಧಾನವನ್ನು ಮಾತ್ರ ಎತ್ತಿಹಿಡಿದು ಮೂಲ ಉದ್ದೇಶವನ್ನು ಸಂಪೂರ್ಣ ಮರೆತುಬಿಡುತ್ತಾರೆ. ಏಕೆಂದರೆ ಸರ್ಕಾರ ಎಂದರೆ 'ನೌಕರಿ'ಗಿಂತ ಹೆಚ್ಚು ಅರ್ಥ ಕೊಡುವ ಮನೋಧರ್ಮ ನಮ್ಮಲ್ಲಿಲ್ಲ. ಬೃಹತ್ ಸಂಖ್ಯೆಯ ಇರುವೆಗಳಾಗಲೀ, ಜೇನುನೊಣಗಳಾಗಲೀ ಹೇಗೆ ಒಂದು ಗುರಿಯನ್ನು ತಮ್ಮ ಎಲ್ಲ ಶ್ರಮದ ಹಿಂದೆ ಕಾಯ್ದುಕೊಳ್ಳುತ್ತವೆಯೋ ಹಾಗೆ ನಮ್ಮ ಸರ್ಕಾರಿ ನೌಕರರು ಒಂದು ಗುರಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಕೆಲಸ ಮಾಡುವುದಿಲ್ಲ. ಹೀಗೆ ಒಟ್ಟಾಗಿ ಕೆಲಸ ಮಾಡಿ ಸಾಧಿಸುವುದರಲ್ಲಿ ನಮಗೆ ತೃಪ್ತಿಯೂ ಇಲ್ಲ. ಏಕೆಂದರೆ ಸಾವಿರಾರು ಜನ ಒಟ್ಟಾಗಿ ಶ್ರಮಿಸಿದರೆ ಯಾರೂ ಕೂಡ ವೈಯಕ್ತಿಕವಾಗಿ ಹೆಸರು ಕೀರ್ತಿಗಳನ್ನು ಪಡೆಯುವುದಿಲ್ಲ. ವೈಯಕ್ತಿಕವಾದ ಹೆಸರು ಕೀರ್ತಿಗಳನ್ನು ಬದಿಗೊತ್ತಿ ಸಮಷ್ಟಿ ಕ್ಷೇಮಕ್ಕಾಗಿ ಶ್ರಮಿಸುವ ಮೌಲ್ಯವನ್ನು ನಾವು ಎಲ್ಲೂ ಕಲಿತಿಲ್ಲ. ನಮ್ಮ ಅನುಸರಣೀಯ ಮಾದರಿಗಳೆಲ್ಲ ವೈಯಕ್ತಿಕವಾಗಿ ಶ್ರಮಿಸಿ ಪ್ರಸಿದ್ಧರಾದವರೇ ಹೊರತು ಸಮಷ್ಟಿಯ ಭಾಗವಾಗಿ, ಎಲೆಮರೆಯ ಕಾಯಾಗಿ ಶ್ರಮಿಸುವವರು ನಮ್ಮ ನಡುವೆ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುದಿಲ್ಲ.

ದಿನ ಕಳೆದಂತೆ ವ್ಯವಸ್ಥೆ ದೊಡ್ಡದಾಗುತ್ತ ಹೋಗುತ್ತಿದೆ. ಗುಣಾತ್ಮಕ ಶಿಕ್ಷಣದ ಗುರಿ ಮತ್ತಷ್ಟು ಅಂಚಿಗೆ ಸರಿಯುತ್ತಿದೆ. ವ್ಯವಸ್ಥೆ ತನ್ನದೇ ಭಾರದಿಂದ ಕುಸಿದು 'ಗುಣಾತ್ಮಕ ಶಿಕ್ಷಣ'ದಂತಹ ವಿಷಯಗಳು ಕೇವಲ ಔಪಚಾರಿಕ ಚರ್ಚೆಯಾಗುತ್ತವೆ. ಗುಣಾತ್ಮಕ ಶಿಕ್ಷಣ ನಡೆಯಬೇಕಾದರೆ ಕಟ್ಟಡ, ಮೇಜು, ಕುರ್ಚಿ, ಬೆಂಚು ಮುಂತಾದ

ಪೀಠೋಪಕರಣಗಳೇ ಮೂಲ ಎಂದು ಭಾವಿಸಿ ಅದರ ಕೊರತೆಯನ್ನು ನೀಗಿಸುವುದೇ ಶಿಕ್ಷಣದ ಗುರಿ ಎಂಬಂತೆ ಇಂದಿನ ವ್ಯವಸ್ಥೆ ನಡೆದುಕೊಳ್ಳುತ್ತಿದೆ. ಈಗ ನಾಲ್ಕು ದಶಕಗಳ ಹಿಂದೆ ನಾನು ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗ ತೋರಿಸಿದ ವಿಜ್ಞಾನದ ಪ್ರಯೋಗಗಳು ನನಗಿನ್ನೂ ನೆನಪಿವೆ. ಆದರೆ ಇಂದಿನ ಕಂಪ್ಯೂಟರ್ ಯುಗದಲ್ಲಿ ಬಹುಪಾಲು ಪ್ರೌಢಶಾಲೆಗಳು ಇಡೀ ವರ್ಷದಲ್ಲಿ ಒಂದೇ ಒಂದು ಪ್ರಯೋಗವನ್ನೂ ತೋರಿಸದೆ ಪಾಠ ಮುಗಿಸುತ್ತವೆ. ಸರ್ವಶಿಕ್ಷಣ ಅಭಿಯಾನದಡಿ ಕೋಟ್ಯಂತರ ರೂಪಾಯಿ ಹಣ ಖರ್ಚು ಮಾಡಿದ್ದರೂ ಗುಣಾತ್ಮಕ ಶಿಕ್ಷಣದ ಕನಸಾಗಿಯೇ ಉಳಿದಿದೆ.

ಇಷ್ಟಾದರೂ ಸರ್ವಶಿಕ್ಷಣ ಅಭಿಯಾನದ ಅಂಗವಾಗಿ ಪರಿಣತರ ಸಮಿತಿಯೊಂದು ಗುಣಾತ್ಮಕ ಶಿಕ್ಷಣಕ್ಕಾಗಿ ತರಬೇತಿ ಕೈಪಿಡಿಯನ್ನು ತಯಾರಿಸಿದೆ.* ಈ ಪುಸ್ತಕವು ಗುಣಾತ್ಮಕ ಶಿಕ್ಷಣದ ಬಹುಮುಖಗಳನ್ನು ವಿವರಿಸಿ ಅದನ್ನು ಸಾಧಿಸಬಹುದಾದ ವಿಧಾನಗಳನ್ನು ಸೂಚಿಸುತ್ತದೆ. ಆದರೆ ಈ ಪುಸ್ತಕದ ವಸ್ತು ದೇಶದ ಎಲ್ಲ ಪ್ರಾಥಮಿಕ ಶಾಲಾ ಅಧ್ಯಾಪಕರನ್ನು ಮುಟ್ಟಬಲ್ಲುದೇ ಎಂಬುದು ದೊಡ್ಡ ಪ್ರಶ್ನೆ. ಗುಣಾತ್ಮಕ ಶಿಕ್ಷಣವನ್ನು ರಾಷ್ಟ್ರವ್ಯಾಪಿಯಾಗಿ ಅನುಷ್ಠಾನಕ್ಕೆ ತರುವುದು ಒಂದೆರಡು ದಿನಗಳಲ್ಲಿ ಸಾಧ್ಯವಾಗುವ ಮಾತಲ್ಲ. ಆದರೂ ಗುಣಾತ್ಮಕ ಶಿಕ್ಷಣವಲ್ಲದೆ ನಮಗೆ ಬೇರೆ ದಾರಿ ಇಲ್ಲ. ಹಾಗಾಗಿ ಈ ಬಗ್ಗೆ ಮಾತನಾಡುವುದು, ಬಿಸಿಬಿಸಿ ಚರ್ಚೆಗಳನ್ನು ಮಾಡುವುದು, ನಮಗೆ ತೋರುವ ಸಾಧ್ಯತೆಗಳನ್ನನುಸರಿಸಿ ಪ್ರಾಯೋಗಿಕವಾಗಿ ಕೆಲಸ ಮಾಡುವುದು ಅತ್ಯಗತ್ಯ. ಎಲ್ಲಕ್ಕಿಂತ ಮುಖ್ಯವಾಗಿ ಗುಣಮಟ್ಟದ ಶಿಕ್ಷಣಕ್ಕೆ ಸಂಬಂಧಪಟ್ಟ ಸುಲಭಸಾಧ್ಯವಾದ ಕ್ರಮಗಳನ್ನಾದರೂ ಅನುಷ್ಠಾನಕ್ಕೆ ತರುವಂತೆ ಸರ್ಕಾರದ ಮೇಲೆ ಒತ್ತಡ ಹೇರಬೇಕು. ಸಮುದಾಯ– ಶಾಲೆಯ ಸಂಬಂಧವನ್ನು ಮತ್ತಷ್ಟು ಬಲಪಡಿಸಿ ಸಮುದಾಯವೇ ಗುಣಮಟ್ಟದ ಶಿಕ್ಷಣವನ್ನು ಆಗ್ರಹಿಸಿಕೇಳುವಂತೆ ಸಾಮಾಜಿಕ ಜಾಗೃತಿಯನ್ನು ಮೂಡಿಸಬೇಕು.

## ಗುಣಾತ್ಮಕ ಶಿಕ್ಷಣಕ್ಕೆ ಬೇಕಾದ ಸಹಜಶೀಲತೆ ಮತ್ತು ಗುರುಕುಲ ಪದ್ಧತಿ

ನಿಜವಾದ ಕಲಿಕೆ ಉಂಟಾಗಲು ಮನಸ್ಸು ಒಂದು ಸಮಾಧಾನ ಸ್ಥಿತಿಯಲ್ಲಿರಬೇಕು ಅಥವಾ ವ್ಯವಧಾನ ಇರಬೇಕು. ಕಲಿಕೆಯ ಈ ಸಂದರ್ಭದಲ್ಲಿ ಹಿಂದಿನ ಅಥವಾ ಮುಂದಿನ ಕಾಲಗಳಿಗೆ ಸಂಬಂಧಪಟ್ಟ ಆತಂಕಗಳಿಂದ ಮಗು ಮುಕ್ತವಾಗಿರಬೇಕು. ಯಾವುದೋ ಜವಾಬ್ದಾರಿಯನ್ನು ಭರಿಸಲೇಬೇಕು ಎಂಬ ಆತಂಕದ ಮಧ್ಯೆ ಮಗು ಮುಕ್ತವಾದ ಮನಸ್ಸನ್ನು ಪಡೆಯಲಾರದು. ಇಂದಿನ ಜಾಗತೀಕರಣದ ಅವಸರ ಪ್ರಪಂಚ ಇಂತಹ ಸಹಜಶೀಲತೆಯನ್ನು ಮಕ್ಕಳಿಂದಲೂ ಕಸಿದುಕೊಂಡುಬಿಟ್ಟಿದೆ. ಜ್ಞಾನದ ನಿರ್ಮಾಣ

* Modules on Quality Dimensions of Elementary Education under SSA.

ಎಂದು ನಾವು ಏನು ಹೇಳುತ್ತೇವೊ ಅದು ಮುಕ್ತವಾದ ತೆರೆದ ಮನಸ್ಸಿನ ಸ್ಥಿತಿಯಲ್ಲಿ ಮಾತ್ರ ಸಾಧ್ಯ. ಒಬ್ಬ ಮನುಷ್ಯನಲ್ಲಿ ಸಹಜಶೀಲತೆ ಉಳಿಯಬೇಕಾದರೆ, ಬೆಳೆಯಬೇಕಾದರೆ ಅವನ ಬಾಲ್ಯ ಇಂತಹ ವ್ಯವಧಾನ ಶೀಲತೆಯನ್ನು ಬೆಳೆಸಿಕೊಳ್ಳಲು ಪೂರಕವಾಗಿರಬೇಕು. ಎಲ್ಲವನ್ನೂ ಅವಸರದ ಓಡುಗತಿಯಲ್ಲೇ ನಿರ್ವಹಿಸಬೇಕಾದ ಅನಿವಾರ್ಯತೆ ಮಗುವಿಗೆ ಬಂದೊದಗಿದರೆ ಮಗು ಈ ಬಗೆಯ ನಿರಾತಂಕವಾದ ಸಹಜಶೀಲತೆಯನ್ನು ಬೆಳೆಸಿಕೊಳ್ಳುವುದೇ ಇಲ್ಲ. ಬಾಲ್ಯದಲ್ಲಿ ಈ ವ್ಯವಧಾನವನ್ನು ಬೆಳೆಸಿಕೊಳ್ಳದ ಮಕ್ಕಳು ಮುಂದೆಂದೂ ಈ ಸಹಜಶೀಲತೆಯನ್ನು ಬೆಳೆಸಿಕೊಳ್ಳಲಾಗುವುದಿಲ್ಲ.

ನಾವು ಬದುಕುವ ಈ ಅವಸರದ, ಓಟದ ಬದುಕು ಯಾರಿಗಾಗಿ, ಯಾವ ಪುರುಷಾರ್ಥಕ್ಕಾಗಿ? ಇದನ್ನು ಪ್ರಶ್ನಿಸಿ ಈ ಅಸಹಜತೆಯಿಂದ ಬೇರೆಯಾಗಿ ನಿಲ್ಲಬಲ್ಲ ಶಕ್ತಿಯನ್ನು ಕೊಡುವ ಪ್ರಕ್ರಿಯೆಯನ್ನೇ ನಾವು ಶಿಕ್ಷಣ ಎನ್ನಬೇಕು. ಆದರೆ ನಮ್ಮ ಶಿಕ್ಷಣ ಇಂತಹ ಮೂಲಭೂತ ಉದ್ದೇಶಗಳನ್ನು ಗಮನಕ್ಕೇ ತೆಗೆದುಕೊಳ್ಳುತ್ತಿಲ್ಲ. ಅನಗತ್ಯವಾದ ವೇಗ ಕಂಪ್ಯೂಟರ್ ಜಗತ್ತಿನ ಸಾಧ್ಯತೆಗಳೊಡನೆ ಕೂಡಿಕೊಂಡು ಬದುಕನ್ನು ವ್ಯವಧಾನರಹಿತವಾಗಿ ಮಾಡಿದೆ. ತಾಂತ್ರಿಕತೆ ಸರಕುಪ್ರಪಂಚದಲ್ಲಿ ಅಥವಾ ಹೊರಜಗತ್ತಿನಲ್ಲಿ ಅದ್ವಿತೀಯವಾದುದನ್ನು ಸಾಧಿಸಲು ಸಹಕಾರಿಯಾಗಿದೆ. ಆದರೆ ಈ ತಾಂತ್ರಿಕ ಸಾಧ್ಯತೆಗಳು ನಮ್ಮ ಒಳಗಿನ ಪ್ರಪಂಚದಲ್ಲಿ, ಎಂದರೆ ನಮ್ಮ ಮನೋಲೋಕದಲ್ಲಿ ಏನು ಪರಿಣಾಮ ಉಂಟುಮಾಡುತ್ತಿದೆ ಎಂದು ನಾವು ಗುರುತಿಸಬೇಡವೇ? ಮುಕ್ತವಾದ ಮನಸ್ಸಿನಿಂದ ನೋಡಿದರೆ ಕಾಣುತ್ತದೆ – ಈ ತಾಂತ್ರಿಕ ಸಾಧ್ಯತೆ ನಮ್ಮ ವಸ್ತುಸಂಬಂಧವಾದ ಕೌಶಲಗಳನ್ನು ಹೆಚ್ಚಿಸುತ್ತಿದೆ. ಆದರೆ ನಾವು ಮಾಡುವ ಪ್ರತಿಯೊಂದು ಕೆಲಸದ ಹಿಂದಿನ ಉದ್ದೇಶ ಮಾತ್ರ ಹುಟ್ಟರಿವುನಿಂದ ಗಟ್ಟಿಗೊಳ್ಳುತ್ತಾ ಹೋಗುತ್ತಿದೆ. ತೋರಿಕೆಗೆ ಸಮಷ್ಟಿಯನ್ನು ಗಮನದಲ್ಲಿಟ್ಟುಕೊಂಡಂತೆ ಕಂಡರೂ ಅದರ ಮೂಲೋದ್ದೇಶ ಹುಟ್ಟರಿವುಗಳ ಸುತ್ತ ಹೆಣೆದ ಸ್ವಾರ್ಥವಲ್ಲದೆ ಬೇರಲ್ಲ. ತಂತ್ರಜ್ಞಾನ ಬಳಸಿ ಅತಿ ಹೆಚ್ಚು ಸಾಧಿಸಬೇಕೆಂಬ ಗುರಿಯ ಹಿಂದೆ ದುರಾಸೆ ಮೂಲದ ಹುಟ್ಟರಿವು ಕೆಲಸ ಮಾಡುತ್ತದೆ. ಈ ದುರಾಸೆ ಪ್ರೇರಿತ ಕಾರ್ಯಸಾಧನೆಯ ನಡುವೆ ಸಮಷ್ಟಿಹಿತದ ಮಾತುಗಳು ಅಪರಾಧಿ ಪ್ರಜ್ಞೆಯನ್ನು ಮುಚ್ಚಿಕೊಳ್ಳುವ ಒಂದು ಮುಖವಾಡ ಮಾತ್ರ. ದೊಡ್ಡದಾಗಿ ಬೆಳೆಯಬೇಕೆಂಬ ಮಹತ್ವಾಕಾಂಕ್ಷೆಯ ಹಿಂದೆ ದುರಾಸೆಯಷ್ಟೇ ಕೆಲಸ ಮಾಡಬಲ್ಲುದು. ದುರಾಸೆಯ ಹಿಂದೆ ವ್ಯಕ್ತಿಗತವಾಗಿ ಬದುಕುಳಿಯಲು ಪೂರಕವಾದ ಹುಟ್ಟರಿವು ಕೆಲಸ ಮಾಡುತ್ತದೆ. ತಾಂತ್ರಿಕ ಸಾಧ್ಯತೆಗಳ ವಿಸ್ತಾರ ಮೂಲತಃ ಈ ಹುಟ್ಟರಿವುಗಳ ವಿಸ್ತಾರವೇ ಆಗಿಬಿಡುವುದರಿಂದ ಪರಿಣಾಮ ಅರ್ಥವೇ ಇಲ್ಲದ ಸ್ವಾರ್ಥವಾಗಿದೆ. ಒಬ್ಬ ಮನುಷ್ಯ ತನ್ನ ಅಗತ್ಯಕ್ಕಿಂತ ಹೆಚ್ಚಾಗಿ ಸಂಗ್ರಹಿಸುತ್ತಲೇ ಬದುಕುತ್ತಾನೆ. ಅವನ ಇಡೀ ಜೀವನ ಬರೀ ಸಂಗ್ರಹಿಸುವುದರಲ್ಲೇ ಮುಗಿದುಹೋಗುತ್ತದೆ. ಅವನಿಗೆ ಈ ಬದುಕಿನ ಸೌಂದರ್ಯ ಸಂತೋಷಗಳ ಮಿಂಚು ನೋಟವೂ ಸಿಗುವುದಿಲ್ಲ. ನಮ್ಮ ಶಿಕ್ಷಣ ಹೇಳಿಕೊಡುವ

ತಾಂತ್ರಿಕ ಸಾಧ್ಯತೆಗಳು ಹೀಗೆ ಮನುಷ್ಯನ ಹುಟ್ಟರಿವುಗಳನ್ನು ಬಲಗೊಳಿಸುತ್ತ ಹೋಗುತ್ತದೆ. ಅದು ಈ ಹುಟ್ಟರಿವುಗಳ ಪ್ರಭಾವದಿಂದ ಬಿಡುಗಡೆ ಪಡೆಯುವುದನ್ನು ಕಲಿಸುವುದಿರಲಿ, ಈ ಬಿಡುಗಡೆಯ ಮಹತ್ವವನ್ನು ಕೂಡ ಮನಗಂಡಿಲ್ಲ.

## ಗುರುಕುಲ ಪದ್ಧತಿ ಮತ್ತು ಹುಟ್ಟರಿವುಗಳ ನಿಯಂತ್ರಣ

ನಮ್ಮ ಗುರುಕುಲ ಪದ್ಧತಿ ಈ ಹುಟ್ಟರಿವುಗಳು ಮನುಷ್ಯರನ್ನು ಸವಾರಿ ಮಾಡದಂತೆ ತಡೆಯುವ ವಿಧಿವಿಧಾನಗಳಿಗೆ ಮಹತ್ವ ನೀಡಿತ್ತು. ಶಿಕ್ಷಣ ಎಂದರೆ ನಮ್ಮೊಳಗೆ ಇದ್ದು ನಮ್ಮನ್ನಾಳುವ ಶಕ್ತಿಗಳಿಂದ ಬಿಡುಗಡೆ ಪಡೆಯುವುದು ಎಂದು ಅರ್ಥ ಮಾಡಿಕೊಳ್ಳಬೇಕು. ಆದರೆ ಕೇವಲ ನಿಗ್ರಹಕ್ಕಾಗಿ ನಿಗ್ರಹ ಎಂಬ ಕುಬ್ಜ ದೃಷ್ಟಿ ಇದಲ್ಲ. ಈ ಗುರುಕುಲ ಪದ್ಧತಿಯ ಮೂಲ ಆಶಯವೇನೆಂದರೆ ಈ ಹುಟ್ಟರಿವುಗಳ ಅಟ್ಟಹಾಸ ಕೊನೆಗೊಂಡರೆ ಅಥವಾ ನಿಯಂತ್ರಣಕ್ಕೆ ಬಂದರೆ ಯಾವುದನ್ನು ನಾವು 'ವ್ಯವಧಾನ' ಎಂದು ಚರ್ಚಿಸಿದೆವೊ ಅದನ್ನು ನಮಗೆ ದೊರಕಿಸಿಕೊಡುವುದು; ತನ್ಮೂಲಕ ಜ್ಞಾನ ಸಂಪಾದನೆಯನ್ನು ಸಾಧ್ಯವಾಗಿಸುವುದು. ಹೀಗೆ ಜ್ಞಾನ ಎಂಬುದೊಂದಿದೆ; ಅದು ಹುಟ್ಟರಿವುಗಳ ಹೊರತಾಗಿಯೂ ಇರುವ ನನ್ನ ಸ್ವಸ್ವರೂಪವೇ ಆಗಿದೆ; ಆ ಸ್ವರೂಪವೇ ಈ ಜಗತ್ತಾಗಿದೆ; ಎಂದರೆ ಮೂಲತಃ ನನ್ನ ಸ್ವರೂಪ ಮತ್ತು ಈ ಜಗತ್ತಿನ ಮೂಲಸ್ವರೂಪ ಭಿನ್ನವಲ್ಲ; ಆದ್ದರಿಂದ ನನ್ನನ್ನು ನಾನು ಅರಿಯುವ ಮೂಲಕ ಇಡೀ ಜಗತ್ತನ್ನೇ ಅರಿಯುತ್ತೇನೆ. ಇಂತಹ ಜ್ಞಾನ ಸಂಪಾದನೆಗೆ ನಾನು ಯಾವ ತ್ಯಾಗಕ್ಕೂ ಸಿದ್ಧ ಎಂಬ ಮನೋಧರ್ಮವನ್ನು ರೂಢಿಸಿ ಜ್ಞಾನಾರ್ಜನೆಗೆ ನಮ್ಮನ್ನು ಸಿದ್ಧಪಡಿಸುವುದೇ ಗುರುಕುಲ ಪದ್ಧತಿಯ ಶಿಕ್ಷಣ.

ಈ ಸಂದರ್ಭದಲ್ಲಿ ಮತ್ತೊಂದು ಬಹುಮುಖ್ಯವಾದ ಅಂಶವನ್ನು ನಾವು ಗುರುತಿಸಬೇಕು. ನಮ್ಮೊಳಗೆ ಇದ್ದು ನಮ್ಮನ್ನು ಆಳುವ ಈ ಹುಟ್ಟರಿವಿನ ನಿಯಂತ್ರಣ ಕೇವಲ ವೈಚಾರಿಕತೆಯಿಂದ ಸಾಧ್ಯವಿಲ್ಲ. ತಂತ್ರಜ್ಞಾನದ ಪ್ರಗತಿಗೆ ವೈಚಾರಿಕತೆಯೇ ಮೂಲಸಾಧನ. ಹಾಗಾಗಿ ನಮಗೆ ವೈಚಾರಿಕತೆ ಬಿಟ್ಟರೆ ಬೇರಾವ ಸಾಧನಗಳ ಬಗೆಗೂ ನಂಬಿಕೆಯಿಲ್ಲ. ಮನುಷ್ಯ ತನ್ನ ವಿಚಾರ ಮಾಡುವ ಶಕ್ತಿಯಿಂದಾಗಿ ಹೊರಜಗತ್ತಿನಲ್ಲಿ ಅದ್ವಿತೀಯವಾದುದನ್ನು ಸಾಧಿಸಿದ್ದಾನೆ. ವೈಚಾರಿಕತೆಯಿಂದ ಅನೇಕ ಸಾಮಾಜಿಕ ಬದಲಾವಣೆಗಳ ಸಾಧಿಸಿದ್ದಾನೆ. ಆದರೆ ಇದೇ ವೈಚಾರಿಕ ಶಕ್ತಿ ವಿನಾಶಕ್ಕೂ ಕಾರಣವಾಗಿದೆ ಎಂಬುದನ್ನೂ ಮರೆಯುವಂತಿಲ್ಲ. ಜನಸಂಖ್ಯೆ ಹೆಚ್ಚಾಗಿ ಮನುಷ್ಯ ತನ್ನ ಅಸ್ತಿತ್ವಕ್ಕಾಗಿ ಪರದಾಡುವ ಪರಿಸ್ಥಿತಿ ಬಂದಿರುವ ಈ ದಿನಗಳಲ್ಲಂತೂ ಅವನ ಕಟ್ಟುವ ಶಕ್ತಿಗಿಂತ ಕೆಡಹುವ ಶಕ್ತಿ ಹೆಚ್ಚಾಗುತ್ತಿದೆ. ಸ್ಪರ್ಧಾತ್ಮಕ ಪ್ರಪಂಚದಲ್ಲಿ ಇತರರನ್ನು ಅಥವಾ ಇತರರು ಕಟ್ಟಿದ್ದನ್ನು ಕೆಡವಿ ಮೆಟ್ಟಿನಿಂತು ಮೇಲೆ ಬರುವ ಅವಿರತ ಪ್ರಯತ್ನ ಕಂಡುಬರುತ್ತಿದೆ. ಈ ಸಮಸ್ಯೆಗಳಿಗೆ ನಮ್ಮ ವಿಚಾರ ಶಕ್ತಿ ಯಾವ ಔಷಧಿಯನ್ನು ಕೊಡುತ್ತಿದೆ ಎಂದು

ಪ್ರಶ್ನಿಸುವ ವಿವೇಕವನ್ನು ನಮ್ಮ ಇಂದಿನ ಶಿಕ್ಷಣ ನಮಗೆ ಕೊಡುತ್ತಿಲ್ಲ. ಇದು ವೈಚಾರಿಕತೆ ಅಥವಾ ವಿಚಾರಶಕ್ತಿಯ ಪರಿಮಿತಿಗಳನ್ನು ತೋರುತ್ತದೆ. ವಿಚಾರಶಕ್ತಿ ನಮ್ಮ ಮನಸ್ಸಿನ ಆಳಕ್ಕೆ ನುಗ್ಗಿ ಹುಟ್ಟರಿವುಗಳೊಡನೆ ಅನುಸಂಧಾನ ಮಾಡಲಾರದು. ಹಾಗಾಗಿ ಹುಟ್ಟರಿವುಗಳ ಆಳಕ್ಕೆ ನುಗ್ಗಬಹುದಾದದ್ದನ್ನು ವೈಚಾರಿಕವಾಗಿ ನಾವು ರುಜುವಾತು ಮಾಡಲಾರೆವು. ಉದಾಹರಣೆಗೆ ಆಧ್ಯಾತ್ಮಿಕ ಸಾಧನೆಗಳೆಂದು ಪರಿಗಣಿಸಲ್ಪಟ್ಟಿರುವ ಜಪ, ಧ್ಯಾನ; ಪ್ರಾರ್ಥನೆ, ನಾಮಸ್ಮರಣೆ, ಸಂಕೀರ್ತನೆ ಮೊದಲಾದುವು. ಇವುಗಳನ್ನು ನಮ್ಮ ನಡುವಿನ ವಿಚಾರವಂತರು ಲೇವಡಿ ಮಾಡುತ್ತಾರೆ. ಮೂಢನಂಬಿಕೆಗಳು, ಕಂದಾಚಾರ ಪದ್ಧತಿಗಳೇ ಪ್ರಧಾನವಾಗಿ ಕಾಣುವ ಅನೇಕ ಸಂದರ್ಭಗಳಲ್ಲಿ ಹೀಗೆ ಲೇವಡಿ ಮಾಡುವುದು ಸ್ವಾಭಾವಿಕ. ವಿಚಾರಕ್ಕೆ ಎಟುಕದ ಇಂತಹ ಅನೇಕ ವಿದ್ಯಮಾನಗಳನ್ನು ನಾವು ಅವುಗಳ ಪರಿಣಾಮದಿಂದ ಮಾತ್ರ ಗುರುತಿಸಬಹುದು. ಇದಕ್ಕೆ ಯಾವ ಪೂರ್ವಗ್ರಹಗಳೂ ಇಲ್ಲದ ಆರೋಗ್ಯಕರವಾದ ಮನಸ್ಸು ಬೇಕು.

ನಮ್ಮ ಸಂಸ್ಕೃತಿಯಲ್ಲಿ ಅಥವಾ ಗುರುಕುಲ ಪದ್ಧತಿಯಲ್ಲಿ ಪ್ರಚಲಿತವಿದ್ದ ಈ ವಿಧಾನಗಳು ಸಂಪೂರ್ಣ ನಿರರ್ಥಕ ಎಂದು ಪಕ್ಕಕ್ಕೆ ತಳ್ಳಿದರೆ ನಾವು ಅಮೂಲ್ಯವಾದುದನ್ನು ಕಳೆದುಕೊಳ್ಳುತ್ತೇವೆ. ಆದರೆ ಇದೇ ವಿಧಿವಿಧಾನಗಳನ್ನು ಮನಸ್ಸಿನ ಆಳದಲ್ಲಿರುವ ನಮ್ಮ ಹುಟ್ಟರಿವುಗಳ ನಿಯಂತ್ರಣಕ್ಕೆ ಉದ್ದೇಶಪೂರ್ವಕವಾಗಿ ಬಳಸುವುದಾದರೆ ಅದು ವೈಚಾರಿಕತೆಗೆ ಸಾಧ್ಯವಾಗದ ಇತ್ಯಾತ್ಮಕ ಪರಿಣಾಮಗಳನ್ನು ನೀಡುತ್ತದೆ. ಆಳವಾಗಿ ಮನಸ್ಸಿನಲ್ಲೇ ಮುಳುಗುವ ಈ ಪ್ರಕ್ರಿಯೆಯಲ್ಲಿ ಒಂದು ಗಾಢವಾದ ನಂಬಿಕೆ ಕೆಲಸ ಮಾಡುತ್ತದೆ. ಈ ನಂಬಿಕೆ ಯಾವುದೆಂದರೆ ಮನುಷ್ಯ ತನ್ನ ಆಂತರ್ಯವನ್ನು ತಾನೇ ಬದಲಾಯಿಸಿಕೊಳ್ಳಬಲ್ಲ, ತನ್ನ ಕಾರ್ಯಗಳಿಗೆ ತಾನೇ ಹೊಣೆಗಾರಿಕೆಯನ್ನು ಭರಿಸಬಲ್ಲ; ಆ ಕಾರಣದಿಂದ ತನ್ನ ಕೃತ್ಯಗಳ ಮೇಲೆ ನಿಯಂತ್ರಣ ಸಾಧಿಸಬಲ್ಲ ಎನ್ನುವುದು. ಹೀಗೆ ಒಂದು ಗಾಢವಾದ ನಂಬಿಕೆಯೊಡನೆ ಜಪ, ಧ್ಯಾನ, ಭಜನೆಗಳ ಮೂಲಕ ತನ್ನದೇ ಮನಸ್ಸಿನ ಆಳವನ್ನು ಸಂಪರ್ಕಿಸಿದರೆ ಆಗ ಒಳಗೇ ಇದ್ದು ಆಳುವ ಶಕ್ತಿಗಳಿಂದ ಬಿಡುಗಡೆ ಪಡೆಯಲು ಸಾಧ್ಯವಾಗುತ್ತದೆ. ಕೊನೆಯ ಪಕ್ಷ ಅವುಗಳ ನಿಯಂತ್ರಣವಾದರೂ ಸಾಧ್ಯವಾಗುತ್ತದೆ. ಈ ಪ್ರಯತ್ನದಲ್ಲಿ ನಾವು ಒಂದು ಆಂತರಿಕ ಶಕ್ತಿಯನ್ನು ಸಂಪಾದಿಸಬಹುದು. ಈ ಶಕ್ತಿ ಮನುಷ್ಯನ ಮೂಲಭೂತ ಸ್ವರೂಪವನ್ನು ಬದಲಿಸಿಬಿಡುತ್ತದೆ. ಮನುಷ್ಯ ತನ್ನ ಮೂಲಭೂತ ಸ್ವರೂಪವನ್ನು ಹೀಗೆ ಬದಲಿಸಿಕೊಂಡಾಗ ಸದಾಕಾಲವೂ ಸಹಜಶೀಲತೆಯಿಂದ ಮತ್ತು ವ್ಯವಧಾನದಿಂದ ಕೂಡಿರುತ್ತಾನೆ. ಅವನಿಗೆ ಶ್ರದ್ಧೆ ಮೂಡುತ್ತದೆ. ಈ ಎಲ್ಲದರ ಪರಿಣಾಮವಾಗಿ ಉಂಟಾಗುವ ಇತ್ಯಾತ್ಮಕ ಮನೋಧರ್ಮವೇ ಶ್ರದ್ಧೆ. ಶ್ರದ್ಧೆಯಿರುವ ಯಾವುದೇ ವ್ಯಕ್ತಿ ಒಳಗೂ ಹೊರಗೂ ಶಾಂತಿಯನ್ನು ಸಂಪಾದಿಸುತ್ತಾನೆ, ಸತ್ಯವನ್ನರಿಯುತ್ತಾನೆ. ಒಟ್ಟಿನಲ್ಲಿ ಬದುಕಿನ ಸೌಂದರ್ಯವನ್ನು ಅಸ್ವಾದಿಸುವ ವ್ಯವಧಾನವನ್ನು ಪಡೆಯುತ್ತಾನೆ.

## ಗುಣಾತ್ಮಕ ಶಿಕ್ಷಣ ಮತ್ತು ಜೀವನದ ಸವಾಲುಗಳು

"ಗುಣಾತ್ಮಕ ಶಿಕ್ಷಣವು ಬದುಕಿನ ಸವಾಲುಗಳನ್ನು ಎದುರಿಸಲು ಮಕ್ಕಳನ್ನು ತಯಾರು ಮಾಡಬೇಕು" ಎಂಬ ಹೇಳಿಕೆ ಆಗಾಗ ಕೇಳಿಬರುತ್ತದೆ. ಬದುಕು ಎಂಬುದು ಸದಾ ಸವಾಲಿನ ಪ್ರಶ್ನೆಯಾದರೆ ಬದುಕಿನ ಸೌಂದರ್ಯ ಜೀವನಪ್ರೀತಿಗಳು ಉಳಿಯುತ್ತವೆಯೇ? ನಾವು ಬದುಕನ್ನು ಸವಾಲು ಎಂದು ಏಕೆ ಪರಿಗಣಿಸುತ್ತೇವೆ? ಈ ದೃಷ್ಟಿಯ ಹಿಂದೆ ಬದುಕಿನ ಬಗ್ಗೆ, ಈ ಜಗತ್ತಿನ ಬಗ್ಗೆ ಒಂದು ಆತಂಕದ ಅಪನಂಬಿಕೆಯ ದುಗುಡವಿದೆ. ಮನಸ್ಸಿನ ಆರೋಗ್ಯಕ್ಕೆ ಮಂಗಳದೃಷ್ಟಿ ಅಗತ್ಯ ಎಂಬುದನ್ನು ನಾವು ತಳ್ಳಿ ಹಾಕುವಂತಿಲ್ಲ. ಶಿಕ್ಷಣ ಬದುಕನ್ನು ಕೇವಲ ಸವಾಲು ಎಂಬ ಅರಿವಿನಿಂದ ಮಕ್ಕಳನ್ನು ತಯಾರು ಮಾಡುವುದಾದರೆ ಅದು ಜಗತ್ತನ್ನು ಅಪನಂಬಿಕೆಯ ಆಗರವನ್ನಾಗಿ ಮಾಡುವುದರಲ್ಲಿ ಸಂಶಯವಿಲ್ಲ. ಈ ಚರ್ಚೆಯ ಅರ್ಥ ಬದುಕಿನ ಸವಾಲುಗಳು ಅವಾಸ್ತವ ಎಂಬುದಲ್ಲ. ಆದರೆ ಇರುವ ಸವಾಲುಗಳನ್ನು ಇರುವಷ್ಟು ಪ್ರಮಾಣದಲ್ಲಿ ಮಾತ್ರ ನಾವು ನೋಡುತ್ತೇವೆಯೇ ಅಥವಾ ಈ ಸವಾಲುಗಳಿಗೆ ನಮ್ಮ ಆತಂಕದಿಂದಾಗಿ ಹುಟ್ಟುವ ಭ್ರಮಾತ್ಮಕ ಅವಘಡಗಳೂ ಸೇರಿಕೊಳ್ಳುತ್ತವೆಯೆ ಎನ್ನುವುದು ಇಲ್ಲಿ ಮುಖ್ಯ. ವಾಸ್ತವವಾಗಿ ದೊಡ್ಡವರು ಕಾಣುವಷ್ಟು ಅಪಾಯಗಳನ್ನು ಮಕ್ಕಳು ಈ ಪ್ರಪಂಚದಲ್ಲಿ ಕಾಣುವುದಿಲ್ಲ. ದೊಡ್ಡವರು ಕಾಣುವಷ್ಟು ಅಪಾಯಗಳು ಮಕ್ಕಳ ಈ ಜಗತ್ತಿನಲ್ಲಿ ಇರುವುದಿಲ್ಲ ಎಂಬುದು ನಮ್ಮ ಪ್ರಶಾಂತ ಮನಸ್ಸಿಗೆ ಕಂಡುಬರುತ್ತದೆ. ಈ ಜಗತ್ತು ನಂಬಿಕೆಗೆ ಅರ್ಹವಾದ ಪ್ರದೇಶವಲ್ಲ; ಇಲ್ಲಿ ಸದಾ ಕಾಲವೂ ನನ್ನ ಎಚ್ಚರದಲ್ಲಿ ನಾನಿರಬೇಕು ಎಂಬ ಆತಂಕ, ದುಗುಡ ತುಂಬಿದ ಮನಃಸ್ಥಿತಿಯಲ್ಲಿ ಮಾತ್ರ ನಾವು ಈ ಪ್ರಪಂಚವನ್ನು ಎದುರಿಸಬೇಕೆ? ಇದನ್ನೇ ಮಕ್ಕಳಿಗೆ ಕಲಿಸಬೇಕೆ? ಶಿಕ್ಷಣ ಈ ಜಗತ್ತು ಸ್ನೇಹರಂಗ ಎಂಬ ನಂಬಿಕೆಯನ್ನು ಹುಟ್ಟಿಸಬೇಕೆ ಹೊರತು ರಣರಂಗ ಎಂಬ ಭಾವನೆಯನ್ನು ಹುಟ್ಟಿಸಬಾರದು. ಈ ಜಗತ್ತು ಹೇಗೆ ಇದೆಯೊ ಹಾಗೆ ನಾವು ನೋಡಲು ಸಾಧ್ಯವಾದರೆ ಅದು ರಣರಂಗವಾಗಬೇಕಾಗಿಲ್ಲ.

ಇಲ್ಲಿ ಮನಃಶಾಸ್ತ್ರೀಯವಾದ ಮತ್ತೊಂದು ಅಂಶವನ್ನು ನಾವು ಗುರುತಿಸಬೇಕು. ಎರಿಕ್ ಎರಿಕ್ ಸನ್ ಎಂಬ ಮನೋವಿಜ್ಞಾನಿ ಹೇಳುವಂತೆ ಈ ಜಗತ್ತಿನ ಬಗ್ಗೆ ನಂಬಿಕೆ-ಅಪನಂಬಿಕೆಗಳು (Trust-Mistrust) ನಮ್ಮ ಶೈಶವದಲ್ಲೆ ರೂಪುಗೊಳ್ಳುತ್ತವೆ. ಹುಟ್ಟಿದ ಮೊದಲ ತಿಂಗಳುಗಳಲ್ಲಿ ತಾಯಿಯಾದವಳು ಮಗುವಿಗೆ ಸದಾ ಕಾಲವೂ ಸಮೀಪದಲ್ಲೇ ಇದ್ದುಕೊಂಡು ಹಸಿವಾದಾಗ ಹಾಲುಣಿಸಿ ಗಲೀಜು ಮಾಡಿಕೊಂಡಾಗ ತಡಮಾಡದೆ ಸ್ವಚ್ಛ ಮಾಡಿ ಮಗುವನ್ನು ಚೆನ್ನಾಗಿ ನೋಡಿಕೊಂಡರೆ ಈ ಮಕ್ಕಳು 'ನಾನು ಇರುವ ಈ ಪ್ರಪಂಚ ನಂಬಲರ್ಹವಾದದ್ದು, ಆತಂಕಕ್ಕೆ ಕಾರಣವಿಲ್ಲ' ಎಂಬ ಅನುಭವ ಪಡೆಯುತ್ತವೆ. ಈ ಅನುಭವ ಭಾವನಾ ರೂಪದಲ್ಲಿ ಮೆದುಳಿನ ನರಾಂತರ್ಜಾಲವಾಗಿ ಮುದ್ರಿತವಾಗುತ್ತದೆ. ಇಂತಹ ಮಕ್ಕಳು ಈ ಜಗತ್ತನ್ನು ನಂಬುತ್ತಾರೆ.

ಮಗು ಅನಂತರ ಪಡೆಯುವ ಅನುಭವಗಳು ಈ ಮೂಲನಂಬಿಕೆಯನ್ನಾಧರಿಸಿ ರೂಪುಗೊಳ್ಳುತ್ತದೆ. ಹಾಗಾಗಿ ಇಂತಹ ಮಕ್ಕಳು ಅನುಮಾನಪೀಡಿತರಾಗಿರುವುದಿಲ್ಲ. ಈ ಜಗತ್ತು ಸಹ್ಯವಾದ ಸುಂದರವಾದ ತಾಣ ಎಂಬ ನಿಲುವಿಗೆ ಬಂದು ನಿಲ್ಲುತ್ತಾರೆ. ಆದರೆ ಇದಕ್ಕೆ ವ್ಯತಿರಿಕ್ತ ಅನುಭವ ಪಡೆದ ಮಕ್ಕಳು ಶೈಶವದಿಂದಲೇ ಅಪನಂಬಿಕೆಯ ಅನುಭವದ ಸುತ್ತ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಅಪನಂಬಿಕೆ ಅಥವಾ Mis-trust ಅನ್ನು ವ್ಯಕ್ತಿತ್ವದ ಮೂಲ ಸ್ವರೂಪವನ್ನಾಗಿ ರೂಪಿಸಿಕೊಳ್ಳುತ್ತಾರೆ.

ನಮ್ಮ ಶಿಕ್ಷಣ ಈ ಜಗತ್ತಿನ ಸಮಸ್ತವನ್ನೂ ಒಂದು ಸವಾಲು ಎಂದು ಪರಿಗಣಿಸುತ್ತ ಜೀವನ ಸೌಂದರ್ಯವನ್ನು, ಜೀವನಪ್ರೀತಿಯನ್ನು ಕಡೆಗಣಿಸುವ ಶಿಕ್ಷಣವನ್ನು ನೀಡಿದರೆ ಇಂತಹ ಸುಶಿಕ್ಷಿತ ಜನಸಮೂಹದಿಂದ ರೂಪುಗೊಳ್ಳುವ ಪ್ರಪಂಚ ದುಗುಡವನ್ನು, ಆತಂಕವನ್ನು ಮಾತ್ರ ಕಾಣಲು ಸಿದ್ಧವಾಗುತ್ತದೆ. ಈ ಹಿನ್ನಲೆಯಲ್ಲಿ ನಾವು ಗುಣಾತ್ಮಕ ಶಿಕ್ಷಣವನ್ನು ಒಂದು ಸವಾಲಿಗೆ ಮಗುವನ್ನು ತಯಾರು ಮಾಡುವುದು ಎಂಬ ಸೀಮಿತ ಅರ್ಥದಿಂದ ಬಿಡುಗಡೆ ಮಾಡಬೇಕಾಗಿದೆ. ಬದುಕಿನಲ್ಲಿ ಏರಿಳಿತಗಳು, ವಿಷಮ ಸನ್ನಿವೇಶಗಳು ಇಲ್ಲವೇ ಇಲ್ಲ ಎಂದಲ್ಲ. ಆದರೆ ಈ ಸವಾಲುಗಳನ್ನು ಯಾವ ಮನೋಧರ್ಮದಿಂದ ಎದುರಿಸಬೇಕು ಎಂಬುದು ಮುಖ್ಯ. ಸಮಸ್ಯೆಯನ್ನರಿಯುತ್ತ ಸಮಸ್ಯೆಯ ಭಾಗವಾಗಿ ಬೆಳೆದರೆ ಸಮಸ್ಯೆಗೆ ಪರಿಹಾರವೆಲ್ಲಿ? ಆದ್ದರಿಂದ ಮಗುವಿನ ಮನಸ್ಸಿನಲ್ಲಿ ಈ ಪ್ರಪಂಚದ ಬಗ್ಗೆ ಆದಷ್ಟು ಮಂಗಳ ದೃಷ್ಟಿಯನ್ನು ಬಿತ್ತುವುದು ಮುಖ್ಯ. ಈ ಜಗತ್ತು ಸದಾ ಕಾದಾಟ ನಡೆಯುತ್ತಿರುವ ಅಪಾಯಗಳ ಆಗರ ಎಂಬ ಭಾವನೆಗಿಂತ ಮಗು ತನ್ನದೇ ವ್ಯಕ್ತಿತ್ವದ ಖಚಿತ ರೂಪುರೇಖೆಗಳ ಆಧಾರದ ಮೇಲೆ ಈ ಸವಾಲುಗಳನ್ನು ಎದುರಿಸಲು ಶಿಕ್ಷಣ ನೆರವಾಗಬೇಕು. ಇದೊಂದು ಬಹಳ ಸೂಕ್ಷ್ಮವಾದ ವಿಷಯ. ಇಂತಹ ಸೂಕ್ಷ್ಮವಾದ ಮನೋಧರ್ಮವನ್ನು ಬಿತ್ತುವ ಅಧ್ಯಾಪಕನಿಗೆ ಅಷ್ಟೇ ಸೂಕ್ಷ್ಮವಾದ ಮನಸ್ಸಿರಬೇಕು, ಸಂಯಮ ಇರಬೇಕು; ಎಲ್ಲಕ್ಕಿಂತ ಹೆಚ್ಚಾಗಿ ಅವನಿಗೆ ಮಂಗಳದೃಷ್ಟಿ ಇರಬೇಕು. ವ್ಯಕ್ತಿತ್ವನಿರ್ಮಾಣ ಎಂದರೆ ಇದೇ ಹೊರಗಿನ ಏರಿಳಿತಗಳು ಹೆಚ್ಚಾದಷ್ಟೂ ಆರೋಗ್ಯಕರ ಮನಸ್ಸಿನ ಸ್ಥಿರತೆ ಪುಟವಿಕ್ಕಿದ ಚಿನ್ನದಂತೆ ಮತ್ತಷ್ಟು ಸ್ಥಿರವಾಗುತ್ತ ಹೋಗುತ್ತದೆ. ಇದನ್ನು ಬೌದ್ಧಿಕ ಚಿಂತನೆಗಳಿಂದ ಮಾತ್ರ ಗಳಿಸಲಾಗುವುದಿಲ್ಲ. " ನೂರಾರು ನದಿಗಳು ಬಂದು ಸಮುದ್ರವನ್ನು ಸೇರಿದರೂ ಸಮುದ್ರ ಹೇಗೆ ಅಚಲವೊ ಹಾಗೆಯೆ ಸ್ಥಿತಪ್ರಜ್ಞನ ಮನಸ್ಸು" ಎಂದು ಗೀತೆಯಲ್ಲಿ ಹೇಳಿದೆ. ಇಂತಹ ಸ್ಥಿತಿ ಮನಸ್ಸಿಗೆ ಬರಬೇಕಾದರೆ ಧನಾತ್ಮಕ ಚಿಂತನೆ, ಮಂಗಳದೃಷ್ಟಿ, ಸಕಲ ಜೀವರಿಗೂ ಲೇಸನ್ನೆ ಬಯಸುವ ಮನಸ್ಸು – ಮುಖ್ಯವಾಗಿ ಸತ್ಯ–ಅಹಿಂಸೆಗಳ ಮೌಲ್ಯಗಳು ಬೇಕು. ಹಿಂದಿನ ಗುರುಕುಲ ಪದ್ಧತಿಯಲ್ಲಿ ಈ ಮನಸ್ಥಿತಿಗೆ ಬೇಕಾದ ತರಬೇತಿ ಶಿಕ್ಷಣದ ಬಹುಮುಖ್ಯ ಅಂಗವಾಗಿತ್ತು.

ಇಂದು ಎಲ್ಲಕ್ಕೂ 'ಇನ್‌ಸ್ಟೆಂಟ್ ರೆಮಿಡಿ' ಅಥವಾ ಆ ಕ್ಷಣದ ಪರಿಹಾರಗಳನ್ನು ಕಂಡುಕೊಳ್ಳುವ ಮನೋಧರ್ಮ ಬೆಳೆಯುತ್ತಿದೆ. ಮನುಷ್ಯನ ನಡವಳಿಕೆಗೆ ಸಂಬಂಧಪಟ್ಟಂತೆ

ಹೇಳುವುದಾದರೆ ಇಂದಿನ ಅವನ ಮನಃಸ್ಥಿತಿ ಅಥವಾ ಅವನ ನಡವಳಿಕೆ ಕೇವಲ ವರ್ತಮಾನದ ಘಟನೆಯಲ್ಲ. ವ್ಯಕ್ತಿಯ ವರ್ತಮಾನದ ಘಟನೆಗೆ ಆ ವ್ಯಕ್ತಿ ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದ ರೀತಿನೀತಿಗಳು ಕಾರಣವಾಗಿರುತ್ತವೆ. ಅವನ ನಡವಳಿಕೆ ಶೇಖರಿಸಿಕೊಂಡು ಬಂದ ಒಂದಕ್ಕೊಂದು ಸಂಬಂಧವಿರುವ ಘಟನಾವಳಿಯ ಸರಣಿಗೆ ಅನುಗುಣವಾಗಿರುತ್ತದೆ. ಹಾಗಾಗಿ ಇಂದಿನ ವಿಕೃತ ನಡವಳಿಕೆಯನ್ನು ಆ ನಡವಳಿಕೆಗಷ್ಟೇ ಔಷಧ ಕೊಡುವ ಮೂಲಕ ಪರಿಹರಿಸಲು ಸಾಧ್ಯವಿಲ್ಲ. ಅಥವಾ ಕಾಲಪಥದಲ್ಲಿ ಹಿಮ್ಮುಖವಾಗಿ ಹೋಗಿ ಆ ವ್ಯಕ್ತಿ ತಿಳುವಳಿಕೆ ಇಲ್ಲದೆ ರೂಢಿಸಿಕೊಂಡ ಮೂಲ ವಿಕೃತ ಭಾವನೆಯನ್ನು ಸರಿ ಮಾಡಬಹುದಾದ ಸಂದರ್ಭವನ್ನು ಸೃಷ್ಟಿಸಲು ಸಾಧ್ಯವಿಲ್ಲ. ಆದರೆ ಈ ಇನ್‌ಸ್ಟೆಂಟ್ ಯುಗದಲ್ಲಿ ಪರಿಹಾರಗಳೆಲ್ಲ ವರ್ತಮಾನದಲ್ಲಿ ಈಗ ಈ ಕ್ಷಣ ಲಭ್ಯವಾಗಿಬಿಡಬೇಕು. ಆದರೆ ಇದು ಅವಾಸ್ತವ ಎಂಬ ತಿಳುವಳಿಕೆ ನಮಗೆ ಬರಬೇಕು. 'ಧರ್ಮಗುರುಗಳು' ಅಥವಾ ಆಧುನಿಕ ಸಲಹೆಗಾರರು ಅಥವಾ ಸೈಕಾಲಜಿಸ್ಟ್‌ಗಳು 'ಇನ್‌ಸ್ಟೆಂಟ್ ರೆಮಿಡಿ'ಗಳನ್ನು ಕೊಡುತ್ತ ಹಣ ಮಾಡುತ್ತಾರಷ್ಟೆ. ಈ ಪರಿಹಾರ ಒಂದು ಮರೀಚಿಕೆ. ಇದು ಎಂದೂ ಸಮಸ್ಯೆಯನ್ನು ಬಗೆಹರಿಸಲಾರದು. ಭೂತಕಾಲದಲ್ಲಿ ತನ್ನ ಬೇರುಗಳನ್ನು ಬಿಟ್ಟಿರುವ ಸಮಸ್ಯೆಯನ್ನು ಮನುಷ್ಯ ವರ್ತಮಾನದಲ್ಲಿ ಶುಲ್ಕ ಕೊಟ್ಟು ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಸಮಸ್ಯೆ ಹುಟ್ಟುವ ಮೊದಲಿಗೆ ಅಂತಹ ಒಂದು ಸಮಸ್ಯೆಯನ್ನು ಊಹಿಸಿ ಅಗತ್ಯವಾದ ನಡವಳಿಕೆಯ ಸೂತ್ರಗಳನ್ನು ರೂಪಿಸಿಕೊಂಡು ಪರಿಹಾರೋಪಾಯಗಳನ್ನು ಕಂಡುಕೊಳ್ಳಬೇಕು. ವಿವೇಕ ಎಂದರೆ ಇದೇ. ಮುಂದೆ ಆಗುವ ಅವಘಡಗಳನ್ನು ಮೊದಲಿಗೇ ಊಹಿಸಿ ಸನ್ನದ್ಧರಾಗುವುದು. ಇಂತಹ ವಿವೇಕ ನಮ್ಮ ಗುರುಕುಲ ಪದ್ಧತಿಯಲ್ಲಿ ಖಂಡಿತವಾಗಿಯೂ ಇತ್ತು. ಗುರುಗಳು ಮನಸ್ಸನ್ನು ಕೇವಲ ಬೌದ್ಧಿಕವಾಗಿ ತಯಾರು ಮಾಡುತ್ತಿರಲಿಲ್ಲ. ಅವರು ಅನೇಕ ಬಗೆಯ ಕಠಿಣ ಕ್ರಮಗಳನ್ನು, ಅದರ ಜೊತೆಗೆ ಪ್ರೀತಿಯನ್ನು ಬೆರೆಸಿ ಶಿಷ್ಯರಿಗೆ ಧಾರೆಯೆರೆಯುತ್ತಿದ್ದರು.

ಆಧುನಿಕರಾಗುವ ಭ್ರಮೆಯಲ್ಲಿ ನಾವು ನಮ್ಮ ಗುರುಕುಲ ಪರಂಪರೆಯಲ್ಲಿ ಹುದುಗಿರುವ ವಿವೇಕವನ್ನು ಕಳೆದುಕೊಳ್ಳುತ್ತಿದ್ದೇವೆ. ಸಂಯಮ ಮತ್ತು ಕಾಮ–ಕಾಂಚನಾಸಕ್ತಿಯನ್ನು ಹತೋಟಿಯಲ್ಲಿಡುವುದೇ ಈ ವಿವೇಕದ ಪ್ರಥಮ ಸೋಪಾನ. ಈ ಪದ್ಧತಿ ರೂಪಿಸುವ ಮನಸ್ಸಿನ ತರಬೇತಿ ನಮ್ಮ ತರ್ಕಾಧಾರಿತ ವೈಚಾರಿಕತೆಗೆ ಸಮಂಜಸವಾಗಿ ಕಾಣದಿರಬಹುದು. ಏಕೆಂದರೆ ನಮ್ಮ ತರ್ಕ ವರ್ತಮಾನದ ವಿದ್ಯಮಾನವನ್ನು ಮಾತ್ರ ಗಣನೆಗೆ ತೆಗೆದುಕೊಂಡು ತೀರ್ಪು ನೀಡುತ್ತದೆ. ಆದರೆ ವರ್ತಮಾನದಲ್ಲಿ ಸಮಸ್ಯೆ ಇಲ್ಲದಿದ್ದರೂ ಮುಂದೆ ಹುಟ್ಟಬಹುದಾದ ಸಮಸ್ಯೆಯನ್ನು ಊಹಿಸಿ ಅದಕ್ಕೆ ಮುಂಜಾಗ್ರತೆಯ ಕ್ರಮವಾಗಿ ಕೆಲವು ಆಚರಣೆಗಳನ್ನು ಈ ಗುರುಕುಲ ಪದ್ಧತಿಯ ವಿವೇಕ ನಿಗದಿಪಡಿಸುತ್ತದೆ. ವರ್ತಮಾನದಲ್ಲಿ ಇಲ್ಲದ ಸಮಸ್ಯೆಗೆ ತಲೆಕೆಡಿಸಿಕೊಳ್ಳದಿರುವುದೇ ಬುದ್ಧಿವಂತಿಕೆ ಎಂದು ಭಾವಿಸಿರುವ ಜನಸಮುದಾಯದ ಮನಃಸ್ಥಿತಿ ಇವನ್ನೆಲ್ಲ ಅರ್ಥಹೀನ ಆಚರಣೆಗಳು

ಎಂದು ಪರಿಗಣಿಸಿ ಪಕ್ಕಕ್ಕೆ ತಳ್ಳಿಬಿಡುತ್ತದೆ. ತಂತ್ರಜ್ಞಾನದ ಸಾಧ್ಯತೆ ಆಯಾ ಕ್ಷಣದಲ್ಲೇ ಪರಿಹಾರವನ್ನು ಕಂಡುಕೊಳ್ಳುವ ವಿಧಾನವನ್ನು ತೋರಿಸುತ್ತಿರುವುದರಿಂದ ಎಲ್ಲಕ್ಕೂ ಆ ಕ್ಷಣದ ಪರಿಹಾರವೆ ಮದ್ದು ಎಂದು ನಮ್ಮ ಆಧುನಿಕ ಗುರುಗಳು ಬೋಧಿಸುತ್ತಿದ್ದಾರೆ. ಈ ಕಾರಣಗಳಿಂದಾಗಿ ಶಿಕ್ಷಣ ಬದುಕಿನ ಸಮಸ್ಯೆಯನ್ನು ಗುರುತಿಸಿ ಪರಿಹಾರ ನೀಡುವ ಬದಲು ಸಮಸ್ಯೆಯ ಭಾಗವಾಗಿ ಬೆಳೆಯುತ್ತ ಹೋಗುತ್ತಿದೆ. ಇದೊಂದು ನವಯುಗದ ಘೋರ ದುರಂತ. ಘೋರ ರೋಗಗಳಿಗೆ ಮುನ್ನೆಚ್ಚರಿಕೆ ಕ್ರಮವಾಗಿ ರೋಗನಿರೋಧಕಗಳನ್ನು ತೆಗೆದುಕೊಳ್ಳುವ ನಾವು ಮಾನಸಿಕ ರೋಗಗಳಿಗೆ ಪೂರ್ವಭಾವಿಯಾಗಿ ಲಸಿಕೆ ತೆಗೆದುಕೊಳ್ಳಲು ನಿರಾಕರಿಸುತ್ತಿರುವುದು ವಿಪರ್ಯಾಸವೇ ಸರಿ. ಸಿಡುಬು, ಪೋಲಿಯೊ ರೋಗಗಳ ಪರಿಣಾಮ ಕಣ್ಣೆದುರಿಗೆ ಕಾಣುತ್ತದೆ. ಆದರೆ ಪೂರ್ವ ಸಿದ್ಧತೆಯ ಮೂಲಕ ವ್ಯಕ್ತಿತ್ವದ ವಿಕೃತಿಗಳು ಎಂದರೆ ಮನೋರೋಗಗಳು ಉಲ್ಬಣಗೊಳ್ಳದಂತೆ ಪರಿಹಾರೋಪಾಯಗಳನ್ನು ಕಂಡುಕೊಳ್ಳದೆ ಇರುವುದು ಸಿಡುಬು, ಪೋಲಿಯೊಗಳಿಗಿಂತ ಘೋರ ಪರಿಣಾಮವನ್ನುಂಟು ಮಾಡುವುದರಲ್ಲಿ ಸಂದೇಹವಿಲ್ಲ.

# ೧೧. ನಮ್ಮ ಮುಂದಿರುವ ಆಯ್ಕೆ

'ಸುಸ್ಥಿರ ಸಮಾಜಕ್ಕಾಗಿ ಶಿಕ್ಷಣ' ಎಂಬ ಮಾತು ಸಂಪೂರ್ಣ ಸೋತಂತೆ ಕಾಣುತ್ತಿರುವ ಇಂದಿನ ಕಾಲದಲ್ಲಿ ನಾವು ಕೆಲವರಾದರೂ ಶಿಕ್ಷಣ ಸುಸ್ಥಿರ ಸಮಾಜಕ್ಕೆ ನಿಲ್ಲಬಲ್ಲ ಸಾಧ್ಯತೆಯನ್ನು ಜೀವಂತವಾಗಿಡಬೇಕು. ಜಾಗತೀಕರಣ ಸೃಷ್ಟಿಸಿರುವ ದುರಾಸೆಯೇ ಪ್ರಧಾನವಾದ ಜೀವನದೃಷ್ಟಿಯ ಕರಾಳ ರೂಪುಗಳು ಎದುರಿಗೆ ವಿಜೃಂಭಿಸುತ್ತಿದ್ದರೂ, ಪರಿಸರ ವಿಕೋಪಗಳು ಆಗಾಗ ಮನುಕುಲವನ್ನು ಎಚ್ಚರಿಸುತ್ತಿದ್ದರೂ ಬಹುಸಂಖ್ಯಾತರು ಎಚ್ಚರಗೊಂಡಿಲ್ಲ. ಏಕೆಂದರೆ ಭೂಮಿತಾಯಿ ತನ್ನ ಅಪರಿಮಿತ ಸಹಿಷ್ಣುತೆಯಿಂದ ಜೀವದಾಯಿನಿಯಾಗಿಯೇ ಉಳಿದಿದ್ದಾಳೆ. ಆದರೆ ತನ್ನ ಮೃತಸಂಜೀವಿನಿ ಶಕ್ತಿಯನ್ನು ಶೀಘ್ರಗತಿಯಲ್ಲಿ ಕಳೆದುಕೊಳ್ಳುತ್ತಿರುವ ಈಕೆ ಮನುಕುಲ ತನ್ನನ್ನೇ ತಾನು ಬದಲಿಸಿಕೊಳ್ಳಲು ಅಲ್ಪಕಾಲಾವಧಿಯನ್ನು ಕೊಟ್ಟಿದ್ದಾಳೆ.

ಈ ಎಲ್ಲಾ ಅವಘಡಗಳಿಗೂ ಮೂಲಕಾರಣ ಎಂದರೆ ಮನುಷ್ಯನ ದೌರ್ಬಲ್ಯವನ್ನೇ ಬಂಡವಾಳ ಮಾಡಿಕೊಂಡು ಸಾಧಿಸಲಾಗುತ್ತಿರುವ ಆರ್ಥಿಕ ಪ್ರಗತಿ. ಅಭಿವೃದ್ಧಿ ಎಂಬುದು ಆರ್ಥಿಕ ಪ್ರಗತಿಯ ಅಳತೆಗೋಲನ್ನಲದೆ ಬೇರಾವುದನ್ನೂ ಪರಿಗಣಿಸದೆ ಇರುವುದೇ ನಮ್ಮ ಎಲ್ಲ ದುರಂತಗಳಿಗೂ ಕಾರಣ. ಜಾಗತೀಕರಣ–ಇಂದಿನ ಶಿಕ್ಷಣ–ಅಭಿವೃದ್ಧಿ ಈ ಮೂರೂ ಪರಸ್ಪರ ಸಂಬಂಧ ಹೊಂದಿದ್ದು, ಏಕಪ್ರಕಾರದ ಜೀವನ ದೃಷ್ಟಿಯನ್ನು ಹುಟ್ಟುಹಾಕಿವೆ. ಈ ಜೀವನದೃಷ್ಟಿಯ ಹಿಂದೆ ಮನುಷ್ಯನ ದೌರ್ಬಲ್ಯಗಳನ್ನು ವೈಭವೀಕರಿಸಿ ಮನುಷ್ಯರನ್ನು ಸರಕುಸಂಸ್ಕೃತಿಯ ದಾಸ್ಯದಲ್ಲಿ ಮುಳುಗಿಸಿ ಲಾಭ ಗಳಿಸುವ ಉದ್ದೇಶವಿದೆ. ಇದು ಕೆಲವೇ ಕೆಲವು ಸ್ವಾರ್ಥಿಗಳ, ದುಷ್ಟರ ಸಾಂಸ್ಥಿಕ ಹುನ್ನಾರವಾದರೂ ತಮ್ಮ 'ದೌರ್ಬಲ್ಯ ಪ್ರೀತಿ' ಯಿಂದಾಗಿ ಇಡೀ ಮನುಕುಲ ಈ ವ್ಯಾಪಾರದಲ್ಲಿ ಪಾಲುದಾರವಾಗಿದೆ. ಮನುಷ್ಯನ ಮೌಲ್ಯಗಳು, ಜೀವನದೃಷ್ಟಿ ರೂಪುಗೊಳ್ಳುವ ಬಾಲ್ಯಾವಸ್ಥೆಯಲ್ಲಿ ನಾವು ಕೊಡುತ್ತಿರುವ ಶಾಲಾಶಿಕ್ಷಣ ದುರಂತಮಯ ಬದುಕಿಗೆ ಪೂರಕವಾಗಿದೆ. ಬಹುಸಂಖ್ಯಾತರ ಸರಾಸರಿ ಮನಸ್ಸಿಗೆ ನಿರ್ದಿಷ್ಟವಾದ ಆಯ್ಕೆ ಎಂಬುದು ಇರುವುದಿಲ್ಲ. ಅವರ ಆಯ್ಕೆ ಏನಿದ್ದರೂ ಬಹಳ ಜನ ಯಾವುದನ್ನು ಪುರಸ್ಕರಿಸುತ್ತಾರೋ ಅದು ಕ್ಷೇಮ ಎಂಬ ನಂಬಿಕೆಯ ಮೇಲೆ ಎಲ್ಲರೂ ಮಾಡುತ್ತಿರುವ ತಪ್ಪುಗಳನ್ನು ಜಾಚೂ ತಪ್ಪದೇ ಅನುಸರಿಸುತ್ತಾರೆ. ಇಂತಹ ಒಂದು ಸರಾಸರಿ ಮನಸ್ಸು ರೂಪುಗೊಳ್ಳಲು ಅಗತ್ಯವಾದ ಬುನಾದಿಯನ್ನು ನಮ್ಮ ಶಾಲಾಶಿಕ್ಷಣ ಬಾಲ್ಯದಲ್ಲೇ ಹಾಕಿಕೊಡುತ್ತಾ ಇದೆ.

ಪಂಚಭೂತಗಳನ್ನು ಸಂಪೂರ್ಣವಾಗಿ ಹತೋಟಿಗೆ ತರುವ ವಿದ್ಯೆಯನ್ನು ಕಲಿಸುವ ಮನೋವೈಜ್ಞಾನಿಕ ಪ್ರಧಾನವಾದ ಪಾಶ್ಚಾತ್ಯ ಶಿಕ್ಷಣ ಮಾದರಿಗಳು ನಮ್ಮ ಎದುರಿನಲ್ಲೇ ಇದೆ. ಈ ಶಿಕ್ಷಣವು ಮನುಷ್ಯನ ದೌರ್ಬಲ್ಯಗಳನ್ನು 'ನ್ಯಾಚುರಲ್' ಎನ್ನುತ್ತಾ ಈ ಭೂಮಿ–ಪಂಚಭೂತಗಳು ಇರುವುದೇ ಸುಖಜೀವನಕ್ಕಾಗಿ ಎಂಬಂತಹ ಜೀವನದೃಷ್ಟಿಯನ್ನು ನೀಡುತ್ತದೆ. ಕಣ್ಣಿಗೆ ಕಾಣದ ಅತೀತದ ಆದರ್ಶವನ್ನೇ ನಿತ್ಯಜೀವನದ ಹಾಸುಗಲ್ಲಾಗಿ ಮಾಡಿಕೊಂಡಿದ್ದ ಭಾರತೀಯ ಜೀವನವು ಒಪ್ಪೊತ್ತಿನ ಊಟವನ್ನೂ ನೀಡಲಾರದೆ ಸೋತುಹೋಗಿದೆ. ಹಾಗಾಗಿ ಇಂದಿನ ಭಾರತೀಯ ಮನಸ್ಸು ಪಾಶ್ಚಾತ್ಯ ಮಾದರಿಯ ಬದುಕಿಗೆ ಮಾರುಹೋಗಿದೆ. ಭೂಮಿಯನ್ನು ಹಸಿರಾಗಿ ಉಳಿಸಬಲ್ಲ ಶಿಕ್ಷಣದ ಸಿದ್ಧ ಮಾದರಿಯೊಂದು ನಮಗೆ ಎಲ್ಲೂ ಸಿಗುತ್ತಿಲ್ಲ. ಯೂರೋಪ್ ಮತ್ತು ಅಮೇರಿಕಾದ ಚಿಂತಕರೂ ಬದುಕಿನಿಂದ ದೂರಾಗುತ್ತಿರುವ ನಮ್ಮ ಇಂದಿನ ಶಿಕ್ಷಣ ಕುರಿತು ಚಿಂತಿಸಿಸುತ್ತಿದ್ದಾರೆ. ನಮ್ಮ ಮುಂದಿರುವ ಸವಾಲುಗಳು ಮುಖ್ಯವಾಗಿ ಎರಡು : ಭೂಮಿ ಹಸಿರಾಗಿಯೇ ಉಳಿಯುವಂತೆ ಮನುಕುಲ ಬದುಕು ಸಾಗಿಸಬೇಕು. ಇಂತಹ ಬದುಕನ್ನು ಸಾಧ್ಯವಾಗಿಸುವ ಜೀವನದೃಷ್ಟಿಯನ್ನು ಬಹುಸಂಖ್ಯಾತರಲ್ಲಿ ಮೂಡಿಸಬೇಕು ಮತ್ತು ಶಿಕ್ಷಣ ಇದನ್ನು ಸಾಧ್ಯ ಮಾಡಬೇಕು. ಬಹಳ ಹಿಂದೆಯೇ ಗಾಂಧೀಜಿಯವರು ಹೇಳಿರುವಂತೆ ಸರಳ ಜೀವನವೊಂದೇ ಇದಕ್ಕೆ ಇರುವ ಏಕೈಕ ಮಾರ್ಗ. ನಮ್ಮ ಶಿಕ್ಷಣ ವ್ಯವಸ್ಥೆ ಮಕ್ಕಳ ಮನಸ್ಸನ್ನು ಇಂತಹ ಒಂದು ಸರಳ ಜೀವನಕ್ಕೆ ಸನ್ನದ್ಧಗೊಳಿಸಬೇಕು.

ಅನುಬಂಧ

# ಸರ್ಕಾರಿ ಶಾಲೆಗಳಲ್ಲಿ ಗುಣಾತ್ಮಕ ಶಿಕ್ಷಣ

ನಮ್ಮ ದೇಶದ ಶೇಕಡ ಎಂಬತ್ತರಷ್ಟು ಮಕ್ಕಳು ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲೇ ಕಲಿಯುತ್ತಾರೆ. ವ್ಯವಸ್ಥೆ ದೊಡ್ಡದಾದಷ್ಟೂ ಅಲ್ಲಿ ಯಾಂತ್ರಿಕತೆ ಪ್ರವೇಶಿಸುತ್ತದೆ. ಹಾಗಾಗಿ ಶಿಕ್ಷಣದ ಗುಣಾತ್ಮಕತೆ ನೇಪಥ್ಯಕ್ಕೆ ಸರಿಯುತ್ತದೆ. ಇದನ್ನು ಮನಗಂಡ ಶಿಕ್ಷಣತಜ್ಞರು, ಶಿಕ್ಷಣಾಸಕ್ತರು ಆಯ್ದ ಕೆಲವು ಸರ್ಕಾರಿ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟ ಹೆಚ್ಚಿಸಲು ಪ್ರಯತ್ನಿಸಿದ್ದಾರೆ. ಏಕಲವ್ಯ ಇಂತಹ ಒಂದು ಪ್ರಯತ್ನ, ದಿಗಂತರ್ ಶಾಲೆ ಅಥವಾ ವಿಜ್ಞಾನಾಶ್ರಮಗಳ ಪ್ರಯತ್ನ ಉತ್ತರಭಾರತದಲ್ಲಿ ನಡೆದಿವೆ. ಈ ಪ್ರಯತ್ನಗಳ ಪರಿಣಾಮವನ್ನು ತಿಳಿಯಲು ಅನೇಕ ಅಧ್ಯಯನಗಳೂ ನಡೆದಿವೆ. ದುರದೃಷ್ಟ ಎಂದರೆ ಈ ಪ್ರಯತ್ನಗಳು ಸರ್ಕಾರಿ ಶಾಲೆಗಳಲ್ಲಿ ನಿರಂತರವಾದ ಶೈಕ್ಷಣಿಕ ಗುಣಮಟ್ಟವನ್ನು ಅನುಷ್ಠಾನಕ್ಕೆ ತರಲು ವಿಫಲವಾಗಿವೆ. ಎಲ್ಲಿಯವರೆಗೆ ಸರ್ಕಾರಿ ಶಾಲೆಗಳ ಜೊತೆ ಈ ಸ್ವಯಂಸೇವಾ ಸಂಸ್ಥೆಗಳು ಕೆಲಸ ಮಾಡುತ್ತವೆಯೋ ಅಲ್ಲಿಯವರೆಗೆ ಈ ಸರ್ಕಾರಿ ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಣ, ಎಂದರೆ ಮುಖ್ಯವಾಗಿ ಚಟುವಟಿಕೆಯಾಧಾರಿತ ಶಿಕ್ಷಣ ನಡೆಯುತ್ತದೆ. ಈ ಸ್ವಯಂಸೇವಾ ಸಂಸ್ಥೆಗಳು ಹಿಂದೆ ಸರಿದ ಕೂಡಲೇ ಸರ್ಕಾರಿ ಶಾಲೆಗಳು ತಮ್ಮ ಮೊದಲಿನ ಸ್ಥಿತಿಗೆ ಹಿಂತಿರುಗುವುದನ್ನು ಈ ಅಧ್ಯಯನಗಳು ತೋರಿಸಿವೆ.

ನಮ್ಮ ದೀನಬಂಧು ಸಂಸ್ಥೆಯ ವತಿಯಿಂದ ಚಾಮರಾಜನಗರದಲ್ಲಿ ಆಯ್ದ ಮೂವತ್ತು ಸರ್ಕಾರಿ ಪ್ರಾಥಮಿಕ ಶಾಲೆಗಳೊಡನೆ ಕಳೆದ ಒಂದು ದಶಕದಿಂದಲೂ ಶಿಕ್ಷಕರ ವೃತ್ತಿಪರತೆಯನ್ನು ಹೆಚ್ಚಿಸಲು, ತರಗತಿಯ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸುತ್ತಿದ್ದೇವೆ. ಈ ಪ್ರಯತ್ನದ ಫಲವಾಗಿ ನಮ್ಮ ಸರ್ಕಾರಿ ಶಾಲಾ ಅಧ್ಯಾಪಕರು ಶಿಕ್ಷಣದಲ್ಲಿ ಗುಣಮಟ್ಟ ಎಂಬುದು ಬಹಳ ಮುಖ್ಯ, ಗುಣಮಟ್ಟವಿಲ್ಲದ ಯಾಂತ್ರಿಕ ಶಿಕ್ಷಣದಿಂದ ಏನೂ ಪ್ರಯೋಜನವಿಲ್ಲ ಎಂಬ ಗಾಢನಂಬಿಕೆಯನ್ನು ಪಡೆದಿದ್ದಾರೆ. ಆಯ್ದ ಈ ಎಲ್ಲ ಶಾಲೆಗಳಲ್ಲೂ ಚಟುವಟಿಕೆ ಆಧಾರಿತ ಬೋಧನೆ ನಡೆಯುತ್ತಿದೆ. ಈಗಾಗಲೇ ನಡೆದಿರುವ ಇಂತಹ ಪ್ರಯೋಗಗಳು ಗುಣಾತ್ಮಕವಾಗಿ ಶಾಶ್ವತ ಬದಲಾವಣೆಗಳನ್ನು ಮಾಡಲು ಸೋತಿರುವುದರಿಂದ ನಾವು ಸರ್ಕಾರಿ ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಣ ಶಾಶ್ವತವಾಗಿ ನೆಲೆ ನಿಲ್ಲಲು ಏನು ಮಾಡಬಹುದೆಂದೂ, ಹೇಗೆ ಮಾಡಬಹುದೆಂದೂ ಆಲೋಚಿಸಿ ಕೆಲಸ ಮಾಡುತ್ತಿದ್ದೇವೆ.

ಶಿಕ್ಷಣ ಎಂಬುದು ಮಗುವಿಗೆ ಅನುಭವದ ಕಲಿಕೆಯಾಗಬೇಕಾದರೆ ಚಟುವಟಿಕೆ ಆಧಾರಿತ ಬೋಧನೆ ನಡೆಯಲೇಬೇಕು. ಸರ್ಕಾರದ ವಲಯಗಳಲ್ಲೂ ಚಟುವಟಿಕೆ

ಆಧಾರಿತ ಬೋಧನೆಗೆ ಸಾಕಷ್ಟು ಒತ್ತು ಕೊಡಲಾಗುತ್ತಿದೆ. ಆದರೆ ಚಟುವಟಿಕೆ ಆಧಾರಿತ ಬೋಧನೆ ಎಂದ ಕೂಡಲೇ ಶಾಲಾ ಶಿಕ್ಷಕರು ಅಸಂಬದ್ಧವಾದ ಚಟುವಟಿಕೆಗಳಲ್ಲಿ ತೊಡಗುವುದನ್ನು ಅನೇಕ ಶಾಲೆಗಳಲ್ಲಿ ಕಾಣಬಹುದು. ಅಧ್ಯಾಪಕ ಕೈಗೊಳ್ಳುವ ಚಟುವಟಿಕೆಗಳಿಗೂ ಕಲಿಯಬೇಕಾಗಿರುವ ವಿಷಯಕ್ಕೂ ಅನ್ಯೋನ್ಯ ಸಂಬಂಧವಿದ್ದು, ಚಟುವಟಿಕೆಯಿಂದಾಗಿ ಮಗು ಸ್ಪಷ್ಟವಾದ ಜ್ಞಾನವನ್ನು ಪಡೆಯುವಂತಿರಬೇಕು. ಇಂತಹ ಒಂದು ಸಂಬಂಧಗಳ ಸ್ಪಷ್ಟತೆ ಅಧ್ಯಾಪಕನಿಗೆ ಬರಬೇಕಾದರೆ ಅವನಿಗೆ ತರಬೇತಿ ಬೇಕು, ಮಾರ್ಗದರ್ಶನ ಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಪ್ರೋತ್ಸಾಹ ಬೇಕು.

ನಾವು ಕೈಗೊಂಡ ಕಾರ್ಯಕ್ರಮದಲ್ಲಿ ಇವೆಲ್ಲವೂ ಇರುವಂತೆ ಎಚ್ಚರಿಕೆ ವಹಿಸಿದ್ದೇವೆ. ಒಂದು ದಶಕದ ನಮ್ಮ ಪ್ರಯತ್ನದಲ್ಲಿ ಅಧ್ಯಾಪಕರಿಗೂ ನಮಗೂ ವಿಶೇಷವಾದ ಸ್ನೇಹಸಂಬಂಧವೊಂದು ಹುಟ್ಟಿದೆ. ಸಾಮಾನ್ಯವಾಗಿ ಸರ್ಕಾರಿ ಶಾಲಾ ಅಧ್ಯಾಪಕರು ಹೊರಗಿನಿಂದ ಬರುವ ನೆರವನ್ನು ಒಂದು ತೊಂದರೆಯೆಂದು ಭಾವಿಸುವುದೇ ಹೆಚ್ಚು. ಕೆಲವರಂತೂ ತಮ್ಮೊಳಗಿನ ಹುಳುಕುಗಳು ಬಹಿರಂಗವಾದೀತೆಂದು ಹೆದರಿ ಹೊರಗಿನ ನೆರವನ್ನು ಸಾರಾಸಗಟಾಗಿ ತಿರಸ್ಕರಿಸುತ್ತಾರೆ. ಈ ಎಲ್ಲವನ್ನೂ ಮೊದಲೇ ಊಹಿಸಿ ನಾವು ಸರ್ಕಾರಿ ಶಾಲೆಗಳ ಅಧ್ಯಾಪಕರ ಜೊತೆ ಅನ್ಯೋನ್ಯ ಸಂಬಂಧವನ್ನು ಬೆಳೆಸಿಕೊಂಡಿದ್ದೇವೆ. ನಮ್ಮ ಯಶಸ್ಸಿನ ಗುಟ್ಟು ಹೀಗಿದೆ.

- ಮೊದಲನೆಯದಾಗಿ ಅಧ್ಯಾಪಕರಲ್ಲಿ ಈಗಾಗಲೇ ಇರುವ ಇತ್ಯಾತ್ಮಕ ಅಂಶಗಳನ್ನು, ಜ್ಞಾನವನ್ನು ಗುರುತಿಸಿ ಅಧ್ಯಾಪಕನಿಗೆ ತನ್ನಲ್ಲೇ ತನಗೆ ಆತ್ಮವಿಶ್ವಾಸ ಮೂಡುವಂತೆ ನಾವು ನಡೆದುಕೊಳ್ಳುತ್ತೇವೆ. ಲೋಟದ ಅರ್ಧಭಾಗ ಮಾತ್ರ ನೀರು ತುಂಬಿದೆ ಎಂದು ಇಟ್ಟುಕೊಳ್ಳಿ. ಆಗ 'ಅರ್ಧಕ್ಕರ್ಧ ಖಾಲಿಯೇ ಇದೆ' ಎಂದು ಹೀಗಳೆಯಬಹುದು. ಅಥವಾ 'ಓ, ಈಗಾಗಲೇ ಲೋಟ ಅರ್ಧ ತುಂಬಿದೆ' ಎಂದು ಪ್ರೋತ್ಸಾಹದಾಯಕವಾಗಿಯೂ ಹೇಳಬಹುದು. ಹೀಗೆ ಹೇಳಿದುದರ ಅರ್ಥ ಒಂದೇ ಆದರೂ ಪರಿಣಾಮದಲ್ಲಿ ವ್ಯತ್ಯಾಸವಿದೆ ಎಂದು ಗಮನಿಸಬೇಕು. ನಮ್ಮ ಇತ್ಯಾತ್ಮಕ ವಿಧಾನ ಅಧ್ಯಾಪಕರಲ್ಲಿ ಆತ್ಮವಿಶ್ವಾಸವನ್ನೂ ಮತ್ತು ಪ್ರಗತಿ ಸಾಧಿಸಬೇಕೆಂಬ ಉತ್ಸಾಹವನ್ನೂ ತುಂಬಿದೆ.
- ನಮ್ಮ ಪ್ರಯತ್ನಗಳು ಸಫಲವಾಗಬೇಕಾದರೆ ಅಧ್ಯಾಪಕರು ನೆರವು ನೀಡುವ ನಮ್ಮನ್ನು ಹೃತ್ಪೂರ್ವಕವಾಗಿ ಅಂಗೀಕರಿಸಬೇಕು. ಹೀಗೆ ಅವರು ನಮ್ಮನ್ನು ಸ್ವೀಕರಿಸಬೇಕಾದರೆ ನಾವು ನಮ್ಮ ಅಹಂಕಾರವನ್ನು ಬದಿಗಿಟ್ಟು, ಯಾವ ಸಂದರ್ಭದಲ್ಲೂ 'ನಾನು ನಿನಗಿಂತ ಹೆಚ್ಚು' ಎಂದು ತೋರಿಸಿಕೊಳ್ಳದೆ ಅತ್ಯಂತ ಸಂಯಮದಿಂದ ಅಧ್ಯಾಪಕನಿಗೆ ನಿರಂತರ ನೆರವನ್ನು ನೀಡಬೇಕು. ಇದು ಹೇಗಿರಬೇಕು ಎಂದರೆ ಡಾಕ್ಟರ್ ಅರಿವಳಿಕೆ ಮದ್ದುಕೊಟ್ಟು ಶಸ್ತ್ರಚಿಕಿತ್ಸೆ ಮಾಡಿ

ರೋಗ ಗುಣಪಡಿಸುವಂತಿರಬೇಕು. ಇಂತಹ ಒಂದು ಪ್ರಕ್ರಿಯೆ ಸ್ವಲ್ಪಕಾಲ ನಡೆದ ಮೇಲೆ ಅಧ್ಯಾಪಕರು ನಮ್ಮನ್ನು ಪ್ರೀತಿಸಲು ಪ್ರಾರಂಭಿಸುತ್ತಾರೆ, ಹೃತ್ಪೂರ್ವಕವಾಗಿ ಸ್ವೀಕರಿಸುತ್ತಾರೆ. ಜೊತೆಗೆ ಯಾವ ಗುಣಮಟ್ಟದ ಶಿಕ್ಷಣ ಮುಖ್ಯವೆಂದು ನಾವು ಭಾವಿಸುತ್ತೇವೆಯೋ ಅದನ್ನು ಈ ಅಧ್ಯಾಪಕರು ಸಹ ಮುಖ್ಯವೆಂದು ಭಾವಿಸತೊಡಗುತ್ತಾರೆ.

- ಹೀಗೆ ಸುದೀರ್ಘಕಾಲದ ನೆರವಿನಿಂದ ನಾವು ಸಾಧಿಸಿದ ಗುಣಮಟ್ಟದ ಶಿಕ್ಷಣ ಸರ್ಕಾರಿ ಶಾಲೆಗಳಲ್ಲಿ ಶಾಶ್ವತವಾಗಿ ಮುಂದುವರೆಯಲು ಸಾಧ್ಯವೇ? ಇದೊಂದು ಬಹಳ ಮುಖ್ಯವಾದ ಪ್ರಶ್ನೆ. ಕೇವಲ ವ್ಯಕ್ತಿಗಳಲ್ಲಿ ಮಾತ್ರ ನಾವು ಬದಲಾವಣೆಯನ್ನು ತಂದರೆ ಈ ಬದಲಾವಣೆ ಆಯಾ ವ್ಯಕ್ತಿಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಆದರೆ ಒಂದು ನಿರ್ದಿಷ್ಟ ಪ್ರದೇಶದ ಇಡೀ ವ್ಯವಸ್ಥೆಯಲ್ಲೇ ಮೂಲಭೂತ ಬದಲಾವಣೆಗಳನ್ನು ತಂದರೆ ಆಗ ಈ ಭಾಗದ ವ್ಯವಸ್ಥೆ ತನ್ನದೇ ಸಂಸ್ಕೃತಿಯನ್ನು ಬೆಳೆಸಿಕೊಳ್ಳುತ್ತದೆ ಮತ್ತು ಆ ಸಂಸ್ಕೃತಿಗನುಗುಣವಾಗಿ ಮುಂದುವರಿಯುತ್ತದೆ. ಇದನ್ನು ಪೂರ್ವಭಾವಿಯಾಗಿ ಆಲೋಚಿಸಿ ಇಂತಹ ಒಂದು ಬದಲಾವಣೆಯ ಪ್ರಯತ್ನವನ್ನು ನಾವು ಕೈಗೊಂಡೆವು.
- ನಮ್ಮ ಈ ಪ್ರಯತ್ನಕ್ಕೆ ಒಂದು ಸೈದ್ಧಾಂತಿಕ ನೆಲೆಯಿದೆ. ಏನೆಂದರೆ ಅಧ್ಯಾಪಕರು ಗುಣಮಟ್ಟದ ಶಿಕ್ಷಣಕ್ಕೆ ಸಂಬಂಧಪಟ್ಟ ಚಟುವಟಿಕೆ ಆಧಾರಿತ ಬೋಧನೆಯನ್ನು ಎಡೆಬಿಡದೆ ಕೈಗೊಳ್ಳುವಂತಹ ಒಂದು ವಾತಾವರಣವನ್ನು ಸೃಷ್ಟಿಸುವುದು. ಹೀಗೆ ನಿರಂತರವಾಗಿ ಈ ಪ್ರದೇಶದ ಎಲ್ಲ ಶಿಕ್ಷಕರು ಚಟುವಟಿಕೆ ಆಧಾರಿತ ಬೋಧನೆಯನ್ನು ತಮ್ಮ ಬೋಧನಾ ವಿಧಾನವಾಗಿ ಅಳವಡಿಸಿಕೊಂಡರೆ ಇದು ಒಂದು ಅಭ್ಯಾಸವಾಗಿ ಪರಿಣಮಿಸುತ್ತದೆ. ಈ ಅಭ್ಯಾಸವನ್ನು ಕೆಲಕಾಲ ಜೀವಂತವಾಗಿಟ್ಟುಕೊಂಡರೆ ಇದರಿಂದ ವೈಯಕ್ತಿಕ ನೆಲೆಗಳಲ್ಲಿ ಎಲ್ಲಾ ಅಧ್ಯಾಪಕರು ಒಂದು 'ಗುಣ' (Character)ವನ್ನು ಬೆಳೆಸಿಕೊಳ್ಳುತ್ತಾರೆ. ಹೀಗೆ ಒಂದು ನಿರ್ದಿಷ್ಟ ಗುಣವುಳ್ಳ ವ್ಯಕ್ತಿಗಳ ಸಮೂಹವೇ ಸಂಸ್ಕೃತಿಯಾಗುತ್ತದೆ. ಹೀಗೆ ಒಂದು ಶಿಕ್ಷಣಸಂಸ್ಕೃತಿಯೊಂದು ರೂಪುಗೊಂಡರೆ ಅದು ತಾನೇ ತಾನಾಗಿ ಮುಂದುವರಿಯುತ್ತದೆ. ನಾವು ಇಂತಹ ಒಂದು ಸಂಸ್ಕೃತಿಯ ಸ್ಥೂಲ ರೂಪರೇಖೆಗಳನ್ನು ಈಗಾಗಲೇ ನಮ್ಮ ಪ್ರದೇಶದಲ್ಲಿ ಕಾಣಲಾರಂಭಿಸಿದ್ದೇವೆ. ಬದಲಾದ ಈ ಪರಿಸರದಿಂದ ಒಬ್ಬರೋ ಇಬ್ಬರೋ ಅಧ್ಯಾಪಕರು ವರ್ಗವಾಗಿ ಹೋದರೂ ಹೊಸದಾಗಿ ಬಂದ ಅಧ್ಯಾಪಕರು ಪ್ರಚಲಿತವಿರುವ ಶಿಕ್ಷಣ ಸಂಸ್ಕೃತಿಯನ್ನು ತಾವೇ ತಾವಾಗಿ ಮೈಗೂಡಿಸಿಕೊಳ್ಳುತ್ತಾರೆ.

ಮೇಲೆ ಸಂಗ್ರಹವಾಗಿ ಹೇಳಿದ ಬದಲಾವಣೆಯ ಸರಣಿಯನ್ನು ಸುಲಭವಾಗಿ ಸಾಧಿಸಲು ಸಾಧ್ಯವಿಲ್ಲ. ಆದರೆ ಪ್ರತಿಯೊಂದೂ ಹಂತದಲ್ಲಿ ಸ್ವಯಂಸೇವಾ ಕಾರ್ಯಕರ್ತರು

ಉತ್ಸಾಹ ಕಳೆದುಕೊಳ್ಳದೆ ನಿರಂತರವಾಗಿ ಕೆಲಸ ಮಾಡಿದರೆ ಇಡೀ ಶಿಕ್ಷಣ ವ್ಯವಸ್ಥೆ ನಮ್ಮೊಡನೆ ಕೈಜೋಡಿಸುತ್ತದೆ. ಇದು ನಮ್ಮ ಅನುಭವ ಕೂಡ. ಕಳೆದ ಒಂದು ದಶಕದಲ್ಲಿ ಡಯೆಟ್ ಆಗಿರಬಹುದು ಅಥವಾ ಡಿಡಿಪಿಐ ಅವರ ಇಲಾಖೆಯಾಗಿರಬಹುದು – ಈ ಎಲ್ಲವೂ ನಮ್ಮೊಡನೆ ಅತ್ಯಂತ ನಿಕಟವಾಗಿ ಸ್ನೇಹದಿಂದ ವರ್ತಿಸುತ್ತಿವೆ. ಮುಖ್ಯವಾಗಿ ಎಲ್ಲಾ ಸರ್ಕಾರಿ ಅಧಿಕಾರಿಗಳೂ ಸಹ ಅಹಂ ಇಲ್ಲದ ಪ್ರಾಮಾಣಿಕ ಪ್ರಯತ್ನಗಳಿಗೆ ಸ್ಪಂದಿಸುತ್ತಾರೆ. ಈ ಅಧಿಕಾರಿಗಳನ್ನು ನಮ್ಮ ವಿಶ್ವಾಸಕ್ಕೆ ತೆಗೆದುಕೊಳ್ಳುವುದು ಅಷ್ಟೇನೂ ಕಷ್ಟವಲ್ಲ.

# ಕೆಲವು ಅಭಿಪ್ರಾಯಗಳು

**ಚೆನ್ನವೀರ ಕಣವಿ, ಧಾರವಾಡ.**

ಸ್ವತಃ ಕಾಲೇಜಿನಲ್ಲಿ ವಿಜ್ಞಾನದ ಅಧ್ಯಾಪಕನಾಗಿ ಕೆಲಸಮಾಡಿ, ಗಿರಿಜನರೊಡನೆ ಒಡನಾಟ – ಸಂಪರ್ಕವಿಟ್ಟುಕೊಂಡು ಸಮಾಜ ಸೇವೆಯಲ್ಲಿ ತೊಡಗಿದ ಜಿ.ಎಸ್.ಜಯದೇವ, ಕಳೆದ ಎರಡು ದಶಕಗಳಿಂದ ಚಾಮರಾಜನಗರದಲ್ಲಿ 'ದೀನಬಂಧು ಸಂಸ್ಥೆ'ಯನ್ನು ಸ್ಥಾಪಿಸಿ, ಅನಾಥ ನಿರ್ಗತಿಕ ಗಂಡು ಮಕ್ಕಳ ಏಳಿಗೆಗಾಗಿ 'ದೀನಬಂಧು ಮಕ್ಕಳ ಮನೆ' ಆಶ್ರಮಶಾಲೆ ನಡೆಸುತ್ತಿರುವ ಅವರಿಗೆ ಶಿಕ್ಷಣವೆಂದರೆ ಎಲ್ಲಿಲ್ಲದ ಆಸಕ್ತಿ. ಈ ಮುಂಚಿನ 'ಹಳ್ಳಿ ಹಾದಿ' ಗ್ರಂಥದಲ್ಲಿಯೂ ಉಳಿದ ವಿಷಯಗಳ ಜೊತೆಗೆ ಶಿಕ್ಷಣದ ಬಗೆಗಿನ ತಮ್ಮ ವೈವಿಧ್ಯಮಯವಾದ ಅನುಭವಗಳನ್ನು ಪ್ರಸ್ತುತ ಪಡಿಸಿ ತೀವ್ರವಾದ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸಿದ ಅವರು "ಶಿಕ್ಷಣ ಮತ್ತು ಸಮಾಜ" ಗ್ರಂಥದಲ್ಲಿ ಇನ್ನಷ್ಟು ವ್ಯಾಪಕವಾಗಿ ಶಿಕ್ಷಣ ಕುರಿತ ಸ್ವೋಪಜ್ಞ ಚಿಂತನೆಗಳನ್ನು ನೈತಿಕ ಜವಾಬ್ದಾರಿಯಿಂದ, ಅನುಷ್ಠಾನಕ್ಕೆ ಒತ್ತು ಕೊಟ್ಟು ಮುಂದುವರೆಸಿದ್ದಾರೆ.

ನಮ್ಮ ಬದುಕು, ವ್ಯಕ್ತಿತ್ವ, ಪರಿಸರ, ಆದರ್ಶಗಳು – ಮಿತಿಗಳು ಇತ್ಯಾದಿಗಳೊಡನೆ ಶಿಕ್ಷಣದ ಸಂಬಂಧವನ್ನು ಮುಖಾಮುಖಿಯಾಗಿ ವಿವೇಚಿಸಿ ವಿಶ್ಲೇಷಿಸುವ ಇಲ್ಲಿಯ ಕ್ರಮಕ್ಕೆ ಅನುಭವಗಳನ್ನೇ ಆಧಾರವಾಗಿಸಿ ಸಮಸ್ಯೆಗಳಿಗೆ ಪರಿಹಾರವನ್ನೂ ಸೂಚಿಸಿರುವುದು ಗಮನಾರ್ಹವಾಗಿದೆ. ಮನುಷ್ಯನ ಮನಸ್ಸಿನಲ್ಲಿರುವ ಎಲ್ಲ ದೌರ್ಬಲ್ಯಗಳನ್ನು ಬಂಡವಾಳ ಮಾಡಿಕೊಂಡ ಜಾಗತೀಕರಣ, ಕೊನೆಯಿಲ್ಲದ ತಾಂತ್ರಿಕ ಪ್ರಗತಿ ದುರಾಸೆಗಳನ್ನು ಹೆಚ್ಚಿಸಿ, ಬದುಕಿನ ಕೃತಕ ಅವಶ್ಯಕತೆಗಳ ಪೂರೈಕೆಗೆ ಮಕ್ಕಳನ್ನು ಸಿದ್ಧಗೊಳಿಸುತ್ತ, ಸರಳ ಜೀವನದಲ್ಲಿ ಸಂತೋಷವಿದೆಯೆಂಬ ಸತ್ಯವನ್ನು ತಿಳಿಸಿಕೊಡದಿರುವ ಬಗೆಗಿನ ಲೇಖಕರ ವಿಷಾದ ಶಿಕ್ಷಣದಲ್ಲಿ ನಿಜವಾದ ಆಸಕ್ತಿಯುಳ್ಳವರ ಕಣ್ಣು ತೆರೆಸುವಂತಿದೆ.

ಜೀವನವನ್ನು ಸಮಗ್ರವಾಗಿ ನೋಡಬಲ್ಲ ಒಂದು ಸರಳ ಜೀವನ ದೃಷ್ಟಿಯನ್ನು ರೂಪಿಸುವ ಶಿಕ್ಷಣದ ಅವಶ್ಯಕತೆಯನ್ನು ಪ್ರತಿಪಾದಿಸುವ ಈ ಗ್ರಂಥ ಲೇಖಕರು ಆಶಿಸುವಂತೆ ಶಿಕ್ಷಣ ಕ್ಷೇತ್ರದಲ್ಲಿ ದುಡಿಯುತ್ತಿರುವ ಎಲ್ಲಾ ಸಹೃದಯರ ಕೈಸೇರಿ, ಅವರ ಮನಸ್ಸನ್ನು ಪರಿವರ್ತಿಸುವಂತಾಗಲಿ ಎಂದು ಹಾರೈಸುತ್ತೇನೆ.

## ಪ್ರೊ. ಬರಗೂರು ರಾಮಚಂದ್ರಪ್ಪ

ಪ್ರೊ. ಜಿ.ಎಸ್.ಜಯದೇವ ಅವರ 'ಶಿಕ್ಷಣ ಮತ್ತು ಸಮಾಜ' ಎಂಬ ಕೃತಿಯು ಸಮಕಾಲೀನ ಸಂದರ್ಭದ ಶೈಕ್ಷಣಿಕ ಬಿಕ್ಕಟ್ಟುಗಳನ್ನು ಸ್ಥಳೀಯತೆ ಮತ್ತು ನೈತಿಕತೆಗಳ ನೆಲೆಯಿಂದ ಪರಿಶೀಲಿಸುವ ಒಂದು ಮೌಲಿಕ ಕೃತಿಯಾಗಿದೆ. ಜಾಗತೀಕರಣದ ಪ್ರಭಾವದಲ್ಲಿ ಒಟ್ಟು ಸಮಾಜದಲ್ಲಿ ಎದುರಾಗುತ್ತಿರುವ ಆತಂಕಗಳನ್ನು ಅನಾವರಣಗೊಳಿಸುತ್ತಲೇ ನಮ್ಮ ನಡುವಿನ ಶಿಕ್ಷಣ ಹೇಗಿರಬೇಕೆಂಬ ಮೌಲ್ಯ ಬದ್ಧತೆಯನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಶಿಕ್ಷಣದ ತಾತ್ವಿಕ ನಿರೀಕ್ಷೆಗಳು ಮತ್ತು ಅನುಷ್ಠಾನದಲ್ಲಿರುವ ಕಂದಕವನ್ನು ಲೇಖಕರು ಕಳವಳದಿಂದ ಗಮನಿಸಿದ್ದಾರೆ. ವಿವೇಕಾನಂದರ ಶೈಕ್ಷಣಿಕ ಆಶಯಕ್ಕನುಗುಣವಾದ ಅಭಿಪ್ರಾಯಗಳನ್ನು ಪ್ರತಿಪಾದಿಸಿದ್ದಾರೆ. ಶಿಕ್ಷಣವೆಂದರೆ ಕೇವಲ ಮಾಹಿತಿಗಳನ್ನು ತುಂಬುವ ಉಗ್ರಾಣವಲ್ಲವೆಂಬ ಭಾವನೆಯಿಂದ ಪ್ರತಿಪಾದಿತವಾಗುವ ಅನೇಕ ಅಂಶಗಳನ್ನು ಸಾಧಾರ ಸಮೇತ ನಿರೂಪಿಸಿದ್ದಾರೆ. ಎಲ್ಲ ಬಗೆಯ ಅಸಮಾನತೆಗಳನ್ನೂ ಅಧರ್ಮ ಎಂದು ಕರೆಯುವ ಜಯದೇವ್ ಅವರು ಸಮಾನತೆಯನ್ನೇ ಧರ್ಮ ಎಂದು ನಂಬಿ ನುಡಿಯುತ್ತಾರೆ. ಈ ನೆಲೆಯಲ್ಲಿ ಶೈಕ್ಷಣಿಕ ವಲಯದ ಅಸಮಾನತೆಯನ್ನು ವಿರೋಧಿಸುತ್ತಾರೆ. ಎಲ್ಲ ಬಗೆಯ ಅಸಮಾನತೆಗಳು ಅಧರ್ಮ ಎಂಬ ಕಲ್ಪನೆಯೇ ನನಗೆ ವಿಶೇಷವಾಗಿ ಕಾಣುತ್ತದೆ. ಪ್ರೊ. ಜಿ.ಎಸ್.ಜಯದೇವ ಅವರು ತಮ್ಮ ವಿಚಾರಗಳ ಪ್ರತಿಪಾದನೆಗಾಗಿ ಇತಿಹಾಸ, ಪುರಾಣ ಮತ್ತು ಸಮಕಾಲೀನ ಸನ್ನಿವೇಶದ ಪ್ರಸಂಗಗಳನ್ನು ಬಳಸಿಕೊಂಡು ಸ್ಪಷ್ಟಪಡಿಸುವ, ಮನವರಿಕೆ ಮಾಡಿಕೊಡುವ ಪ್ರಯತ್ನವನ್ನು ಮಾಡುತ್ತಾರೆ. ಈ ಮೂಲಕ ತಮ್ಮ ವಿಚಾರಗಳಿಗೆ ವಿವಿಧ ಮೂಲಗಳಿಂದ ಪುಷ್ಟಿಪಡೆಯುತ್ತಾರೆ. ವಾದಕ್ಕಾಗಿವಾದ ಎಂದು ಎಲ್ಲೂ ಅನ್ನಿಸದಂತೆ ವಿಷಯ ನಿರೂಪಣೆ ಮಾಡುತ್ತಾರೆ. ನಿರುದ್ವಿಗ್ನ ಶೈಲಿಯ ಅಂತರ್ಗತ ಕರುಳ ಕಾಳಜಿಯಿಂದ ಓದುಗರ ಒಳಗೆ ಬರುತ್ತಾರೆ; ಚಿಂತನೆಗೆ ಹಚ್ಚುತ್ತಾರೆ.

ಶಿಕ್ಷಣದಲ್ಲಿ ನೈತಿಕ ನೆಲೆಯ ವ್ಯಕ್ತಿತ್ವ ವಿಕಾಸಕ್ಕೆ ಇವರು ಕೊಡುವ ಆದ್ಯತೆ ಮತ್ತು ನೈತಿಕತೆಯ ಪರಿಕಲ್ಪನೆಯ ಬಗ್ಗೆ ಚರ್ಚೆ ಮತ್ತು ಪ್ರತಿವಾದಗಳು ಸಾಧ್ಯ. ವ್ಯಕ್ತಿತ್ವ ವಿಕಾಸ ಮತ್ತು ನೈತಿಕತೆಯ ಕಲ್ಪನೆಗಳನ್ನು ಸಮಕಾಲೀನವೂ ಚಲನಶೀಲವೂ ಆದ ನೆಲೆ-ನಿಲುವುಗಳ ಮೂಲಕ ಪ್ರಸ್ತುತಗೊಳಿಸುವುದೂ ಮುಖ್ಯವೆಂದು ನಾನು ಭಾವಿಸುತ್ತೇನೆ.

ಒಟ್ಟಾರೆ ಹೇಳುವುದಾದರೆ ಕಳವಳ ಮತ್ತು ಕಳಕಳಿಗಳ ಮೂಲಕ ಶಿಕ್ಷಣ ಮತ್ತು ಸಮಾಜದ ಮೌಲ್ಯಬದ್ಧ ಸಂಬಂಧವನ್ನು ಪ್ರೊ. ಜಯದೇವ್ ಅವರು ಪ್ರಾಮಾಣಿಕವಾಗಿ ಕಟ್ಟಿಕೊಟ್ಟಿದ್ದಾರೆ.

## ಅ.ರಾ.ಮಿತ್ರ

ಶ್ರೀ ಜಿ.ಎಸ್.ಜಯದೇವ ಅವರ **'ಶಿಕ್ಷಣ ಮತ್ತು ಸಮಾಜ'** ಒಂದು ಅಪೂರ್ವ ಲೇಖನಗಳ ಗೊಂಚಲಾಗಿದ್ದು, ಆಳವಾದ ಅಂತಸ್ಸಂಬಂಧವನ್ನು ಹೊಂದಿದೆ. ಅಕಾಡೆಮಿಕ್ ಮಟ್ಟದ 'ಹಾರು ಚರ್ಚೆ' (Talking above the head) ಜೀವನಕ್ಕೆ ಆಪ್ತವಾಗಿರುವುದಿಲ್ಲ. ಪರಿಸರವಾದಿಗಳ ಕಾಳಜಿ ಮೆಚ್ಚಬಹುದಾದದ್ದಾದರೂ ಅವರು ನಿರಾಶಾದಾಯಕ ಭವಿಷ್ಯವನ್ನೇ ಮುಂದುಮಾಡಿ ಹೆದರಿಸುವಲ್ಲಿ ಯಶಸ್ವಿಯಾಗಿರುತ್ತಾರೆಯೇ ಹೊರತು ಇತ್ಯಾತ್ಮಕ ಬೆಳವಣಿಗೆಯ ದಿಕ್ಕನ್ನು ತೋರುವುದಿಲ್ಲ. ಮೂರನೆಯ ವರ್ಗ ಭಾವನಾತ್ಮಕ ವಾಚಾಳತ್ವದ ನಿರುಪದ್ರವಿ ಮಾರ್ಗ. ಈ ಮೂರು ಮಾರ್ಗಗಳನ್ನು ಕೈಬಿಟ್ಟು ಜಯದೇವ್ ನೈಜ ಸಮಾಜ ವಿಜ್ಞಾನಿಯಾಗಲು, ಶಿಕ್ಷಣ ವಿಜ್ಞಾನಿಯಾಗಲು ಪ್ರಯತ್ನಿಸಿದ್ದಾರೆ. ಈ ದೃಷ್ಟಿಕೋನದಿಂದಾಗಿ ಅವರಿಗೆ ಸಾಮಾಜಿಕ–ಶೈಕ್ಷಣಿಕ ಹಲಗೆಗಳ ಕೆಟಮರಾನ್ (ಜೋಡಿದೋಣಿ) ಮೇಲೆ ಜೀವನದ ಜೀವನ (=ನೀರು) ವನ್ನು ದಾಟಲು ಸಾಧ್ಯವಾಗಿದೆ.

ಎರಡನೆಯದಾಗಿ ಇದು ಹೊಸರೀತಿಯ ಬರವಣಿಗೆ. ಆಧುನಿಕ ಎಂದು ನಾವು ಕೊಚ್ಚಿಕೊಳ್ಳುವ ಎಲ್ಲಾ ಪ್ರಗತಿಯ ಮುಖವಾಡವನ್ನು ತೆಗೆದುಹಾಕಿ ತಿರುಳಿನ ಭಾಗವನ್ನು ತೀವ್ರ ಪರಿಶೀಲನೆಗೆ ಬಳಸಿಕೊಳ್ಳುವ ಒಂದು ಮುಕ್ತದೃಷ್ಟಿ ಇಲ್ಲಿ ಕೆಲಸ ಮಾಡಿದೆ. ಸೃಜನಶೀಲತೆಗಿಂತ ಇಲ್ಲಿ ವಸ್ತುಶೀಲತೆ ಮುಖ್ಯವಾಗಿದೆ. ಆಧುನಿಕ ಚಿಂತನದ ಪೊಳ್ಳುಗಳನ್ನು ತೋರಿಸುವುದಕ್ಕಿಂತ ಆರ್ಷ ಚಿಂತನೆಗಳ ಮಹತ್ವವನ್ನು ಕುರಿತು ಬೊಬ್ಬೆ ಹೊಡೆಯುವುದಕ್ಕಿಂತ ವಾಸ್ತವ ಸ್ಥಿತಿಗಳ ವಿಷಯನಿಷ್ಠ ಅನುಶೀಲನೆ ಲೇಖಕನ ದಾರಿಯಾಗಿದೆ. ಈ ದಾರಿ ಹಿಡಿದಿರುವುದರಿಂದ ಯಾವ ಬಹಿರಾವರಣದ ಮೊಗವಾಡವೂ ಇಲ್ಲದೆ ನೇರವಾಗಿ ಸಮಸ್ಯೆಯ ಅಂತರ್ಜಲವನ್ನು ಮೊಗೆಯುವುದು ಸಾಧ್ಯವಾಗಿದೆ.

ದೀನಬಂಧು ಟ್ರಸ್ಟ್‌ಗೆ ಬಂದಿದ್ದ ಯೋಕ್ ಎಂಬ ನೆದರ್‌ಲ್ಯಾಂಡಿನ ಮಹಿಳೆ ಪಠ್ಯಪುಸ್ತಕ ಜ್ಞಾನ ಪ್ರಸಾರವನ್ನು 'This is too much of spoon feeding' ಎಂದು ಹೇಳಿದ ಮಾತನ್ನು ಮೆಚ್ಚಿ ಲೇಖಕರು ಹಿಂದುಳಿದ ಮಕ್ಕಳಿಗೆ ತೇಜೋವಧೆಯಾಗದಂತೆ ನಮ್ಮ ಪಠ್ಯಕ್ರಮವನ್ನು ಹೇಗೆ ಎತ್ತಿಕೊಳ್ಳಬೇಕು ಎಂಬ ಸವಾಲನ್ನು ಎತ್ತಿಕೊಂಡಿದ್ದಾರೆ.

ಮಾತೃಭಾಷಾ ಶಿಕ್ಷಣವನ್ನು ಕೂಡ ಇವರು ಕೇವಲ ಭಾಷಾ ಮಾಧ್ಯಮದ ಹಿನ್ನಲೆಯಲ್ಲಿ ನೋಡಿ ಗ್ರಹಿಕೆಯ ಮೂಲಭೂತ ಅಂಶಗಳನ್ನು ಚರ್ಚಿಸಿರುವುದು ಮಹತ್ವದ ಸಂಗತಿಯಾಗಿದೆ. ಪಟ್ಟಭದ್ರ, ಢೋಂಗೀ, ವಿಲಾಸೀ ಪ್ರವೃತ್ತಿಗಳು ನಮ್ಮನ್ನು ಹೇಗೆ ವಂಚಿಸುತ್ತಿವೆ ಎಂಬ ಬಗೆಗೆ ಇಲ್ಲಿ ವಿಫುಲ ಸಾಕ್ಷ್ಯಾಧಾರ ಸಹಿತವಾದ ವಿಮರ್ಶೆಯಿದೆ.

ಶಿಕ್ಷಣದ ವ್ಯಾಪಾರೀಕರಣದ ಮೌಲ್ಯಘಾತಕ ಪ್ರಯತ್ನಗಳ ಹಿಂದಿರುವ ಅಪಾಯಕಾರಿ ವ್ಯಕ್ತಿ ಸಂಸ್ಥೆಗಳ ನಯವಂಚನಾ ಪದ್ಧತಿಗಳನ್ನು ಜಯದೇವ್ ಎಳೆಎಳೆಯಾಗಿ ಬಿಡಿಸಿ ಸಮಾಜದ ದೇಹದಲ್ಲಿ ಅದು ಮಾಡಿರುವ 'ವ್ರಣ' ವೇನು ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಒಟ್ಟಿನಲ್ಲಿ ಲೇಖಕರು ಆಕ್ರೋಶದ ಪರಿಭಾಷೆಯನ್ನು ಬಳಸದೆ ನೋವಿನಿಂದಲೇ ವಿವರಿಸಿರುವುದು ಅವರ ಅಂತಃಕರಣದ ಆರ್ದ್ರತೆಯನ್ನು ಸೂಚಿಸುವ ಧ್ವನಿಗಾರಿಕೆಯಾಗಿದೆ. ಶಿಕ್ಷಣಕ್ಷೇತ್ರದ ಅನೈತಿಕತೆಯನ್ನು ಲೇಖಕರು ಬಟಾಬಯಲು ಮಾಡಿದ್ದಾರೆ.

ಜಯದೇವ್, ಸರಳ ಜೀವನದ ಉನ್ನತ ಬುದ್ಧಿಮಟ್ಟದ ವ್ಯಕ್ತಿತ್ವದ ಪ್ರತಿಪಾದಕರಾಗಿದ್ದು, ಆರೋಗ್ಯಕರ ಬೆಳವಣಿಗೆಯಿಂದ ನಮ್ಮ ಮನಸ್ಸನ್ನು ಸೆಳೆಯುತ್ತಾರೆ. ಕಾವ್ಯ, ವಚನ, ಕಥೆ, ಪುರಾಣ, ಇಂಗ್ಲಿಷ್ ಬರಹಗಳ ಪದ್ಧತಿ ಇವರ ವಿಚಾರವಂತಿಕೆಯ ಬೇರುಗಳನ್ನು ಬಲಪಡಿಸಿವೆ. ಕಾರ್ಪೊರೇಟ್ ಜನಾಂಗದ ಚಿಂತನೆಗಳನ್ನು ಸಾರ್ವತ್ರಿಕಗೊಳಿಸಲು ಹೋದರೆ ಆಗುವ ಅಪಾಯಗಳ ಬಗೆಗೆ ಜಯದೇವ್ ಹುರುಪಿನ ಸಂವಾದ ನಡೆಸಿರುವುದು ಗಮನಿಸಬೇಕಾದ ಅಂಶವಾಗಿದೆ.

ಹಳೆಯ ವಿಚಾರಗಳು ಹೊಸ ಅನುಭೂತಿಗಳು ಇವೆರಡರ ಬಗೆಗೂ ಸಮಾನವಾದ ತಿರಸ್ಕಾರ ಮೆಚ್ಚುಗೆಗಳನ್ನು ತೋರುವ ಇವರ ಹೃದಯನಿಷ್ಠೆ ಈ ಬರಹಗಳಲ್ಲಿ ಬಿಂಬಿತವಾಗಿದೆ. ಅವರ ಗುಣಾತ್ಮಕ ಶಿಕ್ಷಣ ಎಂಬ ಬರಹ ಒಂದು ಪ್ರಯೋಗನಿಷ್ಠ ಬರಹವಾಗಿದ್ದು ಮೌಲಿಕ ಚಿಂತನೆಯತ್ತ ಬೊಟ್ಟು ಮಾಡುವ ಅರ್ಹತೆ ಪಡೆದಿದೆ.

**ಡಾ. ಗುರುರಾಜ ಕರಜಗಿ**

ಮಕ್ಕಳು ತಮ್ಮ ಜೀವನವನ್ನು ಸುಭದ್ರವಾಗಿ ಕಟ್ಟಿಕೊಳ್ಳಲು ಅನುವಾಗುವಂತೆ ಮಾಡುವ ವ್ಯವಸ್ಥೆಯಾಗಿ ಹುಟ್ಟಿದ್ದು ಶಿಕ್ಷಣ. ಈ ಮಕ್ಕಳ ವಿಸ್ತರಿತ ಜ್ಞಾನದ ಅಳವಡಿಕೆಗೆ ಕಾಲೇಜು, ವಿಶ್ವವಿದ್ಯಾಲಯಗಳು, ಈ ವಿಶ್ವವಿದ್ಯಾಲಯಗಳ ನಿರ್ವಹಣೆಗೆ ಕುಲಪತಿಗಳು, ಶಿಕ್ಷಣ ಇಲಾಖೆ, ಈ ಇಲಾಖೆಯನ್ನು ಸರಿಯಾಗಿ ನಡೆಸಲು ರಾಜ್ಯದಲ್ಲಿ ಹಾಗೂ ದೇಶದಲ್ಲಿ ಮಂತ್ರಿಗಳು. ಹೀಗೆ ವ್ಯವಸ್ಥೆ ಬಹುದೊಡ್ಡದಾಗಿ ಬೆಳೆದು ನಿಂತಿದೆ. ಆದರೆ ದುರ್ದೈವದಿಂದ ಯಾರಿಗಾಗಿ ಈ ವ್ಯವಸ್ಥೆ ಬಂದಿತೋ ಆ ಮಕ್ಕಳ ನಿಜವಾದ ಅವಶ್ಯಕತೆ ಮರೆತು ಹೋಗಿದೆ. ಮೂಗುತಿಯ ಸೌಂದರ್ಯಕ್ಕೆ ಬೆರಗಾಗಿ ಮೂಗು ಕೊಯ್ದುಕೊಂಡಿದ್ದೇವೆ.

ಬದುಕನ್ನು ಕಲಿಸುವ ವಿಧಾನವಾಗಿರಬೇಕಾಗಿದ್ದ ಶಿಕ್ಷಣ ಇಂದು ನೌಕರಿ ಎಂಬ ಕಾರ್ಖಾನೆಗೆ ಮೂಲಸಾಮಗ್ರಿ ಒದಗಿಸುವ ಉಪಕರಣವಾಗಿದೆ. ಜ್ಞಾನಕ್ಕಿಂತ ಅರ್ಹತಾ ಪತ್ರ ದೊಡ್ಡದಾಗಿದೆ. ಕಣ್ಣು ಕೋರೈಸುವಂತೆ ಅಲಂಕೃತವಾದ ಬಹುದೊಡ್ಡ ಆಟದ

ಸಾಮಾನುಗಳ ಅಂಗಡಿಯಲ್ಲಿ ಸೇರಿದ ಮಗು ತಬ್ಬಿಬ್ಬಾಗಿ ಯಾವುದನ್ನು ಆರಿಸಿಕೊಳ್ಳಬೇಕೆಂಬುದು ತಿಳಿಯದೇ ಕೊನೆಗೆ ತನಗೆ ಒಳ್ಳೆಯದಾದದ್ದನ್ನು ಮರೆತು ಆಕರ್ಷಕವಾದದ್ದನ್ನು ತೆಗೆದುಕೊಂಡು ಬರುವಂತಾಗಿದೆ ನಮ್ಮ ಮಕ್ಕಳ, ಪಾಲಕರ ಸ್ಥಿತಿ. ಜಗತ್ತಿನ ರಾಶಿರಾಶಿ ವಿಷಯಗಳನ್ನು ಇಡಿಇಡಿಯಾಗಿ ತಲೆಯಲ್ಲಿ ತುರುಕಿಕೊಂಡು ಅದನ್ನು ಅರಗಿಸದೇ ಕಕ್ಕಿಕೊಳ್ಳುವ ಮಹದುತ್ಸಾಹದಲ್ಲಿ ನಮ್ಮ ಕಾಲಡಿಯಲ್ಲೇ ಜಿನುಗುವ ಸಂಸ್ಕೃತಿಯ ಸೆಲೆ ಕಾಣದಾಗಿದೆ.

ನಾವು ದಾರಿ ತಪ್ಪಿದ್ದೆಲ್ಲಿ? ಯಾಕೆ? ಇದಕ್ಕೇನಾದರೂ ಪರಿಹಾರವಿದೆಯೇ? ಇದ್ದರೆ ಅದು ಎಂತಹದು? ಈ ಪ್ರಶ್ನೆಗಳು ನಮ್ಮನ್ನು ಸದಾ ಕಾಲ ಕಾಡಿವೆ. ಈ ಪ್ರಶ್ನೆಗಳು ಮೂಲಭೂತವಾಗಿ ನಮ್ಮ ಪ್ರಜ್ಞೆಯನ್ನು ಕೆಣಕುತ್ತವೆ, ಪರಿಹಾರದ ಕಡೆಗೆ ಮುಖ ಮಾಡಿ ನಿಲ್ಲಿಸುತ್ತವೆ. ಒಂದು ಅತ್ಯಂತ ಸಂವೇದನಾಶೀಲವಾದ ಮನಸ್ಸು, ಸದಾ ಸಮಾಜದ ಒಳ್ಳೆಯದಕ್ಕೇ ಮನಸ್ಸನ್ನು ಪ್ರಚೋದಿಸುವ ಬುದ್ಧಿ, ಆ ಬುದ್ಧಿಯನ್ನು ತನ್ನ ವಿಶಾಲವಾದ ಓದು ಹಾಗೂ ಅನುಭವಗಳಿಂದ ಪಕ್ವಗೊಳಿಸಿಕೊಂಡಿರುವ ವಿಶಿಷ್ಠ ಚೇತನದ ತುಡಿತಗಳ ಫಲ ಈ ಕೃತಿ "ಶಿಕ್ಷಣ ಮತ್ತು ಸಮಾಜ". ಮಾತನಾಡುವಂತೆಯೇ ಬದುಕುವ ಅಪರೂಪದ ವ್ಯಕ್ತಿಗಳ ಸಾಲಿಗೆ ಸೇರುವ ಆತ್ಮೀಯರಾದ ಪ್ರೊ. ಜಿ.ಎಸ್ ಜಯದೇವರವರ ಚಿಂತನೆಗಳ ಸಾಕಾರರೂಪ ಈ ಪುಸ್ತಕ. ಇದು ಶಿಕ್ಷಣದ ಕ್ಷೇತ್ರದಲ್ಲಿರುವವರನ್ನೆಲ್ಲ ಗಾಢವಾಗಿ ತಟ್ಟುವ ಮತ್ತು ತಟ್ಟಲೇಬೇಕಾದ ಗ್ರಂಥ. ನಾವು ಮಕ್ಕಳಿಗೆ ಏನೋ ಅದ್ಭುತವಾದದ್ದನ್ನು ನೀಡುತ್ತಿದ್ದೇವೆ ಎಂಬ ಭ್ರಮೆಯಲ್ಲಿರುವ ಎಲ್ಲ ಶಿಕ್ಷಣ ತಜ್ಞರೂ ಮತ್ತೊಮ್ಮೆ ಸರಿಯಾಗಿ ಕುಳಿತು ಚಿಂತಿಸುವಂತೆ ಮಾಡುತ್ತದೆ.

ಶಿಕ್ಷಣದಲ್ಲಿ ಬದಲಾವಣೆ ಎಂಬ ನೆಪದಲ್ಲಿ, ಅಲ್ಲಿ ತಟ್ಟಿ, ಇಲ್ಲಿ ಕುಟ್ಟಿ, ಸ್ವಲ್ಪ ತಿದ್ದಿ ಸಂತೋಷಪಡುವ ಬದಲು ನಮ್ಮ ಚಿಂತನೆಯ ಮೂಲವನ್ನೇ ಬದಲಿಸಿಕೊಳ್ಳುವುದು ಅಗತ್ಯ.

ನಾನು ಜಪಾನಿನಲ್ಲಿ ಕೆಲವು ಹಿರಿಯ ಶಿಕ್ಷಣ ತಜ್ಞರನ್ನು ಕಂಡಾಗ ಅವರು ಹೇಳಿದ ವಿಷಯ ನನ್ನನ್ನು ಬೆರಗಾಗಿಸಿತು. ಅಲ್ಲಿಯ ಹಿರಿಯರಿಗಿನ್ನೂ ಕೋಪ, ತಾಪ ಸಾಕಷ್ಟಿದೆ, ಬೇಗ ಸಿಟ್ಟೂ ಬರುತ್ತದೆ. ಆದರೆ ತರುಣರಿಗೆ ಕೋಪ ಬರುವುದಿಲ್ಲ, ಅವರು ಸುಲಭವಾಗಿ ತಾಳ್ಮೆ ಕಳೆದುಕೊಳ್ಳಲಾರರು, ಹಿಂಸೆಗೆ ಇಳಿಯಲಾರರು. ಇದು ಹೇಗೆ ಸಾಧ್ಯವಾಯಿತು ಎಂದು ಕೇಳಿದಾಗ ಒಬ್ಬ ಶಿಕ್ಷಣ ತಜ್ಞ ಹೇಳಿದರು, "We make our youngsters incapable of violence. Anyone born after 1948 cannot get violent easily" ನಾನು ಕೇಳಿದೆ, 1948 ರ ವಿಶೇಷ ಏನು? ನಮ್ಮಲ್ಲಿಯೂ 1948 ಇತ್ತಲ್ಲ, ಆದರೆ ನಮ್ಮ ತರುಣರಿಗೆ ಸಿಟ್ಟು ಬರುತ್ತದೆ. ಹಿಂಸೆ ಸುಲಭವಾಗುತ್ತದೆ. ಯಾಕೆ?" ಅವರು ಹೇಳಿದರು, "1948 ರಲ್ಲಿ ಏನೂ ಆಗಲಿಲ್ಲ. ಎಲ್ಲ ಆದದ್ದು 1945 ರಲ್ಲಿ. ಆಗಸ್ಟ

6 ಮತ್ತು ಆಗಸ್ಟ 9 ರಂದು ಹಿರೋಶಿಮಾ ಮತ್ತು ನಾಗಾಸಾಕಿ ನಗರಗಳ ಮೇಲೆ ಬಿದ್ದ ಅಣುಬಾಂಬು ಸ್ಫೋಟದಲ್ಲಿ ಲಕ್ಷಾಂತರ ಜನ ಹುಳಗಳಂತೆ ಸತ್ತು ಹೋದರು. ಆ ನಂತರ ನಮ್ಮ ದೇಶದ ಶಿಕ್ಷಣ ತಜ್ಞರೆಲ್ಲ ಸೇರಿ ಚಿಂತಿಸಿ, ಹಿಂಸೆಯಿಂದ ಯಾವುದೂ ಸಾಧ್ಯವಿಲ್ಲ, ಅಹಿಂಸೆಯನ್ನು ಜೀವನದ ಅವಿಭಾಜ್ಯ ಅಂಗವನ್ನಾಗಿ ಮಾಡಬೇಕೆಂದು ತೀರ್ಮಾನಿಸಿ, ಯೋಜನೆ ಮಾಡಿ ಅದನ್ನು 1948 ರಿಂದ ಶಿಕ್ಷಣದಲ್ಲಿ ಕಾರ್ಯಗತ ಮಾಡಿದ್ದೇವೆ. ಅದರ ಫಲ ಇಂದಿನ ಜಪಾನಿನ ಅಹಿಂಸಾ ಜೀವನ ವಿಧಾನ".

ಅಹಿಂಸೆ ಒಂದು ಜೀವನದ ಮೌಲ್ಯ. ಅಂಥ ಮೌಲ್ಯವನ್ನು ಶಿಕ್ಷಣದಲ್ಲಿ ಎಂದೂ ಬೇರ್ಪಡಿಸದಂತೆ ತಳಕುಹಾಕಲಾಗಿದೆ. ಇದು ಶಿಕ್ಷಣ ಮಾಡಬೇಕಾದ ಕೆಲಸ. ನಾವು ನಮಗೆ ಬೇಕಾದ ಮೌಲ್ಯಗಳನ್ನು, ಸಂಸ್ಕೃತಿಯನ್ನು, ದೇಶಪ್ರೇಮವನ್ನು, ಸಮಾಜದ ಪ್ರೀತಿಯನ್ನು, ಬದುಕುವ ರೀತಿಯನ್ನು ನೀಡುವ ಯೋಜನೆಯನ್ನು ಮಾಡಲು ನಮ್ಮ ತಲೆಯ ಮೇಲೂ ಬಾಂಬ್ ಬೀಳಬೇಕೋ ಏನೋ?

ಪ್ರೊ. ಜಯದೇವರವರ ಬರವಣಿಗೆಯ ಧಾಟಿ ಮಿತ್ರ ಸಂಮಿತ ಮತ್ತು ಕಾಂತಾಸಂಮಿತದ ಬಗೆ. ಸ್ನೇಹಿತನಂತೆ ತಿಳಿಸುತ್ತ, ಪ್ರೀತಿಯ ಸತಿಯಂತೆ ಒಲಿಸುತ್ತ ತಮ್ಮ ಚಿಂತನೆಗಳನ್ನು ನಮಗೆ ಉಣಬಡಿಸುವ ರೀತಿ ಅನನ್ಯವಾದದ್ದು. ಎಲ್ಲಿಯೂ ಕಟುತೆಯಿಲ್ಲ. ಇದು ಅವರ ಸ್ವಭಾವವೂ ಹೌದು.

ಅವರ ಬರಹ ನಮ್ಮೆಲ್ಲರ ಚಿಂತನಾ ಧಾರೆಗಳನ್ನು ಒರೆಗೆ ಹಚ್ಚಿ, ಬದಲಾವಣೆಗೆ ಪ್ರೇರೇಪಿಸಿದರೆ ಅವರ ಶ್ರಮ ಸಾರ್ಥಕ. ಹಾಗಾಗುತ್ತದೆ ಎಂದು ನಾನು ನಂಬಿದ್ದೇನೆ.

**ಎಸ್.ಆರ್.ವಿಜಯಶಂಕರ**

ಪ್ರೊ. ಜಿ.ಎಸ್.ಜಯದೇವ ಅವರ 'ಶಿಕ್ಷಣ ಮತ್ತು ಸಮಾಜ' ಕೃತಿ ಓದಿದಾಗ ಸ್ವಂತ ವ್ಯಕ್ತಿತ್ವವನ್ನು ರೂಪಿಸಬೇಕಾದ ನಮ್ಮ ಶಿಕ್ಷಣ ಇಂದು ಹೇಗೆ ಅನುಕರಣೆಯಲ್ಲಿ ಅಂತ್ಯವಾಗುವ ಸ್ವಯಂ ನಿರ್ಮಿತಿಯನ್ನು ಪೋಷಿಸುತ್ತಿದೆ ಎಂಬುದು ಮೊದಲಿಗೆ ಗೋಚರಿಸಿದ ವಾಸ್ತವ ಸತ್ಯ. ಅನುಕರಣೆ ಎಂಬುದು ಶಿಕ್ಷಣದ ಪ್ರಾರಂಭದ ಹಂತ. ಆದರೆ ಅದುವೇ ಅಂತ್ಯವಾಗಬಾರದು. ಸಮಾಜಕ್ಕೊಂದು ಸಾವಯವ ಸಂದರ್ಭ ಉಂಟಾಗಬೇಕಾದರೆ ಅಲ್ಲಿನ ಪರಿಸರಕ್ಕೆ ಅನುಕೂಲವಾದ ಶಿಕ್ಷಣದ ಸ್ವಯಂ ನಿರ್ಮಿತಿ ಆಗಬೇಕು. ಪ್ರೊ. ಜಯದೇವ ಅಂತಹ ಅನೇಕ ಸಾಧ್ಯತೆಗಳನ್ನು ಶೈಕ್ಷಣಿಕ ಕಾರ್ಯಗಳ ಮೂಲಕ ತೋರಿಸಿಕೊಡುವ ಪ್ರಯತ್ನದಲ್ಲಿದ್ದಾರೆ.

ಇಂತಹ ಸ್ವಾವಲಂಬಿ ಪ್ರಯತ್ನಗಳು ಪ್ರೊ. ಜಯದೇವರ ಸಂದರ್ಭದಲ್ಲಿ ಕೇವಲ ಪ್ರಾತ್ಯಕ್ಷಿಕವಾದ ಪೈಲೆಟ್ ಪ್ರೊಜೆಕ್ಟ್‌ಗಳಲ್ಲ (Pilot Projects). ಅವರಿಗೆ ಅವುಗಳೆಲ್ಲಾ

ತಮ್ಮ ಸುತ್ತಲಿನ ಸಮಾಜದ ಜೀವನ ವಿಧಾನಗಳಾಗಬಲ್ಲ ಸಾಧ್ಯತೆಗಳು. ಅವು ಒಂದು ಆದರ್ಶವೆ ಎಂದರೆ ಪ್ರೊ. ಜಯದೇವರ ಪ್ರತಿಪಾದನೆಯಲ್ಲಿ ಅವುಗಳು ಖಂಡಿತಾ ಆದರ್ಶಗಳಲ್ಲ. ಅವರು ಅದನ್ನು ಸಾಮಾಜಿಕ ಅಗತ್ಯ ಎಂದಾರು. ಎನ್.ಜಿ.ಒ.ಗಳ ಸ್ಥಾಪನೆಗಳು ಉದ್ಯೋಗ ಸಾಧ್ಯತೆಗಳಾಗಿ ಪರಿವರ್ತಿತವಾಗುತ್ತಿರುವ ಇಂದಿನ ದಿನಮಾನದಲ್ಲಿ ಪ್ರೊ. ಜಯದೇವ ಶಿಕ್ಷಣದ ಬಗೆಗಿನ ತಮ್ಮ ನಂಬಿಕೆಗಳನ್ನು ಬದುಕಿನ ಅನುಷ್ಠಾನ ವ್ರತವಾಗಿಸಲು ಹೊರಟಿರುವವರು. ಆದುದರಿಂದ ಇಲ್ಲಿನ ಬರಹಗಳು ಒಂದು ತಾತ್ವಿಕತೆಯ ಆಧಾರದಿಂದ ಸೃಷ್ಟಿಯಾಗದೆ ಅನುಭವಗಳ ಆಧಾರದಿಂದ ತಾತ್ವಿಕತೆಯನ್ನು ತೋರಿಸಿಕೊಡುತ್ತವೆ.

ಸಹಜವಾದದ್ದು ಶ್ರೇಷ್ಠ ಎಂಬುದು ಅವರು ಕಂಡುಕೊಂಡ ತಾತ್ವಿಕತೆಗಳಲ್ಲಿ ಒಂದು. 'ಸಹಜವಾಗಿ ಬದುಕು ಇಲ್ಲವೇ ಸತ್ತು ಹೋಗು' ಎಂಬಷ್ಟು ಸ್ವಾಭಾವಿಕವಾಗಿದೆ ಆ ನಂಬುಗೆ. ಇಂದಿನ ಜಾಗತೀಕರಣದ ಸಂದರ್ಭದಲ್ಲಿ ನಮ್ಮ ಬದುಕು ಹಾಗೂ ಶಿಕ್ಷಣಗಳೆರಡೂ ಅಸಹಜವಾದ್ದನ್ನು ಅಪ್ಪಿಕೊಂಡು ಬದುಕಿನ ಸಾವಯವ ಸಾಮರಸ್ಯವನ್ನು ಹಾಳುಗೆಡಹುವುದು ಅವರ ಆತಂಕಕ್ಕೆ ಕಾರಣವಾಗಿದೆ. ಕೊನೆಗೂ ಶಿಕ್ಷಣ ಸಾಧಿಸಿಕೊಡಬೇಕಾದ್ದು ವ್ಯಕ್ತಿಯೊಬ್ಬನಿಗೆ ತಾನು ತಾನಾಗಿಯೇ ಉಳಿವ ಎಚ್ಚರವನ್ನು. ಅವರ ಈ ತತ್ವ ಪುರಾತನ ಭಾರತೀಯ ಹಾಗೂ ಸಮಕಾಲೀನ ಆಧುನಿಕ ತತ್ವಗಳೆರಡನ್ನೂ ಒಟ್ಟಿಗೆ ತಂದು ಅವೆರಡರ ಶಕ್ತಿಗಳನ್ನು ಸಮಾನವಾಗಿ ಶಿಕ್ಷಣದಲ್ಲಿ ಬಳಸಲು ಮಾಡುವ ಪ್ರಯತ್ನವಾಗಿವೆ.

ಪ್ರೊ. ಜಯದೇವ ಅವರ ಶೈಕ್ಷಣಿಕ ವಿಚಾರಗಳು ಕೇವಲ ಪ್ರಾಥಮಿಕ ಶಿಕ್ಷಣದ ಮಟ್ಟಕ್ಕೆ ಮಾತ್ರ ಸೀಮಿತವಾಗಿಲ್ಲ. ಅದು ಉನ್ನತ ಶಿಕ್ಷಣಗಳ ಕುರಿತಾದ ಚಿಂತನೆಗಳನ್ನು ಒಳಗೊಂಡಿದೆ. ವಿಶ್ವವಿದ್ಯಾನಿಲಯಗಳ ಕುರಿತಾಗಿ ಅವರು ಚಿಂತಿಸುವಾಗ ತಾತ್ವಿಕ ದೃಢ ನಿಲುವುಗಳ ಅಗತ್ಯಗಳನ್ನು ಅವರು ಚರ್ಚಿಸುತ್ತಾರೆ. ಈ ಹಿನ್ನಲೆಯಲ್ಲಿ ತತ್ವ ಹಾಗೂ ಅನುಷ್ಠಾನಗಳ ನಡುವಿನ ಕಂದರ ಅವರನ್ನು ಆಳವಾಗಿ ಕಾಡಿದೆ.

ಪ್ರೊ. ಜಯದೇವ ಸಮಾನತೆ ಎಂಬ ತತ್ವದಲ್ಲಿ ಸಂಪೂರ್ಣ ನಂಬಿಕೆ ಉಳ್ಳವರು. ಗಂಡು, ಹೆಣ್ಣು; ಶ್ರೀಮಂತ, ಬಡವ; ಮೇಲ್ಜಾತಿ, ಕೆಳಜಾತಿ; ಹಿಂದೂ ಧರ್ಮ ಮತ್ತು ಇತರ ಧರ್ಮಗಳು; ಹಳ್ಳಿ, ಪಟ್ಟಣ ಈ ರೀತಿ ಯಾವ ರೀತಿಯ ಭೇದವೂ ಮನುಷ್ಯನ ಶೈಕ್ಷಣಿಕ ಬೆಳವಣಿಗೆಗೆ ತಡೆಗೋಡೆಗಳನ್ನು ಉಂಟು ಮಾಡಬಾರದು. ಶಿಕ್ಷಣ ಒಂದು ರೀತಿಯಲ್ಲಿ ಸಮಾನತೆಯ ಹೊಸತತ್ವವನ್ನು ಪೋಷಿಸುವ ಸಾಧನ. ಕಲಿಕೆಗೆ ಅನುಕೂಲವಾಗುವ ಸಹಜ ವಿಧಾನಗಳನ್ನು ಬೆಳೆಸುತ್ತಾ ಶಿಕ್ಷಣವನ್ನು ಪ್ರತಿಯೊಬ್ಬರಿಗೆ ಸಾಧ್ಯ ಮಾಡಬೇಕು ಎಂಬ ಕನಸು ಅವರದ್ದು.

ಈ ಹಿನ್ನಲೆಯಲ್ಲಿ ಸಹಜ ಕಲಿಕೆ ಎಂದರೆ ಅವರಿಗೆ ವಿವೇಕ, ಮಾಹಿತಿ ಎಂಬುದು ವಿವೇಕಕ್ಕೆ ಪೂರಕವೇ ಹೊರತು ಮಾಹಿತಿಯೆ ಆರ್ಜನೆಯ ಅಂತ್ಯವಲ್ಲ. ಆದುದರಿಂದ

ಪ್ರೊ. ಜಯದೇವ ಅವರಿಗೆ ಕವಿ ಟಿ.ಎಸ್.ಎಲಿಯಟ್ ಕೇಳಿದ ಪ್ರಶ್ನೆ Where is the knowledge we lost in information ಎಂಬುದು ಮುಖ್ಯವಾಗುತ್ತದೆ.

ಮಾಹಿತಿ ತಂತ್ರಜ್ಞಾನ ಬೆಳೆಯುತ್ತಾ ಹೋದಂತೆ ಮಾಹಿತಿಯ ಗಳಿಕೆ ಹಾಗೂ ಮಂಡನೆಗಳೇ ಮಹತ್ತರ ಸಾಧನೆಗಳು ಎಂಬಂತೆ ಭಾಸವಾಗುವ ವಾತಾವರಣ ಹೆಚ್ಚಾಗುತ್ತಿದೆ. ಇಂದು ಪ್ಲಾನಿಂಗ್ ಅಂದರೆ ಯೋಜನೆಗಳ ನಿರ್ಣಯಗಳಲ್ಲಿ ಕೂಡಾ 'ಡಾಟಾ' (Data) ಎಂಬ ಮಾಹಿತಿ ಸಂಗ್ರಹ ನಿರ್ಣಾಯಕ ಅಂಶಗಳಾಗಿವೆ. ನಿರ್ಣಯದ ಹಿಂದೆ ಕೆಲಸ ಮಾಡಬೇಕಾದ ವಿವೇಕಕ್ಕಿಂತಲೂ ಹೆಚ್ಚು ನಿರ್ಣಯಿಸಲು ಬೇಕಾದ ಮಾಹಿತಿ ಸಂಗ್ರಹವೇ ಮುಖ್ಯ ಎನ್ನುವ ಅಭಿಪ್ರಾಯ ಬೆಳೆಯುತ್ತಿದೆ. ಪ್ರೊ. ಜಯದೇವ ವಿವರವಾಗಿ ಶಿಕ್ಷಣ ಬೆಳೆಸಬೇಕಾದ ವಿವೇಕದ ಅಗತ್ಯವನ್ನು ತೋರಿಸಿಕೊಡುತ್ತಾರೆ.

ಸರಕು ಸಂಸ್ಕೃತಿಯ ಪರಿಣಾಮ ಇಂದು ಮನುಷ್ಯನಿಗಿಂತ ವಸ್ತುಗಳೇ ಮುಖ್ಯವೇನೋ ಎಂಬ ಭ್ರಾಂತಿಯನ್ನು ಉಂಟು ಮಾಡುತ್ತಿವೆ. ವಸ್ತುಗಳ ಅಥವಾ ಸೇವೆಗಳ ಮಾರಾಟ ಇಂದಿನ ವ್ಯಾಪಾರದ ಮೂಲಮಂತ್ರವಾಗಿದೆ. ಹೀಗಿರುವಾಗ ವಸ್ತು ಮೋಹ ಬೆಳೆಯುವ ವಾತಾವರಣ ಸಹಜವೇ ಆಗಿದೆ. ಇಂತಹ ಸಾಮಾಜಿಕ ಸಂದರ್ಭದಲ್ಲಿ ವಸ್ತುಗಳಿಗಿಂತ ಯಾಕೆ ಮನುಷ್ಯನೇ ಮುಖ್ಯ ಎಂಬ ತಿಳುವಳಿಕೆಯನ್ನು ಇಂದಿನ ಶಿಕ್ಷಣ ಹೇಗೆ ಮೂಡಿಸಬೇಕು ಎಂಬ ಚಿಂತನೆಯನ್ನು ಪ್ರೊ. ಜಯದೇವ ಸವಿವರವಾಗಿ ನೀಡುತ್ತಾರೆ.

ಪರಿಸರ ಹಾಗೂ ಶೈಕ್ಷಣಿಕ ಸಂಬಂಧಗಳು ಇಲ್ಲಿನ ಚರ್ಚೆಯ ಇನ್ನೊಂದು ಅಂಶ. ಅದೇ ರೀತಿ ಯಂತ್ರ ನಾಗರೀಕತೆ ಮನುಷ್ಯನ ಅಂತಃಸತ್ವವನ್ನು ಕುಂಟಿಸಲು ಕಾರಣವಾಗಬಹುದು. ಮೂಲಭೂತ ಕಲಿಕೆಯ ಸಾಮರ್ಥ್ಯಕ್ಕೆ ಕಂಪ್ಯೂಟರ್ ಮತ್ತಿತರ ಎಲ್ಲಾ ಯಂತ್ರಗಳೂ ಪೂರಕವಾಗಬೇಕೇ ಹೊರತು ಮನುಷ್ಯನ ಕಲಿಕೆಯ ಶಕ್ತಿಯನ್ನು ಕುಂಟಿತಗೊಳಿಸಬಾರದು ಎಂದವರು ಭಾವಿಸುತ್ತಾರೆ. ಅದೇ ರೀತಿ ಸಂಸ್ಕೃತಿಯ ನಾನಾ ನೆಲೆಗಳು ಹಾಗೂ ಶಿಕ್ಷಣ ಸಂಬಂಧ ಕೂಡಾ ಅವರನ್ನು ಚಿಂತನೆಗೆ ಹಚ್ಚಿದೆ. ಶಿಕ್ಷಣ ಎಂಬುದು ಸಂಸ್ಕೃತಿಯ ಸಹಜ ಹಾಗೂ ಸಂಸ್ಕರಿತ ಬೆಳವಣಿಗೆ ಎಂದು ಅವರು ಭಾವಿಸುತ್ತಾರೆ. ಆದುದರಿಂದಲೇ ಅವರು ಶಿಕ್ಷಣದ ಸಹಜ ಕ್ರಮವನ್ನು ಸರಳವಾಗಿ "ಗೊತ್ತಿರುವ ವಿಷಯದಿಂದ ಗೊತ್ತಿರದ ವಿಷಯದ ಕಡೆಗೆ ಅನ್ಯೋನ್ಯ ಸಂಬಂಧವಿರುವಂತೆ ಜ್ಞಾನವನ್ನು ಹೆಣೆಯುತ್ತಾ ಚಲಿಸುವುದು ನಿಜವಾದ ಶಿಕ್ಷಣ ಎನಿಸುತ್ತದೆ" ಎಂದು ಹೇಳುತ್ತಾರೆ. ಈ ಎಲ್ಲಾ ಅಂಶಗಳ ಮೂಲಕ ಅವರು ಗುಣಾತ್ಮಕ ಶಿಕ್ಷಣದ ಲಕ್ಷಣಗಳನ್ನು ಮತ್ತು ಅವು ಜೀವನದ ಸವಾಲುಗಳನ್ನು ಎದುರಿಸಲು ನೀಡಬೇಕಾದ ಸಾಮರ್ಥ್ಯದ ಕುರಿತಾಗಿ ಚಿಂತಿಸುತ್ತಾರೆ.

ಇಂದು ಶಿಕ್ಷಣದ ಕುರಿತಾಗಿ ಕೇವಲ ಗೊಣಗಾಡುವ ಬರಹಗಳೇ ಹೆಚ್ಚು ಹೊರಬರುತ್ತಿರುವ ಕಾಲದಲ್ಲಿ ಪ್ರೊ. ಜಿ.ಎಸ್.ಜಯದೇವ ಅವುಗಳ ಬಗ್ಗೆ ಧನಾತ್ಮಕವಾಗಿ ಚಿಂತಿಸಿ, ಶಿಕ್ಷಣ ಇರಬೇಕಾದ ಸಾಧ್ಯತೆಗಳ ಕುರಿತಾಗಿ ಅನುಭವ ಜನ್ಯ ತಾತ್ವಿಕತೆಯನ್ನು

ಎದುರಿಗಿರಿಸಿ ಚರ್ಚಿಸಿದ್ದಾರೆ. ಜ್ಞಾನಬದ್ಧ ತಾತ್ವಿಕತೆಯನ್ನು ತಮ್ಮ ಅನುಭವಜನ್ಯ ಸಲಹೆಗಳ ಪ್ರತಿಪಾದನೆಗೆ ಪೂರಕವಾಗಿ ಬಳಸಿದ್ದಾರೆ. ಇಂತಹ ಕೃತಿಯೊಂದಕ್ಕೆ ಯೋಗ್ಯ ಪ್ರತಿಕ್ರಿಯೆ ನೀಡುವಂತಹ ಶಿಕ್ಷಣ ತಜ್ಞ ನಾನಲ್ಲ, ಆದರೆ ನನ್ನ ಮೇಲಿನ ಪ್ರೀತಿ ವಿಶ್ವಾಸಗಳಿಂದ ಪ್ರೊ. ಜಯದೇವ ಅವರ 'ಶಿಕ್ಷಣ ಮತ್ತು ಸಮಾಜ' ಕೃತಿ ಬಗ್ಗೆ ನನ್ನ ಪ್ರತಿಕ್ರಿಯೆ ಕೇಳಿದಾಗ ಮೇಲಿನ ನನ್ನ ಮಾತುಗಳನ್ನು ಬರೆದಿದ್ದೇನೆ. ಇದೂ ಒಂದು ನೋಡುವ ಕ್ರಮ ಎಂದು ಓದುಗರು ತಿಳಿದು ಈ ಪುಸ್ತಕದ ಕುರಿತಾದ ಚರ್ಚೆಯನ್ನು ಮುಂದುವರಿಸಬೇಕೆಂದು ಕೇಳಿಕೊಳ್ಳುವೆ.

**ಡಾ.ಟಿ.ಆರ್.ಚಂದ್ರಶೇಖರ**

ಈ ಕೃತಿಯ ಬಗ್ಗೆ ನನಗೆ ಬಹಳ ಮೆಚ್ಚಿಗೆಯಾದ ಸಂಗತಿಯೆಂದರೆ ಲೇಖಕರು ಇದರಲ್ಲಿ ಶಿಕ್ಷಣ ಎಂದರೇನು, ಅದು ಹೇಗಿರಬೇಕು ಎಂಬುದನ್ನು ಕುರಿತಂತೆ ತಾವು ಯಾವ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೋ ಅದೇ ಸಿದ್ಧಾಂತವನ್ನು ಆಧರಿಸಿ ಸದರಿ ಕೃತಿಯನ್ನು ಅವರು ರಚಿಸಿರುವ ಕ್ರಮ. ನಾವು ಇಂದು ಅನುಸರಿಸುತ್ತಿರುವ ಶಿಕ್ಷಣದ, ಬೋಧನೆಯ, ನಂಬಿಕೆಗಳ ಮಿತಿಗಳ ಬಗ್ಗೆ ಬರೆಯುತ್ತಾ ಅವರು ಕೃತಿಯ ಒಂದು ಭಾಗದಲ್ಲಿ 'ನೆನಪಿಗಿಂತ ಅನುಭವ ಮುಖ್ಯ' ಎಂಬ ಮಾತನ್ನು ಬರೆದಿದ್ದಾರೆ. ನಮ್ಮ ಇಂದಿನ ಶಿಕ್ಷಣ ವ್ಯವಸ್ಥೆಯ ಬಗ್ಗೆ ಇದಕ್ಕಿಂತ ಕಟುವಾದ ಟೀಕೆ ಮತ್ತಾವುದಿರಲು ಸಾಧ್ಯ? ಈ ಕಾರಣದಿಂದಲೇ ಇರಬೇಕು ಶರಣರು ಜ್ಞಾನ ಮತ್ತು ಕ್ರಿಯೆಗಳ ನಡುವಿನ ಸಂಬಂಧದ ನೆಲೆಯಲ್ಲಿ ಜ್ಞಾನದ ಉತ್ಪಾದನೆಯ ಬಗ್ಗೆ ಮಾತಾಡುತ್ತಾರೆ. ಅಮುಗೆ ದೇವಯ್ಯ ಇದನ್ನು ಹೀಗೆ ವಿವರಿಸಿದ್ದಾನೆ:

ಜ್ಞಾನದಲರಿದಡೇನಯ್ಯಾ, ಕ್ರೀಯನಾಚರಿಸದನ್ನಕ್ಕ?
**ನೆನೆದ ಮಾತ್ರದಲ್ಲಿ ಅಹುದೆ, ಕಾರ್ಯದಲಲ್ಲದೆ?**
**ಕುರುಡ ಕಾಣ ಪಥವ, ಹೆಳವ ನಡೆಯಲರಿಯ, ಒಂದಿಲ್ಲದಿರ್ದಡೊಂದಾಗದು,**
**ಜ್ಞಾನವಿಲ್ಲದಿರ್ದ ಕ್ರೀ ಜಡನು, ಕ್ರಿಯಿಲ್ಲದ ಜ್ಞಾನ ವಾಗ್ಜಾಲ ಭ್ರಾಂತು,**
**ಇದು ಕಾರಣ,**
**ಸಿದ್ಧ ಸೋಮನಾಥ ಲಿಂಗವ ಕೂಡುವ ಶರಣಂಗೆ, ಎರಡೂ ಬೇಕು.** (ಸ.ವ.ಸಂ;೧: ೩.೩೪)

ನಮ್ಮ ಶಿಕ್ಷಣ ವ್ಯವಸ್ಥೆಯು ಹೀಗಾಗಿದೆ ಎಂಬುದನ್ನು ತಾವು ತಮ್ಮ ಕೃತಿಯಲ್ಲಿ ಸಿದ್ಧ ಮಾಡಿ ತೋರಿಸಿದ್ದೀರಿ. ತಾವು ಕೃತಿಯ ಒಂದು ಕಡೆ 'ಕೃತಕ ಕನಸುಗಳು' ಎಂಬ ಮಾತನ್ನು ಬಳಸಿದ್ದೀರಿ. ಹೌದು, ಕನಸುಗಳು ಕೂಡ ಕೃತಕವಾಗಿ ಬಿಟ್ಟರೆ ನಮ್ಮ ಬದುಕು ಮತ್ತೆಷ್ಟು ಕೃತಕವಾಗಿದ್ದಿರಬೇಕು?

ನಮ್ಮ ಶಿಕ್ಷಣ ವ್ಯವಸ್ಥೆಯು ಪರೀಕ್ಷೆ, ಅತಿ ಹೆಚ್ಚು ಅಂಕಗಳು, ನೆನಪಿನಿಂದ ಗಿಳಿ ಪಾಠ ಒಪ್ಪಿಸುವುದು, ಪಠ್ಯಕ್ರಮಕ್ಕೆ ಅತಿಯಾಗಿ ಅಂಟಿಕೊಳ್ಳುವುದು ಮುಂತಾದ ಮಿತಿಗಳಿಂದ ಸೊರಗುತ್ತಿದೆ. ತಾವು ಈ ಕೃತಿಯಲ್ಲಿ ಪ್ರತಿಪಾದಿಸಿರುವಂತೆ ನಮ್ಮ ಶಿಕ್ಷಣ ವ್ಯವಸ್ಥೆಯು ಮಕ್ಕಳಲ್ಲಿ 'ತನ್ನತನ'ವನ್ನು ರೂಪಿಸಿಕೊಳ್ಳಲು ಅಗತ್ಯವಾದ ತರಬೇತಿಯನ್ನು ನೀಡುತ್ತಿಲ್ಲ. ಬಸವಣ್ಣನ 'ಗಿಳಿಯೋದಿ ಫಲವೇನು' ಎಂದು ಆರಂಭವಾಗುವ ವಚನದಲ್ಲಿನ 'ಇದಿರ ಗುಣವ ಬಲ್ಲೆವೆಂಬರು, ತಮ್ಮ ಗುಣವನರಿಯರು' ಎಂಬ ಸಾಲು ಮನುಷ್ಯನಿಗೆ ತನ್ನತನವನ್ನು ರೂಪಿಸಿಕೊಳ್ಳುವುದು ಎಷ್ಟೊಂದು ಅವಶ್ಯಕ ಎಂಬುದನ್ನು ಹೇಳುತ್ತಿದೆ. ಆದರೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಇದಕ್ಕೆ ಅವಕಾಶವಿಲ್ಲದಂತಾಗಿದೆ.

ತಾವು ತಮ್ಮ ಕೃತಿಯಲ್ಲಿ ಸ್ಪಷ್ಟವಾಗಿ ಹೇಳಿರುವಂತೆ ನಮ್ಮ ಶಿಕ್ಷಣ ವ್ಯವಸ್ಥೆಯು 'ವ್ಯಕ್ತಿಗಳನ್ನು ವಿಕಲಾಂಗ'ರನ್ನಾಗಿ(crippling) ಮಾಡುತ್ತಿದೆ. ನಮ್ಮ ಪ್ರಜಾಪ್ರಭುತ್ವ ಗಟ್ಟಿಯಾಗಿ ರೂಪುಗೊಳ್ಳುತ್ತಿಲ್ಲ ಎಂಬ ಮಾತು ಕೇಳಿ ಬರುತ್ತಿರುತ್ತದೆ. ಅದರ ಮೂಲ ತನ್ನತನವನ್ನು ರೂಪಿಸಿಕೊಳ್ಳಲು ಅಗತ್ಯವಾದ ತರಬೇತಿಯನ್ನು ಮಕ್ಕಳಿಗೆ ನೀಡದ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿದೆ ಎಂದು ನಾನು ಭಾವಿಸಿದ್ದೇನೆ.

ತಾವು ಈ ಕೃತಿಯಲ್ಲಿ ಭಾರತೀಯ ಪಾರಂಪರಿಕ ಜ್ಞಾನ, ಗುರುಕುಲ ಪದ್ಧತಿ ಮುಂತಾದ ವಿಷಯಗಳ ಬಗ್ಗೆ ಬರೆದಿದ್ದೀರಿ. ತಾವು ಅವುಗಳನ್ನು ಪರಿಭಾವಿಸಿಕೊಂಡಿರುವ ಪರಿ ಸರಿ. ಆದರೆ ಅಲ್ಲಿರುವ ಅಪಾಯಗಳ ಬಗ್ಗೆ ನಾವು ಎಚ್ಚರದಿಂದಿರಬೇಕು. ಭಾರತೀಯ ಪರಂಪರೆ ಅಂದಾಗ ಅದು ಕೇವಲ 'ವೈದಿಕ' ವಾಗಿ ಬಿಡುವ ಸಾಧ್ಯತೆಯಿದೆ. ನಮ್ಮ ಭಾರತೀಯ ಪರಂಪರೆಯಲ್ಲಿ ಅವೈದಿಕವೂ ಇದೆ. ಇನ್ನು ಗುರುಕುಲ ಅನ್ನುವುದು ಹೇಗಿತ್ತು? ಅಲ್ಲಿ ಮಹಿಳೆಯರಿಗೆ, ದಲಿತರಿಗೆ, ಶೂದ್ರರಿಗೆ ಪ್ರವೇಶವಿರಲಿಲ್ಲ. ಉದಾಹರಣೆಗೆ ತಾವು ತಮ್ಮ ಕೃತಿಯಲ್ಲಿ ಉಲ್ಲೇಖಿಸಿರುವ 'ಸಾರೆಜಡೆಯ' ಅವರ ನಿದರ್ಶನವನ್ನು ನೋಡಬಹುದು. ಅದು ನಮ್ಮ ಪರಂಪರೆಯಲ್ಲವೆ? ಭಾರತೀಯ ಪರಂಪರೆಯ ಬಗ್ಗೆ, ಗುರುಕುಲದ ಬಗ್ಗೆ ಇತ್ಯಾತ್ಮಕವಾಗಿ ಮಾತನಾಡಿದ್ದನ್ನು ಕರ್ಮಠರು ದುರುಪಯೋಗ ಪಡಿಸಿಕೊಂಡುಬಿಡುತ್ತಾರೆ. 'ಎಲ್ಲವೂ, ಇಂದಿನ ವಿಜ್ಞಾನ, ತಂತ್ರಜ್ಞಾನ, ಕುಶಲತೆ – ಹೀಗೆ ಎಲ್ಲವೂ ಅಲ್ಲಿತ್ತು–ವೇದದಲ್ಲಿತ್ತು, ಸಂಸ್ಕೃತದಲ್ಲಿತ್ತು' ಎಂಬಂತಹ ಉಡಾಫೆಯ, ಒಣ ಮಾತುಗಳು ಉದರಲು ತೊಡಗುತ್ತವೆ. ಈ ಸಂಗತಿಗಳ ಬಗ್ಗೆ ಮಾತನಾಡುವಾಗ ನಮಗೆ ಅದರ ದುರುಪಯೋಗದ ಬಗ್ಗೆ ಎಚ್ಚರವಿರಬೇಕು.

ಪ್ರಾಥಮಿಕ ಶಿಕ್ಷಣದ ಬಗ್ಗೆ ಪ್ರಾಥಮಿಕ ಗಮನವನ್ನು ನಾವು ನೀಡುತ್ತಿಲ್ಲ. ವಿಶ್ವವಿದ್ಯಾಲಯಗಳು ಮತ್ತು ಅಲ್ಲಿರುವ ವಿದ್ವಾಂಸರು ಪ್ರಾಥಮಿಕ ಶಿಕ್ಷಣದ ಬಗ್ಗೆ ಸಂಶೋಧನೆ, ಚಿಂತನೆಯನ್ನು ನಡೆಸುತ್ತಿಲ್ಲ. ನಮ್ಮ ಪ್ರಾಥಮಿಕ ಶಾಲೆಗಳ ಪಠ್ಯ ಪುಸ್ತಕಗಳಲ್ಲಿ ಭಾಷೆ, ವಿಷಯವನ್ನು ಮಂಡಿಸುತ್ತಿರುವ ಕ್ರಮ, ಮೌಲ್ಯಮಾಪನ ಪರಿ ಮುಂತಾದವುಗಳ ಬಗ್ಗೆ ಸ್ವಲ್ಪ ಕಣ್ಣಾಡಿಸಿದರೆ ನಮಗೆ ಅಲ್ಲಿರುವ ಸಮಸ್ಯೆಗಳು ಅರಿವಿಗೆ ಬರುತ್ತವೆ. ನಮ್ಮ

ವಿಶ್ವವಿದ್ಯಾಲಯಗಳು ಇಂದು ಹಣ ಮಾಡುವ ದಾರಿಯ ಬಗ್ಗೆ ಯೋಚಿಸುತ್ತಿವೆ. ಖಾಸಗಿ ವಿಶ್ವವಿದ್ಯಾಲಯಗಳು ನಮಗೆ ಅವಶ್ಯಕವೆ ಎಂಬುದರ ಬಗ್ಗೆ ಗಂಭೀರವಾದ ಚರ್ಚೆಯೇ ನಡೆಯಲಿಲ್ಲ. ಎಲ್ಲವನ್ನೂ ಸರ್ಕಾರವೇ ನಿರ್ಧಾರ ಮಾಡಿಬಿಟ್ಟಿದೆ. ನಮ್ಮ ರಾಜ್ಯದಲ್ಲಿ ಡಜನ್ನುಗಟ್ಟಲೆ ಖಾಸಗಿ ವಿಶ್ವವಿದ್ಯಾಲಯಗಳಿಗೆ ಅನುಮತಿ ನೀಡುವ ತೀರ್ಮಾನ ಜನತಂತ್ರ ಕ್ರಮದಲ್ಲಿ ನಡೆಯಲಿಲ್ಲ. ಬೇರಿಗೆ ನೀರೆರೆಯದೆ ಮರದ ತುದಿಗೆ ನೀರೆರೆದರೆ ಆ ಮರವು ಗಟ್ಟುಮುಟ್ಟಾಗಿ ಬೆಳೆಯಲು ಸಾಧ್ಯವೇ? ನಮ್ಮ ಶಿಕ್ಷಣ ವ್ಯವಸ್ಥೆಯ ಬಗೆಗಿನ ನೀತಿ ಇಂತಹ ಸಮಸ್ಯೆಗೆ ಸಿಲುಕಿ ಬಿಟ್ಟಿದೆ. ನಮ್ಮ ವಿಶ್ವವಿದ್ಯಾಲಯದ ಶ್ರೇಷ್ಠ ಅರ್ಥಶಾಸ್ತ್ರಜ್ಞರು ಯಾಕೆ ಪ್ರೌಢಶಾಲೆಯ ಸಮಾಜ ವಿಜ್ಞಾನ ಪಠ್ಯ ಪುಸ್ತಕ ಬರೆಯಬಾರದು? ಅದೇ ರೀತಿಯಲ್ಲಿ ವಿಶ್ವವಿದ್ಯಾಲಯದ ಸಮಾಜಶಾಸ್ತ್ರ ಪ್ರಾಧ್ಯಾಪಕರೊಬ್ಬರು ಯಾಕೆ ನಮ್ಮ ಪ್ರಾಥಮಿಕ ಶಾಲೆಗೆ ಸಂಬಂಧಿಸಿದ ಪಾಠಗಳನ್ನು ಸಿದ್ಧ ಮಾಡಿಕೊಡಬಾರದು? ಈ ಮಾತನ್ನು ಯಾಕೆ ಹೇಳಬೇಕಾಯಿತೆಂದರೆ ನಮ್ಮ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಪಠ್ಯಪುಸ್ತಕಗಳಲ್ಲಿನ ಭಾಷಾ ಶೈಲಿ ಮತ್ತು ವಿಷಯ ಮಂಡನೆಯ ಕ್ರಮ ನೋಡಿದರೆ ವಾಕರಿಕೆ ಬರುತ್ತದೆ. ಈ ಬಗ್ಗೆ ನಾವು ಗಂಭೀರವಾಗಿ ಯೋಚಿಸಿದಂತೆ ಕಾಣಲಿಲ್ಲ.

ಒಟ್ಟಾರೆ ಜನರನ್ನು ಕೇಂದ್ರವನ್ನಾಗಿ ಮಾಡಿಕೊಂಡು ನಮ್ಮ ಅಭಿವೃದ್ಧಿ ನಡೆಯುತ್ತಿಲ್ಲ. ಅಲ್ಲಿ ವರಮಾನ, ಉತ್ಪಾದನೆ, ಬಂಡವಾಳ ಮುಂತಾದವು ಮುಖ್ಯವಾಗಿ ಜನರು ಮತ್ತು ಜನರ ಬದುಕು ಮರೆಯಾಗಿ ಬಿಟ್ಟಿದೆ–ಅದು ಆನುಷಂಗಿಕವಾಗಿದೆ. ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ನಮ್ಮ ಶಿಕ್ಷಣ ವ್ಯವಸ್ಥೆಯನ್ನು ನಾವು ಪರಿಭಾವಿಸಿಕೊಳ್ಳುತ್ತಿಲ್ಲ. ಅಲ್ಲಿ ಪರೀಕ್ಷೆ, ಅಂಕಗಳು, ಉದ್ಯೋಗ, ಪಠ್ಯಕ್ರಮ ಮುಂತಾದವು ಪ್ರಧಾನವಾಗಿ ಬಿಟ್ಟಿವೆ. ಮಕ್ಕಳು ಪ್ರಾಸಂಗಿಕವಾಗಿ ಬಿಟ್ಟಿದ್ದಾರೆ. ಇದನ್ನು ನೋಡಿದಾಗ ಇಲ್ಲಿರುವುದೆಲ್ಲ 'ಅಸಹಜ' ಅನ್ನಿಸುತ್ತದೆ.

ಕೊನೆಯದಾಗಿ ಇಂತಹ ಒಂದು ಕೃತಿಯನ್ನು ಸೃಜನಶೀಲವಾಗಿ ಚಿಂತಿಸಿ ಮತ್ತು ಅನುಭವಗಳನ್ನು ಬಳಸಿಕೊಂಡು ಸಿದ್ಧಪಡಿಸಿರುವ ತಮ್ಮನ್ನು ನಾನು ಅಭಿನಂದಿಸುತ್ತೇನೆ. ಅಧ್ಯಯನ ಮತ್ತು ಅನುಭವಗಳು ಸಂಯೋಜನೆಗೊಂಡಾಗ ಮಾತ್ರ ಒಂದು ಉತ್ತಮ ಕೃತಿ ರೂಪುಗೊಳ್ಳಲು ಸಾಧ್ಯ. ತಾವು ಸಿದ್ಧಪಡಿಸಿರುವ ಕೃತಿಯಲ್ಲಿ ಇಂತಹ ಸಂಯೋಜನೆಯನ್ನು ಕಂಡಿದ್ದೇನೆ.

ಇಂದಿನ ಶಿಕ್ಷಣ ಪದ್ಧತಿಯು ವ್ಯಕ್ತಿಯ ಬದುಕನ್ನು ಕಟ್ಟಿಕೊಳ್ಳಲು ನೆರವಾಗುತ್ತಿದೆಯೇ ಎಂಬುದುದೊಡ್ಡ ಪ್ರಶ್ನೆಯಾಗಿ ನಮ್ಮೆದುರು ನಿಲ್ಲುತ್ತದೆ. ಪ್ರೊ.ಜಿ.ಎಸ್.ಜಯದೇವ್‌ರವರು ಈ ಪುಸ್ತಕದಲ್ಲಿ ಚರ್ಚಿಸಿರುವ ಇಂತಹ ಹಲವು ಪ್ರಶ್ನೆಗಳು ಇಂದಿನ ಬದುಕಿಗೆ ಅತ್ಯಂತ ಪ್ರಸ್ತುತ. ಶಿಶುಕೇಂದ್ರಿತ ಶಿಕ್ಷಣದ ನಿಜವಾದ ಅನುಷ್ಠಾನ ಹೇಗೆ ಎಂಬುದನ್ನು ಸ್ವ-ಅನುಭವದ ಮೂಲಕ ಮನೋಜ್ಞವಾಗಿ ವಿವರಿಸಿದ್ದಾರೆ.

ಶಿಕ್ಷಣ ಇಂದು ಕೇವಲ ಮಾಹಿತಿ ನೀಡುವ ಮಾಧ್ಯಮವಾಗಿದೆ, ಆದರೆ ನಿಜವಾದ ಶಿಕ್ಷಣ ಬದುಕನ್ನು ಕಟ್ಟಿಕೊಳ್ಳಲು ಸಹಾಯ ಮಾಡಬೇಕು ಎಂಬ ಈ ಪುಸ್ತಕದ ಧ್ವನಿಯನ್ನು ನಾವು ಗಂಭೀರವಾಗಿ ಪರಿಗಣಿಸಲೇಬೇಕು.

**ಕಾಂತರಾಜು**
ಯೋಜನಾ ಸಂಯೋಜಕ
ದೀನಬಂಧು ಶಿಕ್ಷಕ ಸಂಪನ್ಮೂಲ ಕೇಂದ್ರ
ಚಾಮರಾಜನಗರ

ಜಿ.ಎಸ್. ಜಯದೇವರವರ 'ಶಿಕ್ಷಣ ಮತ್ತು ಸಮಾಜ' ಪುಸ್ತಕವನ್ನು ಆಸಕ್ತಿಯಿಂದ ಓದಿದ್ದೇನೆ. ಒಂದು ದೇಶದ ಅಭಿವೃದ್ಧಿಯಲ್ಲಿ ಮಾನವ ಸಂಪನ್ಮೂಲ ಎಷ್ಟರ ಮಟ್ಟಿಗೆ ಮುಖ್ಯವೆಂಬುವುದನ್ನು ಮನಗಾಣುವ ಜೊತೆಗೆ ಈ ಬಗ್ಗೆ ನಾವು ಕಾಳಜಿ ಯುಳ್ಳವರಾಗಿದ್ದೇವೆಯೆ ಎಂಬ ಪ್ರಶ್ನೆಗೆ ನಮ್ಮನ್ನು ಮುಖಾಮುಖಿಯಾಗುವ ಹಾಗೆ ಮಾಡುತ್ತದೆ ಈ ಪುಸ್ತಕ.

ಗುಣಾತ್ಮಕ ಶಿಕ್ಷಣ ಇಂದಿನ ಶಿಕ್ಷಣ ವ್ಯವಸ್ಥೆಯ ಮುಖ್ಯಗುರಿಯಾಗಿದೆ. ಅಧ್ಯಾಪಕರಲ್ಲಿ ವಿಷಯದ ಬಗ್ಗೆ ಆಳವಾದ ಅರಿವು, ಮೌಲ್ಯಗಳು, ಸ್ವಂತಿಕೆ ಇವು ಇದ್ದರೆ ಮಾತ್ರ ಮಗುವಿಗೆ ಏನನ್ನಾದರೂ ಕೊಡಲು ಸಾಧ್ಯ. ಈ ಪುಸ್ತಕವನ್ನು ಪೋಷಕರು ಹಾಗೂ ಸಮಾಜದ ಎಲ್ಲಾ ವಿದ್ಯಾವಂತರು ಓದಲೇಬೇಕು.

**ಪ್ರಕಾಶ್. ಎಸ್.**
ಮುಖ್ಯ ಶಿಕ್ಷಕ,
ದೀನಬಂಧು ಸೃಜನಶೀಲ ಕಲಿಕಾ ಕೇಂದ್ರ,
ಚಾಮರಾಜನಗರ

# ಅಭಿರುಚಿ ಪ್ರಕಾಶನ

PH.9980560013
ನಂ. ೩೮೬, ೧೪ನೆಯ ಮುಖ್ಯರಸ್ತೆ, ೩ನೆಯ ಅಡ್ಡರಸ್ತೆ, ಸರಸ್ವತಿಪುರಂ, ಮೈಸೂರು - ೯
E mail: abhiruchiprakashana@yahoo.co.in tingalu09@gmail.com

## ನಮ್ಮ ಕೆಲವು ಪ್ರಕಟಣೆಗಳು

| ಪುಸ್ತಕದ ಹೆಸರು | ಲೇಖಕರು | ಬೆಲೆ |
|---|---|---|
| ಚದುರಂಗರ ಸಮಗ್ರ ನಾಟಕಗಳು | ಚದುರಂಗ | 200 |
| ಚದುರಂಗರ ಸಮಗ್ರ ಕಥೆಗಳು | ಚದುರಂಗ | 300 |
| ಸರ್ವಮಂಗಳಾ | ಚದುರಂಗ | 150 |
| ಉಯ್ಯಾಲೆ | ಚದುರಂಗ | 125 |
| ಹೆಜ್ಜಾಲ | ಚದುರಂಗ | 200 |
| ವೈಶಾಖ | ಚದುರಂಗ | 225 |
| ಪ್ರೊ.ಎಂ.ಡಿ.ಎನ್. | ಸಂ.ವೀರಭದ್ರಪ್ಪ ಬಿಸ್ಲಳ್ಳಿ | 200 |
| ಕಾವೇರಿ ತೀರ್ಪು ಅನ್ಯಾಯ ಎಲ್ಲಿ | ಎಚ್.ಎಲ್.ಕೇಶವಮೂರ್ತಿ | 10 |
| ಗೌರವಾನ್ವಿತ ದಗಾಕೋರರು (ಅಣಕ) | ಎಚ್.ಎಲ್.ಕೇಶವಮೂರ್ತಿ | 100 |
| ಗಾಂಧಿ ಅವತ್ತು ಹುಟ್ಟಬಾರದಿತ್ತು | ಎಚ್.ಎಲ್.ಕೇಶವಮೂರ್ತಿ | 85 |
| ದೇವರುಗಳ ಟೈಮೇ ಸರಿ ಇಲ್ಲ | ಎಚ್.ಎಲ್.ಕೇಶವಮೂರ್ತಿ | 60 |
| ಎಂಗಾರ ಟಿಕೆಟ್ ಕೊಡಿ | ಎಚ್.ಎಲ್.ಕೇಶವಮೂರ್ತಿ | 75 |
| ಪಾತಕಿಯೇ ಪರಮಾತ್ಮ | ಎಚ್.ಎಲ್.ಕೇಶವಮೂರ್ತಿ | 85 |
| ಹಳಗನ್ನಡ ವಿಶೇಷ ಶಬ್ದಕೋಶ (2ನೇ ಮು.) | ಪ್ರೊ.ಎಲ್. ಬಸವರಾಜು | 400 |
| ಸಜ್ಜನ (ಹಾ.ಮಾ.ನಾ. ನೆನಪುಗಳು) | ಡಾ.ಕೃಷ್ಣಹಾಸನ | 45 |
| ಮುಂಬಯಿ ಕರ್ನಾಟಕದಲ್ಲಿ ಸವಿನಯ ಕಾನೂನು ಭಂಗ ಚಳುವಳಿ | ಡಾ.ಜಿ.ಎ. ಬಿರಾದಾರ | 260 |
| ಶಾಸ್ತ್ರೀಯ ಕನ್ನಡ ಭಾಷೆ | ಡಾ.ಆರ್ಶಿಯಸ್ ಸುಂದರಂ | 35 |
| ಕೆಂಬಾರೆ | ಬಿ. ರಾಜಣ್ಣ | 50 |
| ಮೈಸೂರು ನೂರಿನ್ನೂರು ವರ್ಷಗಳ ಹಿಂದೆ (೩.ನೆ.ಮು) | ಪ್ರೊ.ಪಿ.ವಿ.ನಂಜರಾಜ ಅರಸು | 500 |
| ಪರಿಸರ ಜಿಜ್ಞಾಸೆ | ಡಾ.ಕುಶಾಲ ಬರಗೂರು | 300 |
| ಕರ್ನಾಟಕ ಭೂಷಣ ಶ್ರೀನಿವಾಸರಾವ್ ಕೌಜಲಗಿ | ಡಾ.ಜಿ.ಎ. ಬಿರಾದಾರ | 125 |
| ಪುಲಿಗೆರೆ ಸೋಮ ವಿರಚಿತ ಸೋಮೇಶ್ವರ ಶತಕ | ವಿ. ದೇವರಾಜ್ ಕನಕವಾಡ | 50 |
| ವೀರಶೈವ ಸಾಹಿತ್ಯ ಒಂದು ವಿಶೇಷ ಅಧ್ಯಯನ | ವಿ. ದೇವರಾಜ್ ಕನಕವಾಡ | 150 |
| ಗ್ರಾಮಲಕ್ಷ್ಮಿ (ಕಾದಂಬರಿ) | ಡಾ.ಎಂ. ರಾಮಕೃಷ್ಣ | 270 |
| ಅಲಮೇಲಮ್ಮನ ಶಾಪ:ಒಂದು ಶವ ಪರೀಕ್ಷೆ (೩.ನೆ.ಮು) | ಪ್ರೊ.ಪಿ.ವಿ. ನಂಜರಾಜ ಅರಸು | 150 |
| ಬಡವರ ಮಗಳು ಹೆಣ್ಣಲ್ಲ (ಕಥಾ ಸಂಕಲನ) | ಬಾನು ಮುಷ್ತಾಕ್ | 120 |
| ಕುವೆಂಪು ಅವರ ಸ್ತ್ರೀ ಪಾತ್ರ ಸೃಷ್ಟಿ (ಪಿಎಚ್.ಡಿ.ಪ್ರಬಂಧ) | ಡಾ.ಜೆ.ಎಸ್. ಉಷಾದೇವಿ | 275 |
| ವೈದೇಹಿ ಏನಾದಳೋ ! (ಕಾದಂಬರಿ) | ಎಸ್.ಜೆ. ಸುಜಾತ | 120 |

| | | |
|---|---|---|
| ನಮ್ಮ ಸುತ್ತಿನ ಗಾದೆಗಳು ಭಾಗ - ೨ | ಪ್ರೊ. ಸುಧಾಕರ | 50 |
| ಚಾಪ್ಲಿನ್ (ಪುರ್ನಮುದ್ರಣ) | ಕುಂ. ವೀರಭದ್ರಪ್ಪ | 220 |
| ದಾಸಸಾಹಿತ್ಯ ದರ್ಪಣ | ಡಾ.ಟಿ.ಎನ್.ನಾಗರತ್ನ | 100 |
| ಮರೆಯಲಾಗದ ಮಹಾನುಭಾವ ನಾಲ್ವಡಿ ಕೃಷ್ಣರಾಜ ಒಡೆಯರು | ಪ್ರೊ.ಪಿ.ವಿ. ನಂಜರಾಜ ಅರಸು | 50 |
| ಜೀವಕೋಶ ವೈದ್ಯಲೋಕದ ಕಥನ | ಡಾ.ಎಚ್.ಎಸ್. ಅನುಪಮಾ | 125 |
| ನೀನ್ಯಾಕೋ, ನಿನ್ನ ಹಂಗ್ಯಾಕೋ, ಮಾವ | ಎಚ್.ಎಲ್. ಕೇಶವಮೂರ್ತಿ | 90 |
| ಇಸ್ಪೀಟ್ ನ್ಯಾಯ | ಎಚ್.ಎಲ್. ಕೇಶವಮೂರ್ತಿ | 70 |
| ದಸಂಸ ಹೋರಾಟದ ಪಯಣ | ಡಾ.ಎಸ್. ನರೇಂದ್ರಕುಮಾರ್ | 200 |
| ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಸೋಲಿಗ ಬುಡಕಟ್ಟು ಜನಾಂಗದ ಅಭಿವೃದ್ಧಿಗೆ ಸರ್ಕಾರದ ಕಾರ್ಯಕ್ರಮಗಳು (ಪಿಎಚ್.ಡಿ ಪ್ರಬಂಧ) | ಡಾ.ಸುನಂದಮ್ಮ.ಎನ್ | 310 |
| ಒಡಲಾಳ (ಕಿರು ಕಾದಂಬರಿ) ಪಠ್ಯ | ದೇವನೂರು ಮಹಾದೇವ | 30 |
| ಅಖಂಡ ಕರ್ನಾಟಕದ ಕೋ.ಚಿ. | ಸಂ.ಅಭಿರುಚಿ ಗಣೇಶ್, ವಿ.ದೇವರಾಜ್‌ಕನಕವಾಡ | 100 |
| ರಾಮಾಯಣದಲ್ಲಿನ ಪಾತ್ರಗಳು | ಪ್ರೊ.ಎಂ.ಡಿ.ನಂಜುಂಡಸ್ವಾಮಿ | 50 |
| ಉರಿದ ಪಂಜು (ಪ್ರೊ.ಕೆ.ರಾಮದಾಸ್‌ಕುರಿತ ಲೇಖನಗಳು) | ಸಂ.ಡಿ.ಎಸ್.ನಾಗಭೂಷಣ, ಎಚ್.ಎಲ್.ಕೇಶವಮೂರ್ತಿ | 375 |
| ಬಂಡಾಯದ ಬರಗೂರು | ಸಂ.ಜಿ.ಆರ್.ತಿಪ್ಪೇಸ್ವಾಮಿ | 450 |
| **Visage in the Dark & Other Stories : Trans by Dr. Krishnamurthy Hanur** | Vijayasheshadri | 150 |
| ತೇಜಸ್ವಿ ಬದುಕಿದ್ದಾರೆ (ಜೀವನಚರಿತ್ರೆ) | ಕೀರ್ತಿ ಕೋಲ್ಗಾರ್ | 100 |
| 3ಜಿ ಸರ್ಕಲ್ (ಕಾದಂಬರಿ) | ಕೀರ್ತಿ ಕೋಲ್ಗಾರ್ | 90 |
| ಗಂಡಕೀ ಝೋನ್ (ಕಥಾಸಂಕಲನ) | ಡಾ. ಕಣಾದ ರಾಘವ | 120 |
| ಹಸೀನಾ ಮತ್ತು ಇತರ ಕಥೆಗಳು | ಬಾನುಮುಸ್ತಾಕ್ | 400 |
| ಎಂದಿಗೂ ಹೊಸದು | ಪ್ರೊ.ರಾಜೇಂದ್ರ ಚೆನ್ನಿ | 180 |
| ಅಲೆಮಾರಿ ಇರುಳು (ಕವನ ಸಂಕಲನ) | ವಿಜಯಶ್ರೀ ಹಾಲಾಡಿ | 40 |
| ತಾಯ್ನುಡಿಯ ಸಂಕಟಕ್ಕೆ ದನಿಯಾಗಿ | ಸಂ.:ರೂಪ ಹಾಸನ | 150 |
| ಮರಣ ದಂಡನೆ (ಕಾದಂಬರಿ) | ಪ್ರೊ.ಬರಗೂರು ರಾಮಚಂದ್ರಪ್ಪ | 75 |
| ಬಿಡುಗಡೆ (ಕಾದಂಬರಿ) | ಸಂದೀಪ್ ಹೆಗ್ಡೆ | 225 |
| ವೋಡ್ಕಾ ವಿತ್ ವರ್ಮ | ಕನ್ನಡಕ್ಕೆ :ಸೃಜನ್ | 250 |
| ಹೆಣ್ಣುಸಿರ ತಲ್ಲಣಗಳು | ಸಂ.: ರೂಪ ಹಾಸನ | 120 |
| ಜಾಗತೀಕರಣ, ಶಿಕ್ಷಣ ಮತ್ತು ಸಮಾಜ | ಜಿ.ಎಸ್.ಜಯದೇವ | 130 |
| ಸಿಂಗರ್ ಕಥೆಗಳು | ಕನ್ನಡಕ್ಕೆ:ಓ.ಎಲ್.ನಾಗಭೂಷಣ ಸ್ವಾಮಿ | ಅಚ್ಚಿನಲ್ಲಿ |
| ಸಾವು ಮತ್ತು ಇತರ ಕಥೆಗಳು (ಟಾಲ್‌ಸ್ಟಾಯ್ ಅವರ) | ಓ.ಎಲ್.ನಾಗಭೂಷಣ ಸ್ವಾಮಿ | ಅಚ್ಚಿನಲ್ಲಿ |
| ಬೊಗಸೆ ಜಲ ಒಂದು ಬೀಜಕ್ಕಾಗಿ... | ಜೀವಯಾನದ ಎಸ್.ಮಂಜುನಾಥ್ | ಅಚ್ಚಿನಲ್ಲಿ |
| ಮಾಂಜಿ ರವಾ ಫ್ರೈ (ಕಥಾಸಂಕಲನ) | ಬಿ.ಎಂ.ಹನೀಫ್ | ಅಚ್ಚಿನಲ್ಲಿ |
| ಮಲಾಲ ಯೂಸಫ್ಝೈಜಿಯಾ ಮೂಲ:ಇನ್‌ಸೈಟ್‌ಪಬ್ಲಿಕ | ಅನುವಾದ : ಮೀನಾ ಮೈಸೂರು | ಅಚ್ಚಿನಲ್ಲಿ |



ನಮ್ಮ ಬದುಕು, ವ್ಯಕ್ತಿತ್ವ, ಪರಿಸರ, ಆದರ್ಶಗಳು- ಮಿತಿಗಳು ಇತ್ಯಾದಿಗಳೊಡನೆ ಶಿಕ್ಷಣದ ಸಂಬಂಧವನ್ನು ಮುಖಾಮುಖಿಯಾಗಿ ವಿವೇಚಿಸಿ ವಿಶ್ಲೇಷಿಸುವ ಇಲ್ಲಿಯ ಕ್ರಮಕ್ಕೆ ಅನುಭವಗಳನ್ನೇ ಆಧಾರವಾಗಿಸಿ ಸಮಸ್ಯೆಗಳಿಗೆ ಪರಿಹಾರವನ್ನೂ ಸೂಚಿಸಿರುವುದ ಗಮನಾರ್ಹವಾಗಿದೆ. ಮನುಷ್ಯನ ಮನಸ್ಸಿನಲ್ಲಿರುವ ಎಲ್ಲ ದೌರ್ಬಲ್ಯಗಳನ್ನು ಬಂಡವಾಳ ಮಾಡಿಕೊಂಡ ಜಾಗತೀಕರಣ, ಕೊನೆಯಿಲ್ಲದ ತಾಂತ್ರಿಕ ಪ್ರಗತಿ ದುರಾಸೆಗಳನ್ನು ಹೆಚ್ಚಿಸಿ, ಬದುಕಿನ ಕೃತಕ ಅವಶ್ಯಕತೆಗಳ ಪೂರೈಕೆಗೆ ಮಕ್ಕಳನ್ನು ಸಿದ್ಧಗೊಳಿಸುತ್ತ, ಸರಳ ಜೀವನದಲ್ಲಿ ಸಂತೋಷವಿದೆಯೆಂಬ ಸತ್ಯವನ್ನು ತಿಳಿಸಿಕೊಡದಿರುವ ಬಗೆಗಿನ ಲೇಖಕರ ವಿಷಾದ ಶಿಕ್ಷಣದಲ್ಲಿ ನಿಜವಾದ ಆಸಕ್ತಿಯುಳ್ಳವರ ಕಣ್ಣು ತೆರೆಸುವಂತಿದೆ.

**- ಚೆನ್ನವೀರಕಣವಿ, ಧಾರವಾಡ.**

ಪ್ರೊ. ಜಿ.ಎಸ್.ಜಯದೇವ ಅವರ 'ಜಾಗತೀಕರಣ, ಶಿಕ್ಷಣ ಮತ್ತು ಸಮಾಜ' ಎಂಬ ಕೃತಿಯು ಸಮಕಾಲೀನ ಸಂದರ್ಭದ ಶೈಕ್ಷಣಿಕ ಬಿಕ್ಕಟ್ಟುಗಳನ್ನು ಸ್ಥಳೀಯತೆ ಮತ್ತು ನೈತಿಕತೆಗಳ ನೆಲೆಯಿಂದ ಪರಿಶೀಲಿಸುವ ಒಂದು ಮೌಲಿಕ ಕೃತಿಯಾಗಿದೆ. ಜಾಗತೀಕರಣದ ಪ್ರಭಾವದಲ್ಲಿ ಒಟ್ಟು ಸಮಾಜದಲ್ಲಿ ಎದುರಾಗುತ್ತಿರುವ ಆತಂಕಗಳನ್ನು ಅನಾವರಣಗೊಳಿಸುತ್ತಲೇ ನಮ್ಮ ನಡುವಿನ ಶಿಕ್ಷಣ ಹೇಗಿರಬೇಕೆಂಬ ಮೌಲ್ಯ ಬದ್ಧತೆಯನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಶಿಕ್ಷಣದ ತಾತ್ವಿಕ ನಿರೀಕ್ಷೆಗಳು ಮತ್ತು ಅನುಷ್ಠಾನದಲ್ಲಿರುವ ಕಂದಕವನ್ನು ಲೇಖಕರು ಕಳವಳದಿಂದ ಗಮನಿಸಿದ್ದಾರೆ. ವಿವೇಕಾನಂದರ ಶೈಕ್ಷಣಿಕ ಆಶಯಕ್ಕನುಗುಣವಾದ ಅಭಿಪ್ರಾಯಗಳನ್ನು ಪ್ರತಿಪಾದಿಸಿದ್ದಾರೆ. ಶಿಕ್ಷಣವೆಂದರೆ ಕೇವಲ ಮಾಹಿತಿಗಳನ್ನು ತುಂಬುವ ಉಗ್ರಾಣವಲ್ಲವೆಂಬ ಭಾವನೆಯಿಂದ ಪ್ರತಿಪಾದಿತವಾಗುವ ಅನೇಕ ಅಂಶಗಳನ್ನು ಸಾಧಾರ ಸಮೇತ ನಿರೂಪಿಸಿದ್ದಾರೆ.

ಒಟ್ಟಾರೆ ಹೇಳುವುದಾದರೆ ಕಳವಳ ಮತ್ತು ಕಳಕಳಿಗಳ ಮೂಲಕ ಶಿಕ್ಷಣ ಮತ್ತು ಸಮಾಜದ ಮೌಲ್ಯಬದ್ಧ ಸಂಬಂಧವನ್ನು ಜಯದೇವ್ ಅವರು ಪ್ರಾಮಾಣಿಕವಾಗಿ ಕಟ್ಟಿಕೊಟ್ಟಿದ್ದಾರೆ.

- ಪ್ರೊ. ಬರಗೂರು ರಾಮಚಂದ್ರಪ್ಪ

**ಅಭಿರುಚಿ ಪ್ರಕಾಶನ**
ನಂ. ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು-೯